॥ ಶ್ರೀ ಹರಿಃ ಓಂ ॥

# ಶ್ರೀ ವಿಜಯದಾಸರು

ಸ್ತೋತ್ರಗಳು ೩೮

## ಸಂಕ್ಷಿಪ್ತ ಜೀವನ ಚರಿತ್ರೆ

ಜಯ ಸಂ|| ಅಕ್ಷಯ್ಯತೃತೀಯೆ.


ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಾಲೆ

ಪುಷ್ಪ ೨] — [ಕಾಣಿಕೆ [illegible]

ಸಂಪಾದಕರು ಪ್ರಕಾಶಕರು,

[illegible] ವೆಂಕಟರಾವ ಕುಲಕರ್ಣಿ ಗೊರಾಬಾಳ

ಲಿಂಗಸೂಗೂರ [illegible] ರಾಯಚೂರ (ಜಿ)

[illegible]

# FOREWORD

The contributions rendered by Karnataka to the devotional and spiritual literature of India are substantial and the role played by the Haridasas or the mystic saints of Vaishnava traditions in this sphere is resplendent. The Haridasas belong to a galaxy of devout aspirants known as the Dasakuta, who trace their origin from the renowned teacher Purnaprajna or Madhvacharya, the founder of the Dvaita School of philosophy. The literature produced by these Haridasas which constitutes a characteristic phase of the Kannada literature, is vast and varied Most of this literature remains unpublished.

Shri Gorebal Hanumantha Rao of Lingsugur is an ardent soul who has devoted over thirty years of his life for bringing to light the hidden treasures of the Haridasa

literature. He has made an extensive collection of the scattered sources of this literature, studied them carefully and published a series of books on the subject. The service he has thus rendered to this noble cause is monumental. An indefatiguable worker of exemplary zeal, he has undertaken to publish further books in this field. One of these is the life of Vijaya Dasa.

Supreme among the luminaries of Dasa Kuta, next only to his mighty master, the immortal Purandara Dasa, Vijaya Dasa was a transcendal genius that inspired generations of aspirants. The literature left behind by Vijaya Dasa, consisting of the Kirtanas, Suladis, Ugabhogas,etc. is highly impressive stirring the devotional hearts to their innermost depths by its direct appeal. An authentic biography of this great mystic was a desideratum. The present publication fulfils this long felt need.

Vijaya Dasa was born at Chikalaparavi in the Manvi Taluk of the Raichur District in Sake 1604 Rudhirodgarin. He lived a chequered life of 73 years and passed away

in Sake 1677 Yuva. Born of poor parents he had his trials and tribulations. Chastened by these ordeals he emerged an accomplished mystic of high order, crowned with divine grace. He visited the Kasi Kshetra three times. In his second trip to this holy place he was initiated into the fold of the Haridasas by Purandara Dasa manifesting himself in a dream. He toured all over India, incessantly preaching the glory of Lord Vithala and the ways and means of attaining Him. He wielded considerable influence among the rank and file of the society, whom he elevated by his ethical and spiritual teachings He enriched the Kannada language and literature by his sayings and songs which are the spontaneous outpourings of his sensitive mind

The life of Vijaya Dasa is thus full of interesting incidents and the author of the present biography has done fair justice to it, by relating them in an absorbingly lucid style overflowing with sentiment. The language is saturated with the words and phrases emanating from Vijaya Dasa himself and his compeers, testifying to the profound study on the part of the author.

A noteworthy feature of the present biography is its critical insight. The author has made a comprehensive collection of the sources touching the manifold aspects of Vijaya Dasa's life and presented them in a systematic manner citing his authorities unsparingly at each and every stage. The results arrived at are meticulously accurate and each and every detail is based either on the autobiographical allusions of Vijaya Dasa himself or on the contemporary and proximate accounts of his immediate disciples and followers. Scholars interested in modern methods of research will be rewarded by a perusal of this book

In the course of my epigraphical tour in the Raichur District I had an occasion to meet Shri Gorebal Hanumantharao and acquaint myself with his work. The above few words are a token of my cursory appreciation of his work.

Camp: MANVI,
Date 7-3-1954.

Desai Panduranga Rao,
M. A.

# ಕನ್ನಡಭಾಷಾಂತರ

ಭಾರತದ ಭಕ್ತಿಸಂಪನ್ನ ಮತ್ತು ಅಧ್ಯಾತ್ಮಿಕ ವಾಙ್ಮಯದಲ್ಲಿ ಕರ್ನಾಟಕವು ಸಲ್ಲಿಸಿದ ಸೇವಾರೂಪವಾದ ಕಾಣಿಕೆಯು, ಚಿರ ಸ್ಥಾಯಿಯಾದದ್ದು ಸಮೃದ್ಧಿಯುಳ್ಳದ್ದು ಇರುತ್ತದೆ. ಅಧ್ಯಾತ್ಮ ತಿರುಳನ್ನು ಅರಿತವರಾದ ಪರಂಪರಾಗತ ವೈಷ್ಣವ ಸಂಪ್ರದಾಯವುಳ್ಳ ಹರಿದಾಸರು (ಗುಹ್ಯ ಸಂತಮಹಾತ್ಮರು) ಈ ವಿಷಯದಲ್ಲಿ ಮಾಡಿ ತೋರಿದ ಕೆಲಸವು ಬಹು ಪ್ರಕಾಶಮಾನವಾಗಿರುತ್ತದೆ. ಈ ಹರಿ ದಾಸರು ಭಕ್ತಿಸಂಪನ್ನ ಮಹತ್ವಾಕಾಂಕ್ಷೆಯುಳ್ಳ ದಾಸಕೂಟ ಸಮೂಹಕ್ಕೆ ಸೇರಿರುತ್ತಾರೆ. ಇವರು ದ್ವೈತ ಸಿದ್ಧಾಂತ ತತ್ತ್ವಜ್ಞಾನ ಪುನರುಜ್ಜೀವನಗೊಳಿಸಿ ಸಂಸ್ಥಾಪಕರಾದ ಕೀರ್ತಿವೆತ್ತ ಗುರುಗಳಾದ ಪೂರ್ಣ ಪ್ರಜ್ಞರೆನಿಪ ಶ್ರೀ ಮಧ್ವಾಚಾರ್ಯರೇ ತಮ್ಮ ಮೂಲ ಪುರುಷರೆಂದು (ಅಥವಾ ಹರಿದಾಸ ತತ್ತ್ವಜ್ಞಾನಕ್ಕೆ ತಳಹದಿಯಾದ ಶ್ರೀ ಮಧ್ವಾಚಾರ್ಯರ ತತ್ತ್ವವೆ ಮೂಲವೆಂದು) ಹೇಳುತ್ತಾರೆ. ಈ ಹರಿದಾಸರಿಂದ ರಚಿತವಾದ ಸಾಹಿತ್ಯವು, ಕನ್ನಡ ಸಾಹಿತ್ಯದ ವಿಶಿಷ್ಟ ಗುಣಲಕ್ಷಣ ಉಳ್ಳದ್ದು ಅತಿ ವಿಶಾಲವೂ ಬಹುಮುಖವೂ ಆಗಿದೆ. ಇಂಥ ಸಾಹಿತ್ಯದ ಬಹುಭಾಗವು ಇನ್ನು ಅಚ್ಚಾಗದೆ ಉಳಿದಿರುತ್ತದೆ

ಲಿಂಗಸೂಗೂರಿನ ಶ್ರೀ ಗೊರಾಬಾಳ ಹನುಮಂತರಾಯರು ಬಹು ಉತ್ಸಾಹೀ ಜೀವಿಗಳಾಗಿದ್ದು, ತಮ್ಮ ಜೀವನದಲ್ಲಿ ಮೂವತ್ತು ವರ್ಷದಕಿಂತ ಹೆಚ್ಚಿನ ಆಯುಸನ್ನು ಹರಿದಾಸ ಸಾಹಿತ್ಯದ ಗೂಢ ವಾದ ಭಾಂಡಾರವನ್ನು ಬೆಳಕಿಗೆ ತರಲು ಮೀಸಲಾಗಿರಿಸಿದ್ದಾರೆ. ಇವರು ಈ ಸಾಹಿತ್ಯದ ಚದರಿದ ಮೂಲ ಕೃತಿಗಳನ್ನು ವಿಸ್ತಾರ ವಾಗಿ ಸಂಗ್ರಹಿಸಿ ಜಾಗರೂಕತೆಯಿಂದ ಮನಃಪೂರ್ವಕವಾಗಿ ಅಭ್ಯಸಿಸಿ ಆಯಾ ವಿಷಯಗಳ ಮೇಲೆ ಗ್ರಂಥಾವಳಿಗಳನ್ನು ಪ್ರಕಟ ಗೊಳಿಸಿದ್ದಾರೆ. ಇಂಥ ಘನವಾದ ಮತ್ತು ಪವಿತ್ರವಾದ ಉದ್ದೇಶ ಕ್ಕಾಗಿ ಅವರು ಸಲ್ಲಿಸಿದ ಸೇವೆಯು, ಭವ್ಯವೂ ವಿಶಾಲವೂ ಅದ್ಭು ತವೂ ಜ್ಞಾಪಕಾರ್ಹವಾಗಿದೆ. ಅವಿಶ್ರಾಂತವಾಗಿ ದುಡಿಯು ವವರೂ ಅನುಕರಣೀಯವಾದ ಆದರ್ಶ ಯೋಗ್ಯ ಉತ್ಸುಕತೆ

ಯುಳ್ಳವರೂ ಆದ ಇವರು ಈ ಸಾಹಿತ್ಯ ಕ್ಷೇತ್ರದಲ್ಲಿ ಇನ್ನು ಹೆಚ್ಚಿನ ಪುಸ್ತಕಗಳನ್ನು ಪ್ರಕಟಗೊಳಿಸುವ ಕೆಲಸವನ್ನು ಕೈಕೊಂಡಿದ್ದಾರೆ. ಇಂಥವುಗಳಲ್ಲಿ ಶ್ರೀ ವಿಜಯದಾಸರ ಜೀವನ ಚರಿತ್ರೆ ಒಂದಾಗಿದೆ.

ದಾಸಕೂಟದ ಪ್ರತಿಭಾಶಾಲಿಗಳಲ್ಲಿ ಶ್ರೇಷ್ಠರಾದ ತತ್ವಶಾಲಿಗಳೂ ಅಮರರೂ ಎನಿಸಿದ ತಮ್ಮ ಘನತೆಯ ಗುರುಗಳಾದ ಶ್ರೀ ಪುರಂದರದಾಸರನ್ನು ಬಿಟ್ಟರೆ ದಾಸಕೂಟದಲ್ಲಿ ಎರಡನೇದವರಾಗಿ ವಿದ್ವದ್ರತ್ನಗಳಲ್ಲಿ ಶ್ರೇಷ್ಠತಮರೆನಿಸಿದ ಶ್ರೀ ವಿಜಯದಾಸರು. ಅತೀಂದ್ರಿಯವೂ ಜ್ಞಾನಗಮ್ಯವೂ ಆದ ತಮ್ಮ ಬುದ್ಧಿ ವೈಭವದಿಂದ ಉತ್ಕಟ ಭಕ್ತ್ಯೇಚ್ಛಾವುಳ್ಳವರ ಪೀಳಿಗೆಗಳನ್ನು ಹುರಿದುಂಬಿಸಿದ್ದಾರೆ. ಶ್ರೀ ವಿಜಯದಾಸರು ಬರೆದಿಟ್ಟ ಸಾಹಿತ್ಯವು ಕೀರ್ತನೆಗಳು ಸುಳಾದಿಗಳು ಮತ್ತು ಉಗಾಭೋಗ ಮೊದಲಾದವುಗಳಿಂದ ಕೂಡಿಕೊಂಡು, ಮನಸ್ಸಿನಮೇಲೆ ಬಹಳ ಪರಿಣಾಮಮಾಡುವಂತಹದು. ಹೃದಯಸ್ಫೂರ್ತಿಯಾಗಿ ತನ್ನ ಅಂತರ್ಗತ ಶಕ್ತಿಯಿಂದ ಆಳವಾದ ಹೃದಯವನ್ನು ಹೊಕ್ಕು ಭಕ್ತಿಪೂರಿತವಾದ ಹೃದಯವನ್ನು ಕಲಕುವಂತಹದೂ ಆಗಿದೆ. ಇಂಥ ಗೂಢ ತಪಸ್ವಿಗಳ ಚರಿತ್ರೆಯ ರಾಹಿತ್ಯವು (ನಮ್ಮ ಸಾಹಿತ್ಯದಲ್ಲಿ) ಒಂದು ಕೊರತೆಯಾಗಿತ್ತು. ಈಗ ಪ್ರಕಾಶಗೊಂಡ ಈ ಕೃತಿಯು ಇಂಥ ಬಹುಕಾಲದ ಅವಶ್ಯಕತೆಯನ್ನು ಪೂರೈಸಿಕೊಡುತ್ತದೆ.

ವಿಜಯದಾಸರು ರಾಯಚೂರ ಜಿಲ್ಹೆಯ ಮಾನವಿ ತಾಲೂಕಿನ ಚೀಕಲ ಪರಿವಿ ಎಂಬ ಗ್ರಾಮದಲ್ಲಿ ಶಕೆ ೧೬೦೪ ರುಧಿರೋದ್ಗಾರಿ ಸಂವತ್ಸರದಲ್ಲಿ ಜನಿಸಿದರು ೭೪ ವರ್ಷಕಾಲ ಒಂದೇ ತರದ ನಿಗ್ರಹಿತ ಜೀವನವನ್ನು ಸಾಗಿಸಿ ಶಕೆ ೧೬೭೭ ಯುವನಾಮ ಸಂವತ್ಸರದಲ್ಲಿ ವೈಕುಂಠಯಾತ್ರೆ ಕೈಕೊಂಡರು.

ಬಡವರ ಉದರದಲ್ಲಿ ಜನಿಸಿದವರಾದ ಕಾರಣ ಜೀವನದಲ್ಲಿ ಬಡತನದ ಸಂಕಷ್ಟಗಳೂ ಹಾವಳಿಗಳೂ ಉಪದ್ರವಗಳೂ

ಇದ್ದವು. ಕಷ್ಟಸಹನೆ-ಸತ್ವಪರೀಕ್ಷೆ-ದೇಹದಂಡನೆಗಳಿಂದ ದೈವೀ ಕೃಪೆ ಪಡೆದು ವಿರಾಜಮಾನರಾಗಿ ಸುಶೀಕ್ಷಿತರೂ ಪ್ರವೀಣರೂ ವಿದ್ಯಾಪಾರಂಗತರೂ ಪರಿಪೂರ್ಣತೆಯನ್ನು ಪಡೆದ ಸಾಧಕರೂ ಆಗಿ, ಜೀವನದ ರಹಸ್ಯವರಿತವರಲ್ಲಿ ಮೇಲ್ತರಗತಿಯವರಾಗಿ ಪರಿಣಮಿಸಿದರು. ಮೂರುಸಲ ಕಾಶೀ ಕ್ಷೇತ್ರವನ್ನು ಸಂದರ್ಶಿಸಿದರು. ಈ ಪವಿತ್ರ ಕ್ಷೇತ್ರಕ್ಕೆ ಎರಡನೇಸಲ ತೆರಳಿದಾಗ ಸ್ವಪ್ನದಲ್ಲಿ ಪ್ರಕಟರಾದ ಶ್ರೀ ಪುರಂದರದಾಸರಿಂದ ದಾಸದೀಕ್ಷೆಗೊಂಡವರಾಗಿ ಹರಿದಾಸರ ಅಳತೆಯಲ್ಲಿ ಬಂದರು. ಜಗದೊಡೆಯನಾದ ವಿಠ್ಠಲ ಪ್ರಭುವಿನ ಘನತೆಯನ್ನೂ ಮಹಿಮೆಯನ್ನೂ ಆತನನ್ನು ಹೊಂದುವ ಸಾಧನವನ್ನೂ ಸಂತತ ಉಪದೇಶಿಸುತ್ತ ಭಾರತವನ್ನೆಲ್ಲ ಸಂಚರಿಸಿದರು. ಸಮಾಜದ ಉಚ್ಚತರದ ಜನತೆಯಮೇಲೆ ಅಪಾರವಾದ ಪ್ರಭಾವವನ್ನು ಭರದಿಂದ ಬೀರಿದರು. ಅಲ್ಲದೇ ತಮ್ಮ ನೀತಿಯ ಮತ್ತು ಪಾರಮಾರ್ಥಿಕ ಬೋಧನೆಗಳಿಂದ ಅವರನ್ನುದ್ಧರಿಸಿದರು. ತಮ್ಮ ಅರಿವುಳ್ಳ ( ಜ್ಞಾನ ) ಮನಸ್ಸಿನಿಂದ ಸ್ವಾಭಾವಿಕವಾಗಿ ಹೊರ ಹೊಮ್ಮಿದ ಭಾವಗೀತೆಗಳಿಂದಲೂ ಉಕ್ತಿಗಳಿಂದಲೂ ಕನ್ನಡ ಭಾಷೆ ಮತ್ತು ಸಾಹಿತ್ಯಗಳನ್ನು ಅಭಿವೃದ್ಧಿಗೊಳಿಸಿದರು.

ಹೀಗೆ ಶ್ರೀ ವಿಜಯದಾಸರ ಜೀವನಚರಿತ್ರೆಯು ಮನೋಹರವಾದ ಘಟನೆಗಳಿಂದ ತುಂಬಿಕೊಂಡಿದೆ. ಪ್ರಸ್ತುತಚರಿತ್ರೆಯ ಲೇಖಕರಾದರೂ, ತಿಳಿಯಾದ ಭಾವನೆಗಳಿಂದ ಉಕ್ಕಿಬರುವಂಥ ಸ್ಪಷ್ಟವಾದ ತಲ್ಲೀನತೆಗೊಳಿಸುವ ಶೈಲಿಯಲ್ಲಿ ನಿರೂಪಿಸುತ್ತ ಚರಿತ್ರೆಯ ಈ ಅಂಶವನ್ನು ನ್ಯಾಯವಾಗಿ ವರ್ಣಿಸಿದ್ದಾರೆ. ಭಾಷೆಯು ವಿಜಯದಾಸರ ಮತ್ತು ಅವರ ಜೊತೆಗಾರರ ಸ್ವಂತಶಬ್ದ ಮತ್ತು ಪದ ಸಮುಚ್ಚಯಗಳಿಂದ ತುಂಬಿತುಳುಕುತ್ತಿದ್ದು ಲೇಖಕರ ಆಳವಾದ ಅಭ್ಯಾಸದ ಬಗ್ಗೆ ಸಾಕ್ಷೀಭೂತವಾಗಿ ನಿಂತವೆ. ಪ್ರಸ್ತುತ ಗ್ರಂಥದ ವಿಷಯ ಪ್ರವೇಶಿಕತೆಯು ಅಥವಾ ವಿಮರ್ಶಾತ್ಮಕ ಒಳದೃಷ್ಟಿಯು ಈ ಚರಿತ್ರೆಯ ಲಕ್ಷದಲ್ಲಿಡಬೇಕಾದ ಮಹತ್ವದ ಅಂಶವಾಗಿದೆ. ಲೇಖಕರಾದರೂ ವಿಜಯದಾಸರ ಜೀವನದಲ್ಲಿಯ

ಬಗೆಬಗೆಯ ಸಂಗತಿಗಳ ಮೂಲವನ್ನು ಅರುಹುವ ರೀತಿಯಲ್ಲಿ ಬಹುವಿಷಯಗಳಿಂದ ವ್ಯಾಪಕವಾದ ಸಂಗ್ರಹವನ್ನು ಮಾಡಿರುವ ರಲ್ಲದೇ ಹೆಜ್ಜೆಹೆಜ್ಜೆಗೂ ತಮ್ಮ ಆಧಾರೋಕ್ತಿಗಳನ್ನು ಎತ್ತಿ ಹೇಳುತ್ತ ಅವುಗಳನ್ನು ಕ್ರಮಬದ್ಧವಾದ ರೀತಿಯಲ್ಲಿ ಪ್ರದರ್ಶಿಸಿದ್ದಾರೆ. ನಿರ್ಣಯಕ್ಕೆ ಬಂದ ಫಲಿತಾಂಶಗಳಾದರೂ ಅತಿಸೂಕ್ಷ್ಮಾಂಶದ ವರೆಗೆ ಸಮಂಜಸವಾಗಿರುವದಲ್ಲದೇ ಪ್ರತಿಯೊಂದು ವಿವರವು ವಿಜಯದಾಸರ ಆತ್ಮಚರಿತ್ರೆಯ ಉಲ್ಲೇಖನೆಗಳ ಮೇಲಾಗಲಿ, ಅಥವಾ ಅವರ ಸಮಕಾಲೀನರಾದ ಅಥವಾ ಅವರ ನಿಕಟ ಶಿಷ್ಯ ಅನುಯಾಯಿಗಳಿಂದ ಪ್ರಸಿದ್ಧಗೊಳಿಸಲ್ಪಟ್ಟ ವಿವರಣೆಗಳ ಮೇಲಾ ಗಲಿ ಪ್ರಸ್ತಾಪಿಸಲ್ಪಟ್ಟದೆ. ಇಂದಿನ ಹೊಸ ಪದ್ಧತಿಗಳಿಗನುಸರಿಸಿ ಸಂಶೋಧನೆ ಮಾಡುವದರಲ್ಲಿ ಅಭಿರುಚಿಯುಳ್ಳ ವಿದ್ವಾಂಸರು ಈ ಗ್ರಂಥಾವಲೋಕನೆಯಿಂದ ಬಹುಮಾನ ಪಡೆಯಬಹುದು.

ಶಾಸನಲಿಪಿಗಳ ಶೋಧನೆಯ ಉದ್ದೇಶದಿಂದ ರಾಯಚೂರ ಜಿಲ್ಹೆಯ ಪ್ರವಾಸವನ್ನು ಕೈಕೊಂಡಾಗ ಶ್ರೀ ಗೊರೆಬಾಳ ಹನು ಮಂತರಾಯರನ್ನು ಕಾಣುವ ಮತ್ತು ಅವರ ಕೃತಿಗಳಬಗ್ಗೆ ಪರಿ ಚಯ ಮಾಡಿಕೊಳ್ಳುವ ಪ್ರಸಂಗವು ಒದಗಿತು. ಮೇಲ್ಕಾಣಿಸಿದ ಕೆಲವು ಶಬ್ದಗಳು ಅವರ ಕೃತಿಯಬಗ್ಗೆ ಅವಸರದಲ್ಲಿ ವ್ಯಕ್ತಪಡಿಸಿದ ಗುಣಗ್ರಾಹಕತೆಯ ಗುರ್ತುಗಳಾಗಿವೆ.

ಮುಕ್ಕಾಂ ಮಾನವಿ
ದಿನಾಂಕ ೭—೪—೧೯೫೪.

**ದೇಸಾಯಿ ಪಾಂಡುರಂಗರಾವ**
ಎಮ್. ಎ.

॥ ಶ್ರೀ ಹರಿಃ ಓಂ ॥

# ಮಂಡಲದ ಮಾತು

ಬಹುದಿನಗಳಿಂದ ಶ್ರೀ ವಿಜಯದಾಸರ ಚರಿತ್ರೆಗೆ ಆತುರರಾಗಿದ್ದ ನಮ್ಮೆಲ್ಲರ ಮನೋಬಯಕೆಯು ಇಂದು ತೀರಿತು. ಉತ್ಸಾಹಿಗಳಾದೆವು. ೭ ವರ್ಷದಿಂದ ನರಗಳ ದುರ್ಬಲತೆ ವಾತ ವಿಕಾರದಿಂದ ಬಳಲುತ್ತಿದ್ದ ಮಂಡಲ ಸಂಚಾಲಕರಾದ ಹನುಮಂತರಾಯರು, ದೇಹಾಲಸ್ಯವನ್ನು ಬದಿಗಿತ್ತು ದಾಸರ ಸೇವೆ ಸಲ್ಲಿಸುತ್ತಿರುವದು ನಮ್ಮ ಭಾಗ್ಯ. ಅವರಿಗೆ ದಾಸವರ್ಯರಂತರ್ಗತರಾದ ಹರಿವಾಯುಗಳು ಆಯುರಾರೋಗ್ಯ ನೀಡಲೆಂದು ಶ್ರೀ ಧನ್ವಂತ್ರಿನಾಮಕ ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ. ದೇಶದೇಶದ ಭಕ್ತರುಗಳಿಂದಲೂ ಸಂಚಾಲಕರಿಗೆ ಆಯುರಾರೋಗ್ಯ ಪಾಲಿಸಲೆಂದು ಪ್ರಾರ್ಥಿಸಿದ ನೂರಾರು ಪತ್ರಗಳು ಕೈಸೇರಿವೆ. ಆಯುರಾರೋಗ್ಯ ಪಾಲಿಸಿ ಮುಂದಿನ ಕಾರ್ಯ ಪೂರೈಸಲು ಮತ್ತೊಮ್ಮೆ ಪ್ರಾರ್ಥನೆ.

ಅವರ ಅವಿಶ್ರಾಂತ ಸಹಾಸ ಲೌಕಿಕವನ್ನು ಬದಿಗೊತ್ತಿ ವಿಷಯವಿರಾಗಪೊಂದಿ ಪೊಲಮುನಿಗಳು ಹೆಂಡರಮಕ್ಕಳ ಸಂಸಾರ ಮನಸ್ಸಿಗೆ ತಾರದೇ ಹರಿ ಕೊಟ್ಟಿದ್ದರಲ್ಲಿಯೇ ನಿರ್ವಹಿಸಿ ಸ್ವಾರ್ಥತೆಯನ್ನು ನೂಕಿ ಆನಂದದಿಂದ ಸದಾ ದಾಸ ಸಾಹಿತ್ಯ ಪ್ರಚಾರದಲ್ಲಿಯೇ ದುಡಿದದ್ದಕ್ಕಾಗಿ ಇಂದು ೪೭ ನೇ ಪ್ರಕಟನೆ ಹೊರಬೀಳುವದು ಆನಂದವೆನಿಸುತ್ತದೆ. ಇಡೀ ಕರ್ನಾಟಕದಲ್ಲಿ ದಾಸರ ಸೇವೆ ಸಲ್ಲಿಸಿದವರು ಇವರೊಬ್ಬರೆಂದು ಹೇಳಲು ತಪ್ಪಾಗಲಿಕ್ಕಿಲ್ಲ.

ದಾಸರು ಇವರಲ್ಲಿ ನಿಂದು ಇವರ ಬುದ್ಧಿ ಪಾಲಿಸಿದ ರೀತಿಯೇ ಬೇರೆ. ಹಿಂದೆ ಪುರಂದರದಾಸರು ದಾಸರ ಪೀಳಿಗೆ ಹೊರಡಿಸಿದಾಗ್ಗೆ "ಹಿಂದು ಪೇಪರ ಮದ್ರಾಸ ಎಡಿಟರರು ಸಂಚಾಲಕರ ನೂತನ ಪದ್ಧತಿಯು ಮುಂದೆ ಸಾವಿರ ವರುಷದ ಸಂಶೋಧನ ಪಂಡಿತರಿಗೆ ತಳಹದಿಯಾದ ಅಡಿಗಲ್ಲಾಗಿದೆ ಎಂದು ಸೂಚನೆ ಕೊಟ್ಟಿರುವದು" ಸರಿಯಾಗಿದೆಂದು ಇಂದು ಎಮ್ಮ ಅನುಭವಕ್ಕೆ ಬರುತ್ತಲಿದೆ. ಪ್ರತಿಯೊಬ್ಬ ಕನ್ನಡ ಭಾಷಾ ತಜ್ಞರು ಒಪ್ಪತಕ್ಕದ್ದಾಗಿದೆ. ಕಾರಣ

ನಾವೆಲ್ಲರೂ ಇವರಿಗೆ ಋಣಿಯಾಗಿದ್ದೇವೆ. ಏಕಾದಶಿ ಜಾಗರವೆಲ್ಲ ದಾಸರ ಚರಿತ್ರೆಯಿಂದಲೇ ಸಿದ್ಧಿಸಿತು. **ಇಂದು ನೂತನ ಪದ್ಧತಿ ಗನುಸರಿಸಿ** ಹೊಸ ವಿಷಯುಗಳನ್ನು ಸಂಶೋಧಿಸಿರುವರು. ಮೊದಲಿಗೆ ಶ್ರೀ ವಿಜಯದಾಸರ ಸ್ತೋತ್ರ ಪದಗಳು ಅವರ ಆತ್ಮಾನುಭವ ಪದಗಳು ಸಂಗ್ರಹಿಸಿರುವರು. ಮುಂದೆ ಅವುಗಳ ಆಧಾರ ಮೇಲಿಂದಲೇ "ಸಂಕ್ಷಿಪ್ತ ವಿಸ್ತರಾಭ್ಯಾಂ" ಎಂಬುವಂತೆ ಮೊದಲಿಗೆ ಸಂಕ್ಷೇಪವಾಗಿ ಜನರಿಗೆ ತಿಳಿಯುವಂತೆ ಹೇಳಿ, ಮುಂದೆ ಪ್ರತಿಯೊಂದರ ಅನುಕ್ರಮಣಿಕಾ ಹೇಳುತ್ತ, ಆಧಾರದೊಂದಿಗೆ ವಿಸ್ತಾರವಾಗಿ ಚರಿತ್ರೆ ಪೇಳಿರುವರು. ಇದು ಸಂಚಾಲಕರ ಅಸಾಧಾರಣ ಬುದ್ಧಿ, ಆದರದ ಪರಿಶೀಲತೆಯು.

ಶ್ರೀ ಪುರಂದರದಾಸರು ನವಕೋಟಿನಾರಾಯಣ ಶ್ರೀಮಂತರಾದಾಗ್ಯೂ ಅದನ್ನು ದಾನಮಾಡಿ ನಿಷ್ಕಿಂಚನ ಭಕ್ತರಾದರು. ಶ್ರೀ ವಿಜಯದಾಸರು ಬಡವರಲ್ಲಿ ಅವತರಿಸಿ ಪರಿಪರಿ ದಾರಿದ್ರ್ಯ ಸಂಸಾರ ಕಷ್ಟಗಳನ್ನು ಅನುಭೋಗಿಸಿ ಶ್ರೀ ಹರಿಯನ್ನೊಲಿಸಿ **ಪ್ರಪಂಚದಲ್ಲಿಯೇ ಪಾರಮಾರ್ಥವಿರುವದೆಂದು ತೋರಿದ ನಿಷ್ಕಿಂಚನ ಭಕ್ತರು.** ಇವರ ಮಹಿಮೆ ಅಗಾಧ ಉಂಟು.

ಮೊದಲಿಗೆ ವಿಜಯದಾಸರು ಅವತರಿಸಲು ಕಾರಣ- ಇವರ ಮೂಲ ಅಂಶ ಅವತಾರ ಕಥನ, ಮನೋಲ್ಲಾದಕವಾಗಿವೆ. ಮುಂದೆ ಅವತರಿಸಿದ ಪುಣ್ಯಭೂಮಿ ತುಂಗಾತಟ ಅಲಂಕಾರ ಭಾಷೆಯಿಂದ ವರ್ಣನೀಯವಾಗಿದೆ. ಮಾತಾಪಿತೃಗಳು ಶುದ್ಧಾತ್ಮರು. ಅವರು ನೃಸಿಂಹದೇವರ ಸೇವೆಗೈದುದು, ಪಿತೃದ್ವಾರಾ ಮಾತೃಗರ್ಭ ಪ್ರವೇಶಿಸಿದುದು ಬಹು ಪ್ರಮೇಯಭರಿತವಾಗಿದೆ. ಶ್ರೀ ದಾಸರ ಅವತಾರಕಾಲ ಉತ್ಸವಾದಿಗಳು ಮನಾನಂದ ಆಕರ್ಷಣೀಯವಾಗಿವೆ. ಬಾಲಲೀಲೆ ಮಾತಾಪಿತೃಗಳ ಬಾಲಕನ ಶುಶ್ರೂಷಣೆ ಶ್ರೀಕೃಷ್ಣಪರಮಾತ್ಮನ ಬಾಲಲೀಲೆಯಂತೆಯೂ ಯಶೋದಾನಂದಗೋಪನ ಆನಂದಕ್ಕಿಂತಲೂ ಹೆಚ್ಚಿನಾನಂದವೆಂತು ಬಣ್ಣಿಸಿದ ಸೊಬಗು ವಿಚಿತ್ರವಾಗಿದೆ.

ತುಲನಾತ್ಮಕ ದೃಷ್ಟಿಯಿಂದ ಆಗಿನಕಾಲದ ಶಾಲೆಯು ವರ್ಣನೆಯು ಪ್ರಾಣಿಗಳಲ್ಲಿರುವ ಭೂತದಯವನ್ನು ಪ್ರಕಾಶಿಸುತ್ತಲಿದೆ. ದಾಸಪ್ಪನಾದ ಬಾಲಕನ ಸ್ಫೂರ್ತಿ ಅತಿ ವಿಚಿತ್ರವಾಗಿದೆ. ಮುಂದೆ ಮಾತಾಪಿತೃಗಳ ಸಂಸಾರಯಾತ್ರೆ ಕಷ್ಟತರವಾದದು ಕಲ್ಲಾದ ಮನಸ್ಸು ಕರಗಿಸುತ್ತದೆ. ಬಡತನದಲ್ಲಿ ಅಭ್ಯಾಸ, ಮುಂಜಿ, ಮದುವೆ ಸಂಕ್ಷಿಪ್ತ ವರ್ಣನೆಯಾದರೂ ನಿಜವಾಗಿದೆ. ೧೬ ವರುಷ ಪರಿಯಂತರ ದಾಸರು ಕಷ್ಟಗಳನ್ನು ಅನುಭೋಗಿಸಿದ್ದು ಮುಂದೆ ೪ ವರುಷ ತೀರ್ಥಯಾತ್ರೆ ಚರಿಸಿದ್ದು ಅತಿ ಆಶ್ಚರ್ಯವಾಗಿದೆ. ಬಾವಾಜಿಗಳ ಗುಂಪಿನಲ್ಲಿ ದಾಸಪ್ಪನು ಸೇರಿದಾಗ್ಗೆ ಬಾವಾಜಿ ಗುರುಗಳ ದಾಸಪ್ಪನಲ್ಲಿ ನಡೆದ ಚಾರಿತ್ರವು ಹಿಂದಿ ಭಾಷೆಯಲ್ಲಿ ಅತಿ ಸ್ಫೂರ್ತಿದಾಯಕವಾಗಿದೆ. ಮುಂದೆ ಪ್ರತಿಯೊಂದು ವಿಚಾರವು ಆಧಾರಪ್ರಮಾಣಗಳೊಂದಿಗೆ ಸೂಕ್ಷ್ಮ ವಿವೇಚನೆಯ ಸುಗಮ ಭಾಷಾಶೈಲಿಯಲ್ಲಿ ಬರೆದಿರುವರು. ದಾಸರ ಕಾಲನಿರ್ಣಯವೂ ಚಿಪ್ಪಗಿರಿ ಕ್ಷೇತ್ರ ಮಹಿಮೆಯು ಹಿಂದಿನ ಅನೇಕ ಸನದುಗಳ ಆಧಾರ ಮೇಲಿಂದಲೂ ಬಳ್ಳಾರಿ ಗೆಜಿಟಿಯರ ಮೇಲೆ ಉದಾಹರಿಸಿರುವರು ಇದು ಸಾಮಾನ್ಯವಲ್ಲ. ಈಗಿನ ಕಾಲದ ಇತಿಹಾಸ ಸಂಶೋಧಕರ ಮನಮೆಚ್ಚಾಗಿದೆ. ದಾಸರ ವೈಶಿಷ್ಟ್ಯವು ಬೋಧಪರವಾಗಿ ವರ್ಣಿಸಿರುವರು. ದಾಸರ ಅವಶಿಷ್ಟ, ಮೂರು ಜಡ ಪದಾರ್ಥಗಳು. ಸಾಣಿಕಲ್ಲು-ತಂಬೂರಿ-ತಾಳ ಈ ಮೂರು ಪದಾರ್ಥಗಳಿಂದ ಏನು ಪ್ರಯೋಜನ ಇದರಿಂದ ತಿಳಿವುದಾದರೂ ಏನೆಂಬುವದು ಅತಿ ನೂತನವಾಗಿಯೂ ಆಶ್ಚರ್ಯಕರವಾಗಿಯೂ ನಿಜವಾಗಿ ಉಲ್ಲೇಖಿಸಿರುವರು. ದಾಸರಲ್ಲಿರುವ ನೈಜವಾದ ಜ್ಞಾನ, ಭಕ್ತಿ, ವಿರಕ್ತಿ, ಗುರುಭಕ್ತಿ ಎಂತೂ ದಾಸರ ವಚನಗಳಿಂದಲೇ ಬಣ್ಣಿಸಿದುದು ಮೇಲಾದ್ದು. ದಾಸರ ಸಾಹಿತ್ಯ-ಸಾಂಗತ್ಯ ವಿಭಾಗವು ಪದ ಸುಳಾದಿ ಉಗಾಭೋಗಕ್ರಮ ವಿಚಾರವು ಬಹು ಹೊಸ ಹೊಸ ವಿಷಯಗಳನ್ನು ಹೇಳಿದ್ದು ಪಂಡಿತರುಗಳ ಆದರಣೀಯವಾಗಿದೆ. ಚಿಪ್ಪಗಿರಿ ಕ್ಷೇತ್ರ ಮಹಿಮೆ ದಾಸರಕಟ್ಟೆ ಮಹತ್ಮೆಯು

ಕೆಲಮಟ್ಟಿಗೆ ಈಗಲೂ ಪ್ರತ್ಯಕ್ಷವಾಗಿ ನಡೆಯುತ್ತಲಿದೆಂಬುದು ಐತಿಹಾಸಿಕ ಆಧಾರದೊಂದಿಗೆ ಬರೆದಿರುವರು. ಪ್ರತಿಯೊಂದು ವಿಚಾರ ಅತಿ ಸೂಕ್ಷ್ಮ ರೀತಿಯಿಂದ ಉತ್ತಮವಾದ ಭಾಷಾ ಶೈಲಿಯಲ್ಲಿ ಬರೆದು ಮಂಡಲಕ್ಕೆ ಶೋಭಿಯುನ್ನುಂಟು ಮಾಡಿದದ್ದು ಶ್ರೀ ವರದೇಂದ್ರರ ಅನುಗ್ರಹವು. ವಿಷಯಾನುಕ್ರಮಣಿಕೆ ಅವಲೋಕನದಿಂದಲೇ ವಿದಿತವಾಗುವದು.

ಇಂತು ನೈಜವಾದ ದಾಸರ ಚರಿತ್ರೆಗಳು ಇನ್ನು ಮುಂದೆ ಸಂಚಾಲಕರಿಂದ ಬರೆಸಲಿ ಸಜ್ಜನರಿಗುಪಕಾರವಾಗಲಿ.

ಸಂಚಾಲಕರ ದಿನಚರಿಯನ್ನು ನೋಡಿ ಸಂತೋಷಮನಸ್ಕರಾಗಿ ಅಚ್ಚುಕಟ್ಟಾಗಿ ಇಂಗ್ಲೀಷಿನಲ್ಲಿ ಮುನ್ನುಡಿಯನ್ನು ಬರೆದು ಕೊಟ್ಟ, ಶ್ರೀ. ದೇಸಾಯಿ ಪಾಂಡುರಂಗರಾಯರು M. A. ಡೈರೆಕ್ಟರ್ ಎಫಿಗ್ರಾಫಿಕಲ್ ಊಟಕಮಂಡ ನೀರಲಗಿ ಇವರ ಉಪಕಾರವು ಮಂಡಲವು ಸ್ಮರಿಸುತ್ತದೆ. ಮತ್ತು ಸುಂದರವಾಗಿ ಭಾಷಾಂತರಿಸಿ ಕನ್ನಡದಲ್ಲಿ ಅನುವಾದ ಮಾಡಿದ, ಶ್ರೀ. ವೇ॥ ಮಧ್ವಾಚಾರ್ಯರು ಜೋಸಿ ಹುನಗುಂದ B. A. ಟೀಚರ ಹೈಸ್ಕೂಲ ಲಿಂಗಸೂಗೂರ ಇವರಲ್ಲಿ ಅಭಿವಂದನೆ.

ಮಂಡಲದ ಬಾಕಿ ೪॥ಸಾವಿರ ರು॥ ನಿಂತು ಮಂಡಲವು ಬಹಳ ಬಡವಾಗಿದೆ. ಇಂಥ ಪರಿಸ್ಥಿತಿಯಲ್ಲಿ ಸಂಚಾಲಕರಿಗಿತ್ತ ದಾಸರ ಧೈರ್ಯದಿಂದಲೇ ಕೆಲಸ ಸಾಗಿದೆ. ಸಕಲ ಭಕ್ತರೂ ಕನ್ನಡಾಭಿಮಾನಿಗಳು ಮುಕ್ತಹಸ್ತದಿಂದ ಸಹಾಯ ನೀಡಿ ಕೆಲಸ ಸಾಗಿಸಲು ಪ್ರಾರ್ಥನೆ.

ಪ್ರತಿಯೊಬ್ಬ ಬ್ರಾಹ್ಮಣರು ಮನೆಗೆ ವರುಷದಲ್ಲಿ ಎರಡು ರು॥ ಸಹಾಯವಿತ್ತರೆ ಎಷ್ಟೋ ಕೆಲಸ ಸಾಗುತ್ತದೆ. ಇತ್ತ ಕಡೆಗೆ ಎಲ್ಲರೂ ಅಭಿಮಾನದಿಂದ ಲಕ್ಷಗೊಟ್ಟು ಸಹಾಯನೀಡಿರಿ. ದಾಸರ ಚರಿತ್ರೆಯ ಸವಿಯನ್ನುಂಡು ತೃಪ್ತರಾಗಿರಿ ಇದೆ ವಿನಂತಿ.

ದಾಸರದಾಸ

**ರಾಮಪ್ಪಯ್ಯಾ ದೇಸಾಯಿ ಕಾಟಾಪುರ, ಮುಗನೂರ**

ಮಂಡಲಾಧ್ಯಕ್ಷ.

# ಅನುಕ್ರಮಣಿಕಾ

## ಮಂಗಲಾಚರಣೆ



## ಅವತಾರಾದಿ ಆತ್ಮಕಥನ



## ಹಯವದನವಿಠ್ಠಲ ಕೃತ

( ಆನಂದದಾಸರು ವಿಜಯದಾಸರ ಅನುಜರು )



## ಶ್ರೀ ಗೋಪಾಲವಿಠ್ಠಲ ಕೃತ

**ಶ್ರೀ ಮೋಹನವಿಠಲ ವಿರಚಿತ**



**ಶ್ರೀ ವೇಣು ಗೋಪಾಲವಿಠಲ ಕೃತ**



**ಶ್ರೀ ಜಗನ್ನಾಥವಿಠಲ ಕೃತ**



**ಶ್ರೀ ಗುರು ಗೋಪಾಲವಿಠಲ ಕೃತ**



**ಶ್ರೀ ವ್ಯಾಸವಿಠಲರ ಕೃತ** ( ವೇಣು ಗೋಪಾಲವಿಠಲರ ಶಿಷ್ಯರು )



**ಗುರು ವ್ಯಾಸವಿಠಲ ಕೃತ**



**ಗುರು ವೇಣು ಗೋಪಾಲವಿಠಲ ಕೃತ**



**ರಾಮಚಂದ್ರವಿಠಲ ಕೃತ** ( ವೇಣು ಗೋಪಾಲವಿಠಲರ ಶಿಷ್ಯರು )

---

## ಗದ್ಯ–ಭಾಗ

## ಮೇಲ್ಭಾಗ

ಶ್ರೀ ವಿಜಯದಾಸರ ಭಾವಚಿತ್ರ

**ಪುಟ ೯೩ ಸಾಲು ೯, ರಿಂದ ೧೭, ವರೆಗೆ ಹೀಗಿರತಕ್ಕದ್ದು ಹೆಚ್ಚು ಕಡಿಮೆ ಆಗಿದೆ ಕೆಳಗಿನಂತೆ ಸರಿಯಾಗಿ ಓದಿರಿ**

ಯಾದರು. ಒಬ್ಬ ಮುದುಕ ಅಯ್ಯನವರು ಛಂದಸಾರ ಛಂದೋಂಬುಧಿ ಸರಿಯಾದ ರೀತಿಯಿಂದ ಮುಖೋದ್ಗೀತವೆನ್ನುವರು. ಭಾಮಿನಿ ವಾರ್ಧಿಕ ಗಳನ್ನು ಬೇರೆ ಬೇರೆ ರಸಗಳಲ್ಲಿ ೧೮–೨೦ ತರವಾಗಿ ಅನ್ನುವರಿದ್ದರು. ಬೇರೊಬ್ಬರಿಗೆ ಹೇಳಬಾರದೆಂಬ ಕಾರ್ಪಣ್ಯ.

ಇಂಥ ವಿದ್ಯಾ ಆಗಾರವಾದ ಮಾನವಿಯ ದೇಶ ಗೌಡಕರಣಿಕರು ಸಹ ವಿದ್ಯಾವ್ಯಾಸಂಗಿಗಳಾಗಿದ್ದರು. ಎಷ್ಟೋ ಕಾವ್ಯಗ್ರಂಥಗಳು ಮಾನವಿ ಇಲಾಖೆಯಿಂದಲೇ ಸಂಶೋಧನದಲ್ಲಿ ದೊರೆತವೆ ಸಾಕ್ಷಿಯಾಗಿವೆ. ಉಚ್ಚ ಕಾವ್ಯಗಳು ಸಂಕೋಚಭಾರತ, ಅನಂತನ ಕಥೆ ಮೊದಲಾದವುಗಳು ಪ್ರಚುರ ಗೊಳಿಸುತ್ತದೆ.

## ಹೊಸದಾಗಿ ಸಂಶೋಧನದಲ್ಲಿ

ಐತಿಹಾಸಿಕ ಲಿಂಗಸೂಗೂರ ಕ್ಷೇತ್ರದ ಅಲ್ಪಪರಿಚಯ

ಲಿಂಗಸೂಗೂರ ಕ್ಷೇತ್ರ ಶ್ರೀ ಕುಪ್ಪೀಭೀಮ ಪ್ರಾಣದೇವರ ಜಾಗ್ರತ ಸ್ಥಳ, ಶ್ರೀ ಶ್ರೀವರದೇಂದ್ರ ಶ್ರೀಪಾದಂಗಳವರ ಪುಣ್ಯಕರವಾದ ವೃಂದಾವನ ಪ್ರತಿವರ್ಷ ಜಾತ್ರೆ ಆರಾಧನಾ ಉತ್ಸವ ನಡೆಯುವದು. ಶ್ರೀ ಪ್ರಾಣೇಶ ವಿಠಲರು ಶ್ರೀ ಗುರು ಪ್ರಾಣೇಶವಿಠಲರೂ ಅಪರೋಕ್ಷಿಜ್ಞಾನಿಗಳ ಸ್ಥಳ ವಿದೆ. ಚಾ. ವಿ. ಶ. ೯೯೮ ಪೂರ್ವದ ಶಿಲಾಶಾಸನದ ಮೇಲಿಂದ ಚಾಲುಕ್ಯ ವಿಕ್ರಮಾದಿತ್ಯ ಆ ನರಸೇ ಪುರುಷ (ಶಾ. ಶಕೆ. ೧೦೪೦) ಅಬ್ಬಲದೇವಿ ರಾಣಿಗೆ ಇನಾಂ, ಕರಿಡಕಲ್ ೪೦೦ ಗ್ರಾಮಪೈಕಿ ಲಿಂಗ ಎಂಬ ಗ್ರಾಮ. (ಸುತ್ತಲೂ ಚತುರ್ದಿಕ್ಕಿಗೆ ಲಿಂಗಗಳಿರುವ ಕಾರಣ ಲಿಂಗಸಾಗರ) ಛತ್ತ ಗ್ರಾಮ ಆವರ ರಾಜನ ಮಾಂಡಲಿಯರ್ **ಕದಂಬವಂಶ ಮಾಧವತ್ತಿ ಯರಸ್ ೩೬** ಗೇಣು ಕೋಲು ಮುರೂವತ್ತಾರ ನೆಲವನ್ನು **ಕಲಿ** ದೇವರ ಉಪಭೋಗವಾಗಿ ಇನಾಂ ಕೊಟ್ಟಿದ್ದು. ಶಿಲಾಶಾಸನ ಶ್ರೀ ಕಲ್ಲೇಶ್ವರ ದೇವಾಲಯದಲ್ಲಿದೆ. ಪವಿತ್ರವಾದ ಸ್ಥಳದಲ್ಲಿಯೇ ದಾಸರುಗಳು ಅವತಾರ ಆವರ ಅವಶಿಷ, ಈ ಮಹಾಕಾರ್ಯವೇ ಸಾಕ್ಷಿಯಾಗಿದೆ.

।। श्री लक्ष्मी नृसिंहात्मक, श्री लक्ष्मी वेंकटेश प्रसन्न ।।

श्री गुरु राजी विजयते



# ಶ್ರೀ ವಿಜಯದಾಸರು

## ಮಂಗಳಾಚರಣೆ

### ಶ್ರೀ ಹರಿದಾಸರ ಪರಂಪರೆ

೧ ಭಾಮಿನಿ ಷಟ್ಪದಿ, ಮಂಗಳಸ್ತೋತ್ರ

ಮಧು ವಿರೋಧಿಯ ಪಾದಕಮಲಕ । ಮಧುಪನೆನಿಪ **ಪುರಂದರದಾಸರ**।
ಪದ ಸರೋರುಹಕ್ಕೆರಗಿ ಮಾಡುವೆ ಸಲಿಸಿ ಬಿನ್ನಪವ ॥
ವಿಧಿಭವಾದ್ಯರ ಸೇವಿ ಶ್ರೀಹರಿ । ಮೊದಲು ಮಾಡಿದ ಕ್ಲಪ್ತಪದವಿಗೆ ।
ಒವಗಿ ಪಾಲಿಸಲೆನ್ನ ಬುಧಕುಲವರ್ಯ ಗುರು ಆರ್ಯ ॥೧॥
ದಾಸರಾಯರ **ಪುಣ್ಯ** ಸುಧೆ ವಾ । ರಾಶಿಯಲಿ ನಿಶಿಕಾಂತನಂದದಿ ।
ತಾಂ ಸಮಸ್ತ ಕುಭಾಷ್ಯ ಮುಖ ಕಮಲಗಳ ಮುಕಳಿಸುತ ॥
ಈಶನೇ ಪರನೆಂದು ಜಗದಲಿ । ಭೂಸುರರಿಗುಪದೇಶ ಮಾಡುತ ।
ತಾಂ ಸುಳಾದಿಯ ಪೇಳ್ದ **ವಿಜಯದಾಸರಿಗೆ** ನಮಿಪೆ ॥೨॥
ಈ ಪ್ರಪಂಚವ ತೊರದು ನಿರ್ಜ । ರಾ ಪದವ ಪರಿಹರಿಸಿ ನಂದಾ ।
ಗೋಪ ಗೋಪೆರ ತನಯನೆನಿಸುವ ಕೃಷ್ಣಮೂರುತಿಯ ॥
ತಾಪಸಲೆ ಮುಚಕುಂದ ವಂದ್ಯನ । ತಾ ಪದಗಳನು ಪೇಳ್ದ ಸುಜನರ ।
ತಾಪಹರ **ಗೋಪಾಲದಾಸರ** ಪಾದಕಭಿನಮಿಪೆ ॥ ೩ ॥

ವಾಸುದೇವರ ದಾಸರೆನಿಸೆಪ । ರಾಶಿಗಳ ಓಡಿಸುವ ದೀನರ ।
ಪೋಷಕನೆ ಕಾರುಣ್ಯ ವನನಿಧಿ ಆರ್ತಜನ ಬಂಧೊ ॥
ಈ ಸಕಲ ದಿವಿಜಾಗ್ರಣ್ಯರ । ದಾಸರಿಗೆ ಪರತತ್ವ ಬೋಧಿಸಿ ।
ಸಾಸಿರಕ ಬೆಲೆ ಮಾಳ್ಪ **ಮುನುಗುರು ವ್ಯಾಸ** ತತ್ವಜ್ಞ ॥೪॥
ಪ್ರಾಣದೇವರ ಮತಪಯೋಬ್ಧಿಗೆ । ತಾನು ಚಂದಿರನಂತೆ ದುರ್ಜನ ।
ಕಾನನಕೆ ಹುತಭುಕನು ಸಜ್ಜನ ಅಬ್ಜ ಮಿತ್ರನಲಾ ॥
ಏನು ಪೇಳಲಿ ವಿಜಯರಾಯರ । ಧ್ಯಾನಪರನಾಗಿಹನು ಸರ್ವದ ।
**ವೇಣುದಾಸರ** ಶ್ರೀಪದಾ ನಖರೇಣುಗಾ ನಮಿಪೆ ॥೫॥
ದುರಿತ ಭವಭಯ ಶರಧಿ ತಾರಕ । ದುರಿತ ಕಾನನ ವೀತಿ ಹೋತ್ರನು ।
ದುರಿತ ಮದಗಜ ಸಿಂಹನೆನಿಸುವ ದುರಿತಗಿರಿ ವಜ್ರ ॥
ಶರಣ ಜನರಿಗೆ ಶರಣನೆನಿಸುವ । ಕರುಣನಿಧಿ **ಜಗನ್ನಾಥದಾಸರ** ।
ಸ್ಮರಣೆ ಮಾಡುವೆ ಮನ್ಮನಾಲಯ ಅಬ್ಜ ಪೀಠವಲಿ ॥೬॥
ವಾಸುದೇವ ಹಯಾಸ್ಯ ಕೇಶವ । ನಾಶರಹಿತ ಮುಕುಂದ ಭಕ್ತರ ।
ಕ್ಲೇಶಭಂಜನ ವಿಜಯ ಸಾರಥಿ ವಿಜಯ ವಿಠ್ಠಲನ ॥
ದಾಸರಲಿ ಶುಶ್ರೂಷ ಮಾಡುವ । **ವ್ಯಾಸವಿಠ್ಠಲನೆಂದು** ಪದಗಳ ।
ತೋಷದಲಿ ತಾಂ ಪೇಳ್ದ ಶ್ರೀ ಫಣಿದಾಸರಿಗೆ ನಮಿಪೆ ॥೭॥
ವಿಜಯರಾಯರು ತಾವು ಶ್ರೀಹರಿ । ಭಜನೆ ಮಾಡಿದ ಧರ್ಮ ವಿವರಿಸಿ ।
ಸುಜನರಿಗೆ ಪೇಳಿದರು ಬಿತ್ತಿದ ಬೆಳೆಸು ಎಂದೆನಲು ॥
ದ್ವಿಜಕುಲಾಗ್ರಣಿ ಭಕ್ತಪೋಷಕ । ಸುಜನಕುಲ ಮಂದಾರ **ರಘುಪತಿ** ।
ನಿಜಪದಾಂಬುಜ ಮಧುಪನೆನಿಸುವ ದಾಸರಿಗೆ ನಮಿಪೆ ॥೮॥
ಗುರುಶಿರೋಮಣಿ ಪೂರ್ಣ ಪ್ರಜ್ಞರ । ಶರಣಸೇವಕರಾದ ಭಕುತರ ।
ಸ್ಮರಣೆಯನು ಮಾಡೆಂದು ಪ್ರೇರಿಸಿ ಗುರುಕೃಪಾ ಬಲದಿ ॥
ಒರದೆನಲ್ಲದೆ ಎನ್ನ ಯೋಗ್ಯತೆ । ಇರವೆನಿತು **ಶ್ರೀಕೃಷ್ಣ ವಿಠಲನು** ।
ಪೊರೆಯಲೆನುತಲಿ ನಮನ ಮಾಡುವೆ, ಆರ್ಯ ಸಂತತಿಗೆ ॥೯॥

## ದಾಸಪರಂಪರಾ ಸ್ತೋತ್ರ

ಪದ ೨ ರಾಗ ಕಾಂಬೋದಿ, ಆದಿತಾಳ

ದಾಸರಿಗೊಂದಿಸುವೆ ಶ್ರೀಹರಿದಾಸರಿಗೊಂದಿಸುವೆ । ಶ್ರೀ ಸಮೀರ

ಮನವಾಸಾ ಕೀರ್ತಿನುಲ್ಲಾಸ । ನಿರ್ಗುಣೋಪಾಸಕ । ಶ್ರೀಹರಿ ದಾಸರಿಗೊಂದಿಸುವೆ ||ಪಲ್ಲ|| ಚಂದ್ರಿಕ ಕಾರ್ಮುಖದಿಂದುಪದಿಷ್ಟರ । **ಸುಂ**ದರ ನಿಮಿಷಾ । ವಂದೆ **ಪುರಂದರ ದಾಸ**ರಿಗೊಂದಿಸುವೆ||೧|| ಕುಜನ ಮಾಯಿ ಗುಜುಗುಜು ವಾಗ್ಬಂಧಕ । ನಿಜಮತ ಬೋಧಕ ಸುಜನದಿ **ವಿಜಯ** । **ದಾಸ**ರಿಗೊಂದಿಸುವೆ ||೨|| ಧನ್ವಂತ್ರಿಯ ವಲಿಸಿನ್ನ ಪಮೃತ್ಯುನ್ನಿವಾರಿಸಿದ। ಸನ್ನುತ**ಗೋಪಾಲ ದಾಸ**ರಿಗೊಂದಿಸುವೆ ||೩|| ಶೌರಿ ಕಥಾಮೃತಸಾರಾ ನಿರ್ಮಿತ । ಸಾರಸುಖಪ್ರದಸೂರಿ **ಜಗನ್ನಾಥದಾಸ**ರಿಗೊಂದಿಸುವೆ ||೪|| ಭೇದ ಸಿದ್ಧಮತ ಬೋಧಕ ಗ್ರಂಥಗಳಾದರದಿಂ ಕೃತ ಸಾಧು **ಶ್ರೀ ಪ್ರಾಣೇಶ**||೫|| ಭೋಗಿಶಯನನಕಥೆ ಯೋಗಿ ಜನರ ಶಿರ । ದೂಗಿಸಿ ಪೇಳಿದ **ಶ್ರೀ ಗುರುಪ್ರಾಣೇಶದಾಸ**ರಿಗೊಂದಿಸುವೆ ||೬|| ಕೌಸಿಕನಾಜ್ಞವ ಧರಿಸಿದ ದಿವಿಯೊಳು । ಕೌಸಲ್ಯಜ ದಾಸ **ಶ್ರೀಪ್ರಾಣೇಶ** ||೭|| ಮೋದ ತೀರ್ಥರ ಮತ ವಾರ್ಧಿಕಚಂದ್ರಮ । ಕುವಾದಿ ಭುಜಗವಿಪ ನೋದ ವಿಠ್ಠಲ || ದಾಸರಿಗೊಂದಿಸಂವೆ ||೮|| ವಂದಿಸುವರಘವೃಂದಗಳೋಡಿಸಿ **ಸುಂದರ ವಿಠಲ**ನ ಪೊಂದಿಪ ಕರುಣಿಕ । ದಾಸರಿಗೊಂದಿಸುವೆ ||೯||

## ಶ್ರೀ ಪುರಂದರದಾಸರ ಸ್ತೋತ್ರ

ಪದ ೩ ರಾಗ ಪಂತುರಾಳಿ, ಏಕತಾಳ

ರಾಯರ ಭಾಗ್ಯವಿದು । ಪುರಂದರರಾಯರ ಭಾಗ್ಯವಿದು । ಶ್ರೀಯರಸನ ಸಂಪ್ರೀಯ ಪುರಂದರರಾಯರ ಭಾಗ್ಯವಿದು ||ಪಲ್ಲ|| ನಾರದ ಮುನಿವರ ಕರದಲಿ ವೀಣಾ ಧಾರಿಯಾಗಿ ಧರಾತಳದೊಳಗೆ || ಶ್ರೀರಮಣನ ವಿಸ್ತಾರ ಮಹಿಮೆಯನು ಬೀರುತ ಭವಮಂದಿರ ಪೊಕ್ಕ ||೧|| ತೊಡೆಯ ಲಿಟ್ಟು ನಿಜಮಡದಿಯ ತಾವಟದೆಲೆಯಲಿ ವಿವಿಧ ಮುನಿಗಳಿಂದ || ಸಡಗರದಲಿ ಸಂಸ್ತುತಿಸಿಕೊಂಬ ಬಾಂಜಡಿಯನು ಕಂಡವನಡಿಗೆರಗಿದನು ||೨|| ಚರಣಾಂಬುರುಹಕ್ಕೆರಗಿದ ಮುನಿಪನ ಕರವಿಡಿದೆತ್ತಿ ಸಂರಂಭಿಸುತ । ವಿನಯ ವಾಕ್ಯಗಳಿಂದ ಕುಶಲ ಪಕ್ಕದಲಿ ಕೇಳಿದ ಸುರಮುನಿಯ ||೩|| ಬಂದ ಕಾರಣ ಪೇಳೆಂದು ನುಡಿಯೆ ಸುಮುನೀಂದ್ರನು ತವಚರಣಾಂಬುಜ || ಸಂದರುಶನ ಹೊರತೊಂದು ಕಾರ್ಯವಿಲ್ಲೆಂದು ನುಡಿದ–

ನಾನಂದ ಬಾಷ್ಪದಲಿ॥೪॥ಈ ಶಿರದಲಿ ನುಡಿದಾ ತರುವಾಯದಿ ವೀತಾಂಬರ ಬಿಗಿದಪ್ಪಿ ವಿಧಿ ॥ ಜಾತನ ಕರುಣದಿ ಶ್ರೀ ತರುಣೀಶನ ಖ್ಯಾತಿಯ ತೋರವತರಿಸಿ ಧರೆಯಲೆಂದ ॥೫॥ ಈ ನುಡಿಯನು ಕೇಳ್ಯಾ ನಾರದ ಮುನಿ। ಧೇನಿಸಿ ಶ್ರೀಹರಿ ವರದಿಂದ ॥ ಈ ನಾಡಿಯೊಳಗೆ ಪುರಂದರ ಪ್ರೊಳಲೊಳ ಮಾನವರೊಳಗುದ್ಭೂತನಾದ ಗುರು ॥೬॥ ವ್ಯಾಸಮುನಿಯನುಪದೇಶದಿ ತತ್ವಜ್ಞ ಭಾಸುರ ಮತ ಪೊಂದಿವತರಿಸಿ ॥ ಶ್ರೀಶನ ಗುಣಕೀರ್ತನೆಯ ಕೀರ್ತಿಸಿ ವಿ। ಭಾಸಮಾನ ಮಹಿಮೆಯಲಿಂದೊಪ್ಪುವ ॥೭॥೭॥ ದಾಸ ಜನರ ಪರಿಪೋಷಿಸುತದಲಿ ಅಭಿಲಾಷಿಗಳೀವುತ ನಿರುತದಲಿ ॥ ಮೀಸಲ ಮನದಲ್ಲ್ಯಖಿಳ ಪದಾರ್ಥ। ರಮೇಶನಿಗರ್ಪಿಸಿ ನಲಿನಲಿದಾಡುವ ॥೮॥ ದಾಸೋತ್ತಮರ ವಿಶೇಷ ಮಹಿಮೆಗಳನೇಸು ಜನ್ಮದಿ ಪೇಳಲೊಶವಲ್ಲ ॥ ವಾಸುದೇವ ಪ್ರಾಣೇಶ ವಿಠ್ಠಲ ಪ್ರಕಾಶಿಪ ಮನದಲ್ಲಿವರನಂಬಿವರ ॥೯॥

— ಶ್ರೀ ಮಧ್ವೇಶಾರ್ಪಿತವು —

---

ಸಂಶೋಧನದಲ್ಲಿ ಈ ಪದವು ಹೊಸದಾಗಿ ದೊರೆತಿದೆ.

|| ಶ್ರೀ ಲಕ್ಷ್ಮೀ ವೆಂಕಟೇಶ ಪ್ರಸನ್ನ ||
ಶ್ರೀಗುರುರಾಜೋ ವಿಜಯತೇ

# ಶ್ರೀ ವಿಜಯದಾಸರು

ಅಜ್ಞಾನ ತಿಮಿರಚ್ಛೇದಂ ಬುದ್ಧಿಸಂಪತ್ಪ್ರದಾಯಕಂ |
ವಿಜ್ಞಾನ ವಿಮಲಂ ಶಾಂತಂ ವಿಜಯಾಖ್ಯಂ ಗುರುಂಭಜೇ ||

## ಶ್ರೀ ವಿಜಯ ದಾಸರ ಮೂಲ ಸ್ವರೂಪ ಅವತಾರಾದಿ ಆತ್ಮಕಥನ

ಸುಳಾದಿ ೪, ರಾಗ ಭೈರವಿ, ಧ್ರುವತಾಳ

ದಾಸ ಪುರಂದರರ ಪಾದವನು ಪೊಂದಿದೆನು | ಏಸು ಜನ್ಮದ ಪುಣ್ಯ ರಾಶಿ ಫಲಿಸಿತೊ ಎನಗೆ | ಕಾಶಿಗಾಗದವನು ಸಾಸಿರಕೆ ಬೆಲೆಯಾದೆ | ಸೂಸುವ ಭಕುತಿಯಲ್ಲಿ ಶ್ರೀಶನನಾಮ ಪೀ| ಯೂಷವನ್ನುಂಡೆನೊ ಉಚಿತ ಸಾಧನದಿಂದ | ಲೇಸಾಗಿ ಪುರಂದರ ದಾಸರನ ಪಾಲಿಸಿದ | ಸಾಸಿರ ಪಾದ ನಮ್ಮ ವಿಜಯ ವಿಠ್ಠಲನ್ನ| ದಾಸರ ದಾಸನಾದೆ ದೋಷ ವಿರಹಿತನಾದೆ ||೧||

— ಮಟ್ಟತಾಳ —

ಇಂದಿನ ದಿನ ವಾನಂದದಲ್ಲಿ ನಾವು | ಇಂದಿನ ದಿನ ವಾನಂದ ದಿನವು| ಇಂದಿನ ದಿನ ವಾನಂದದ ದಿನ ಪು | ರಂದರದಾಸರು ಇಂದು ವಿನಂತೆ | ಬಂದೆನ್ನ ಕಣ್ಣು ಮುಂದೀಗ ಸುಳಿಯಲು | ಸಂದರುಶನದಿಂದ ದಣಿದೆ | ನಾ | ರಂದ ವರವ ವರವ | ಪುರಂದರ ವಿಜಯ ವಿಠಲನ ಕರುಣಾ | ಸಿಂಧುವಿನೊಳಗೆ ನಾ ಪೊಂದಿದೆ ಮಿಂದೆನೊ ||೨||

— ತ್ರಿವಿಡಿ ತಾಳ —

**ಸುರಲೀಲನಾಗಿ ನಿಕಂಪನೆಂದೆನಿಸಿ ದ್ವಾ | ಪರದಲ್ಲಿ** ಜನಿಸಿದೆ ಕೆಲವು ದಿನ ಬಿಡದೆ | ತರುವಾಯ ವರ ಕಲಿಯುಗದಲ್ಲಿ ಈಗ ಜನನ | ಮರಣವಾಗುತ ಬಂದು ಧರೆಯೊಳಗೆ ಮೆರೆದು| ಹರಿಕೃಪೆಯಿಂದಲಿ ಇವರ ಸದನದೊಳಗೆ | **ತುರು ಕರುವು ಆಗಿ** ಜನಿಸಿದೆನು ಸುಕೃತದಿಂದ| ಸಿರಿ ಪತಿಸ್ಥ ವಿಷ್ಣು ನಮ್ಮ ವಿಜಯ ವಿಠ್ಠಲನ್ನ ದಾ | ಸರು ಪೇಳಲು ಕವನ| ಎರಗಲು ಕರ್ಣಕ್ಕೆ ||೩||

— ಅಟ್ಟತಾಳ —

ಶ್ರವಣ ಫಲದಿಂದ ಅವನಿಯೊಳಗೆ **ಎರಡು** । **ಅವನಿಸುರರ** ಜನ್ಮವೀಗ ಧರಿಸಿದೆ । ಕವನ ಪೇಳಿದೆ ಸಂಸಾರದಲ್ಲಿ ಇದ್ದು । ಅವಸರನಾಗಿ ಅವಧಿಯಿಲ್ಲದೆ ಮತ್ತೆ । **ಅವನಿಯೊಳಗೆ ಬಂದೆ ಭವದೂರನಾಗಿ** । ಕವಿನಾಮ ವಿಜಯ ವಿಠ್ಠಲನ್ನ ದಿವ್ಯ ನಾ । ಮವನು ಕೊಂಡಾಡುವ ಅಧಿಕಾರಿ ನಾನಾದೆ ॥೪॥

ಆದಿತಾಳ

**ಎಪ್ಪತ್ತುಮೂರು ವರುಷ** ಹೊಸ್ಪ ದೇಹದಲಿದ್ದೆ । ಇಪ್ಪಕಾಯದಲಿ ಅದರಪ್ಪಂತೆ ಬಾಳಿ ತಿರುಗಿ ಇಪ್ಪತ್ತುವಂದು ದಿನ । ತಪ್ಪದಲೆ ಸುಲಭ ನರಕ । ಒಪ್ಪದಲಿ ನೋಡಿ ತಿರುಗಿ ಬಪ್ಪೆನಯ್ಯಾ ಧರೆಗೆ । ಅಪ್ಪನಪ್ಪ ಮಹಿಭರ್ತ ವಿಜಯ ವಿಠ್ಠಲ ಒಲಿ। ದಿಪ್ಪನು ಇಂದಿನಕಿಂತಧಿಕವಾಗಿ। ಎನಗೆ ಬಿಡದೆ ॥೫॥

ಜತೆ

ಗುರು ಕೃಪೆಯಿಂದಲಿ ಅರಿದೆ ಈ ತೆರದಿಂದ ।
ಪರಮಾತ್ಮ ವಿಜಯ ವಿಠ್ಠಲನಂಘ್ರಿ ಸೇರಿದೆನೊ ॥೬॥

ಶ್ರೀ ಪುರಂದರದಾಸರು ಸ್ವಪ್ನದ್ವಾರಾತಮಗೆ
ಅಂಕಿತಪ್ರದಾನ ಆತ್ಮಕಥನ

ಸುಳಾದಿ ೫ ರಾಗ ಮೋಹನ, ಧ್ರುವತಾಳ

ಗುರು ದಾಸರಾಯರೆನಗೆ ದಾಸತ್ವ ನೀಡೋ ಕ್ರಮ । ಕರುಣದಿಂದಲ್ಲಿ ವ್ಯಾಸಕಾಶಿಯಲ್ಲಿ । ಹರುಷದಿ ಮನಮುಟ್ಟಿ ಪೇಳಿದ್ದೆ ಪೇಳುವೆನು । ನರಶಿರೋಮಣಿಗಳು ಕೇಳುವದು । ಸಿರಿ ಮಧ್ವಮುನಿಕೃತ ಸಿದ್ಧಾಂತಸಾರವನ್ನು । ಗುರುವ್ಯಾಸ ಮುನಿ ಮುಖದಿಂದ ತಿಳಿದುಕೊಂಡು । ತರತಮ್ಯ ಪಂಚಭೇದ ಮೊದಲಾದ ತತ್ವಗಳ । ಪರಿಶೋಧನವಗೈದು ಮುಂದರಿಗೆ । ಹರಿಕರುಣವ ಮಾಳ್ಪ ತತ್ವರಹಸ್ಯವನ್ನು । ಪರಿಪರಿ ಸುಳಾದಿ ಪದ ಮುಖ ಪ್ರಾಕೃತದಿ । ಸಿರಿ ವಿಜಯ ವಿಠಲನ ಪ್ರೀತಿಗೋಸುಗ । ತಿರಿ (ತ್ರಿ) ಸಾರ್ಧೋನ ಪಂಚಲಕ್ಷ ಪೇಳಿ ಎಂ (ಹೆಂ) ದು ॥೧॥

.... ಮಟ್ಟತಾಳ —

ಸಾಧು ಸಮ್ಮತವೆನಿಸಿಪಾ । ಪಾದಗಳ ಪೂರೈಸುತ । ವೇದ ಸಂಸ್ಕೃತ ವೆಂದು ಸಾದರದಲಿ ಪಠಿಸಿ । ಭೂಧರ ವಿಜಯ ವಿಠಲನ್ನ ಪಾದವನೆ ಕಾಂಬುವದು ಸತ್ಯ ಸತ್ಯ ॥೨॥

ತ್ರಿವಿಡಿ ತಾಳ

ಮುನಿಮಧ್ವ ಹೃದಯವೇ ಪ್ರಾಕೃತ ಗ್ರಂಥವಿದು । ಜನರಿಗೆ ಪೇಳ ಬೇಕಾದದೇ । ಘನವಾದ ತೈತರೇಯದಲ್ಲಿ ಪೇಳಿದಶಾಂತಿ । ಮನದಿ ಪೇಳಿ ಸುತ್ತ ತತ್ವಗಳ । ಅನುವಾಗಿ ತಿಳಿಸುತ್ತ ಶ್ರೀನಿವಾಸನ ಪಾದ । ವನರುಹ ತೋರಬಹುದು ನಂಬಿದವರಿಗೆ । ವರಜನಾಭನ ಪಾದತುತಿಪಂಥ ಶಕ್ತಿಗೆ। ಘನಪದ ರೂಪದಂಕಿತವು ಕೊಟ್ಟು ಮತ್ತು । ಅನುನಯದಿಂದ ಶಾಂತಿ ಪೇಳಿಸಿ ತತ್ವಗಳ। ಮನದಿಂದಲೀಹಬಹುದು ಸುಗುಣರಿಗೆ । ಮನುಜಗಂಕಿ ತವು ಶಾಂತಿಯು ಇಲ್ಲದಲೇ ಅನುವಾಗಿ ಪೇಳ್ದ ತತ್ವಗಳು ವ್ಯರ್ಥಕಾಣೋ। ದನುಜವಲ್ಲಭ ವಿಜಯ ವಿಠ್ಠಲನ್ನದಾಸನ್ನ । ತನಧರಿಸೋದು ಬಹುಕಷ್ಟ ಕಷ್ಟವೆಂದು ॥೩॥

॥ ಅಟ್ಟತಾಳ ॥

ಸ್ವಾತಂತ್ರ್ಯ ದಾಸನು ತುತಿಸಲು ಫಲವೇನು ? । ಸತತ ಮಾಡುವ ಪುಣ್ಯಜತಕೆ ಸಿಲ್ಲದಲೆ । ಅ । ಸತಿಯು ವ್ರತವಂತೆ। ಚ್ಯುತವಾಗಿ ಪೋಪುದು ಗತಿಗೆ ಸಾಧನವಿಲ್ಲ । ರತಿಪತಿ ಪಿತನಮ್ಮ ವಿಜಯ ವಿಠ್ಠಲನ್ನ । ಅತಿದಯ ಪಡೆದವರ ಶಿಷ್ಯನಾಗದೆ ಗತಿ ಇಲ್ಲ ॥೪॥

— ಆದಿತಾಳ —

ಗುರುದ್ವಾರವೆ ಗತಿಯೆಂಬ ಮಾನವನಿಗೆ। ಪರಮ ಶಾಂತನಿಗೆ ವರ ವೈಷ್ಣವನಿಗೆ।ದುರಬುದ್ಧಿ ಯಿರದವಗೆ ನಿರುತ ಶಿಷ್ಯನಿಗೆ ಉರುತರ ತತ್ವಗಳು ಅವಿರತ ಪೇಳಲು । ದೊರೆವನಾಕ್ಷಣದಲ್ಲಿ ವಿಜಯ ವಿಠ್ಠಲರೇಯ । ಪರ ಮ ಹರುಷ ಪಟ್ಟು ನಲಿದಾಡುವೆನೆಂದು ॥೫॥

— ಜತೆ —

ಗುರುರಾಯ ರಾಜ್ಞ ಸ್ವೀಕರಿಸುವ ನರರಿಗೆ ।
ಸಿರಿ ವಿಜಯವಿಠ್ಠಲನೆ ಪೊಳೆವನು ನಿಶ್ಚಯ ॥೬॥

ಹರಿಃ ಓಂ
॥ ಶ್ರೀ ಗುರುರಾಜೋ ವಿಜಯತೇ ॥

# ಶ್ರೀ ಹಯವದನ ವಿಠಲಕೃತ

ಪದ ೬ ರಾಗ ಉದಯರಾಗ ಝಂಪೆತಾಳ

ನೆನಸಿದವರಘನಾಶನಾ । ನೆನಸಿದವರಘನಾಶ । ಅನುಮಾನವಿಲ್ಲದಕೆ । ವನಜನಾಭನು ವೊಲಿವ । ಘನವಾಗಿ ಪಾಲಿಸುವ ದಿನ ದಿನದಲಿ ಬಿಡದೆ । ವಿಜಯ ರಾಯರ ದಿವ್ಯ ಗುಣಕರ್ಮ ಕೊಂಡಾಡಿರೊ ॥ಪ॥ ಆದಿಯಲಿ ಸುರಮುನಿಯ ಪಾದ ಸೇವೆಯ ಮಾಡಿ. । ಮೋದದಲಿ ಸುರಲೀಲ ಎಂಬಕಪಿ ತ್ರೇತೆಯಲಿ । ಆ ದ್ವಾಪರದಿನಿಕಂಪನಯೆಂಬ ನಾಮದಲಿ । ಶ್ರೀಧರನ ಸೇವಿಸುತಿದ್ದು ॥ ಕಾದಿದ್ದ ಕಲಿಯುಗದಿ ಪುರಂದರ ದಾಸರ । ಸ್ವಾದು ವಚನವ ಕೇಳಿ ತುರಕರುವು ಆಗಿದ್ದು । ಭೇದವಿಲ್ಲದೆ ಜನಿಸಿ ಬರುತ ಬರುತ ಮತ್ತೆ । ಮೇದಿನಿ ಸುರ ಜನ್ಮದಿ ॥೧॥ ವರತುಂಗಭದ್ರಾ ತೀರದ ಗ್ರಾಮಆಶ್ವತ್ಥ । ನರಸಿಂಹ ಚೀಕನಬರವಿ ಎಂಬಗ್ರಾಮ। ದಿರುತಿಪ್ಪ ಶ್ರೀನಿವಾಸಪ್ಪ ಕೂಸಮ್ಮ ಶ್ರೀ।ಗುರುಸೇವೆಮಾಡಿ ಸತತಾ॥ವರವ ಪಡೆದಳ್ಳೈ ಎರಡೊಂದು। ಪುತ್ರರನು ಹಿರಿಯಮಗನಾದ ದಾಸಪ್ಪನೆಂದಿರುವ ನಾಮದಿ ಕರೆದು ವೃದ್ಧಿಸಿಸಾಕಿ ಮುಂಜಿ ಮದುವೆಮಾಡಿ।ಇರುತಿರಲು ಕೆಲವು ಕಾಲ ॥೨॥ ಲೋಕ ಜನರಂತೆ ಲೌಕಿಕದೊಳು ಸಂಚರಿಸಿ । ಈ ಕಾಯ ಗೋಸುಗಾನೇಕ ಜನರ ಸೇವೆ ಕಾಕಪ್ಪಿಯಾಗಿ ವಸ್ತ್ರಾನ್ನ ಕಾಣದೆ ಮರುಗಿ । ಸಾಕುವಾರಿಲ್ಲೆನುತಲಿ ॥ ಬೇಕಾದ ದೇಶವನು ಚರಿಸುತಿರೆ ವೊಂದುಕಡೆ । ತಾಕಿ ಚೋರರು ವಸ್ತ್ರಾದಿಗಳ ಅಪಹರಿಸ ಯಿ । ನ್ಯಾಕೆ ಬಂಧು ಬಳಗವೆಂದೆನುತ ಅಲ್ಲಿಂದ । ನಾಕನದಿ ಮೀವೆನೆಂದು ॥೩॥ ಹಿರಿಯರಿಗೆ ಹೇಳದಲೆ ತೆರಳಿ ಯಾತ್ರೆಗೆ ಪೋಗಿ । ಎರಡೆಂಟು ವತ್ಸರದ ತರುಳ ಪ್ರಾಯದಲಿಂದ । ಸರುವ ತೀರ್ಥ ಕ್ಷೇತ್ರ ಮಿಂದು ವಿಂಶತಿ ವ । ವತ್ಸರಕೆ ತಿರುಗಿನ್ನು ಬಂದು ॥ ವರಮಾತೃ ಪಿತೃಸಹೋದರರು ಸಹವಾಗಿ ಬೆರೆತು ಮಾನವರಂತೆ ಸಂಸಾರ ವೃತ್ತಿಯಲಿ । ಎರಡೇಳು ವರುಷ ಯಿರುತಿರ್ದ ಮೆಲ್ಲನೆ ಹರಿ । ವರ ಕೃಪೆಯು ಆಗೆ ತಿಳಿದು ॥೪॥ ಮತ್ತೆ ಪೊರಟರು ಶ್ರೀಉತ್ತಮಶ್ಲೋಕಹರಿ । ಪೆತ್ತ ಗಂಗೆಯ ಸ್ನಾನ ಗಯದಲ್ಲಿ

ಪಿಂಡವ| ನಿತ್ತ ಮರಳಿ ಬಂದು ವಾರಣಾಸಿಯಲ್ಲಿ | ಉತ್ತಮರ ಸಂಗದಿಂದ ನಿತ್ಯಸ್ನಾನ ಸಂಧ್ಯ ಶುಚಿಯಾಗಿ ಮಲಗಿರಲು | ಸತ್ಯವಾಗಿ ಸ್ವಾಪದಲಿ ನರಹರಿ ಪಡೆದ | ಪುತ್ರ ನೆಬ್ಬಿಸಿದಂತೆ ದಾಸರ ರೂಪಿನಲಿ | ಹತ್ತೆಗರದು ಕರುಣದಿ ||೫|| ಸುರನದಿಯು ದಾಟಿಸಿ ಆಚೆಯಲಿ ಯಿರುತಿಪ್ಪದು | ವರ ವ್ಯಾಸ ಕಾಶಿಯ ಪುರವ ದೊರೆಯಾದ | ಸಿರಿ ವಾಸುದೇವ ಬಲು ಸುರರ ಸಂದಣಿಯೊಳಗೆ ಮೆರೆವುತಲಿ ಕುಳಿತಿರಲು | ಭರದಿಂದ ತೋರಿಸಿ ಸಿರವಾಗಿ ತುತಿಸೆನುತ ಕರವು ಪೇಳೀ ಅವರ ಕರದಿಂವ ಆದರಿಸಿ | ಸರಸ ದಿಂದಲಿ ನೀನು ಹರಿಚರಿತೆ ಪೇಳೆನುತ ಕರುಣ ರಸದಿಂವರುಹಲು ||೬|| ಎಚ್ಚೆತ್ತು ನೋಡೆಸಿರಿ ಅಚ್ಯುತನ ಮಹಿಮೆಯನು | ಬಿಚ್ಚು ವಾದರಿದೆ ರಿವೆನು ಹೆಚ್ಚು ಸಂತೋಷದಲಿ | ಕೊಚ್ಚಿ ಪೋದವು ಮನದಿ ಹೆಚ್ಚಿದ್ದ ಪಾಪಗಳು | ಸ್ವಚ್ಛ ಚಿತ್ತದಲಿ ಹರಿಯ || ನಿಚ್ಚ ಮನ ಬಂದಂತೆ ಸಚ್ಚ ರಿತ ಸಿದ್ಧಾಂತ |ಅಚ್ಚ ಸುಖತೀರ್ಥಮತ ನೆಚ್ಚಿ ಕವನವ ಪೇಳಿ | ಸುಚ್ಛ ಮನವುಳ್ಳವರ ತಿದ್ದಿ ಜ್ಞಾನ ಭಕುತಿ | ಮುಚ್ಚಗಾಣಿಕೆ ನಿತ್ತರು ||೭|| ತೃತಿಯ ಕಾಶಿಯಾತ್ರೆ ಮಾಡಬಂದಾಗ| ಉನ್ನತವಾಗಿ ನಭಗಂಗೆ ಉಕ್ಕೇರಿ ಗಗನಕ್ಕೆ | ಅತಿಶಯದಿ ಬಂದು ಮುಚ್ಚೋದರಿಯ ನಾಮದಲಿ | ಪ್ರತಿಯಿಲ್ಲದಂತೆ ತೋರೆ|| ನುತಿಸಿ ಅಲ್ಲಿಗೆ ಸೇತುಸ್ನಾನಗೈತಂದು | ರತಿ ಯಿಂದ ಮಾಡಿ ಸರ್ವರನ ಉದ್ಧರಿಸುತ್ತ | ಮಿತಿಯಿಲ್ಲವಲೆ ಕಾಸಿಸೇತು ಪರಿಯಂತರ | ಕಥೆಯಿಂದ ಕೀರ್ತಿಪಡೆದು || ೮ || ಲೋಕೋಪಕಾರಕ್ಕೆ ಹದಿನೆಂಟು ವತ್ಸರ | ನೇಕ ತೀರ್ಥಯಾತ್ರೆ ತಿರುಗಿ ವೈರಾಗ್ಯದಲಿ | ಶ್ರೀ ಕಾಂತ ಹರಿಯ ಮನದೊಳಗೆ ಧೇನಿಸಿಕೊಳುತ | ಪ್ರಾಕೃತರ ಸಂಗ ತೊರೆದು || ವೈಕುಂಠಯಾತ್ರೆ ಯುವ ಸಂವತ್ಸರದ ಶುದ್ಧ | ಆ ಕಾರ್ತಿಕ ದಶಮಿ ಗುರುವಾರ ಪ್ರಹರದಲಿ। ರಾಕೇಂದು ಬಿಂಬ ಹಯವದನ ವಿಠ್ಠ ಲನಂಘ್ರಿ | ಜೋಕೆಯಲಿ ಸೇರಿದರು.

ಪದ ೭ ರಾಗ ಕಾಂಬೋದಿ, ತ್ರಿವಿಡಿತಾಳ

ದಾಸರೆಂದರೆ ಯಿವರೆ ಹರಿದಾಸರು | ಲೇಸಾಗಿ ವಿಠಲನ ಪೂಜೆ ಮಾಡುವರು ||ಪಲ್ಲ|| ದೇಶದೊಳಗೆ ತುಂಗತೀರ ಅಶ್ವತ್ಥನರ | ಕೇಸರಿಯ ಚೀಕನಬಸವಿಯೆಂಬ || ವಾಸವಾಗಿದ್ದ ಶ್ರೀನಿವಾಸನ ಉದರದಲಿ |

ಲೇಸಾಗಿ ಜನಿಸಿದರು ಭೂಸುರರೂಪದಲ್ಲಿ||೧||ವಾರಣಾಸಿಯ ಯಾತ್ರೆ ಧೀರ ತನದಲಿ ಪೋಗಿ | ಮೂರೊಂದು ವತ್ಸರಕೆ ತಿರುಗಿಬಂದು || ಸೇರಿ ಯಾದವಗಿರಿಯ ಧಾರುಣಿಯೊಳಗೆ ಯಿ॥ ರಾರು ವತ್ಸರಯಿದ್ದು ಮರಳಿ ಪೋದರು ಗಯಕೆ ||೨|| ಪುನರಪಿ ಯಾತ್ರೆಯನು ಮಾಡುವ ಸಮಯದಲಿ | ವನಜನಾಭನು ಮನಮೆಚ್ಚಿ ಬಂದು || ಕನಸಿನಲಿ ಮನಸಿನಲಿ ಪೊಳೆ ಪೊಳೆದು | ತನ್ನಯ ಗುಣವನು ತೋರಿದನು ವಿನಯದಿಂದಲಿ ||೩|| ಮಾಳಿಗಿ ಶ್ರೀನಿವಾಸಾಚಾರ್ಯರ ಕೈಯ್ಯ | ಮೇಲಾಗಿ ಪೂಜೆಗೊಂಬುವ ವಿಠಲನು || ಆಲಯಕೆ ಬರಲಾಗಿ ತಾಳಿ ಹರುಷದಿಂದ | ಭೂಲೋಕದೊಳಗೆ ಯಾತ್ರೆಯನು ಸಂಚರಿಸುತಲಿ||೪|| ಮೊದಲೆ ಯಿವರ ಹೆಸರು ದಾಸನೆಂದಿರಲಾಗಿ। ಆಧಾರದಿಂದ ದಾಸತ್ವ ಸಿದ್ಧಿಸಿತು || ಸವಮಲ ಹಯವದನ ವಿಠಲನ ಪಾದವನು | ಹೃದಯದೊಳು ಪೊಳೆವಂತೆ ಸಾಧನವಗಂಡರು ||೫||

ಪದ ೮ ರಾಗ ಕೇದಾರಗೌಳ, ಝಂಪಿ ತಾಳ

ವರಗಳ ಬೇಡಿರೊ ಸುಜನರೆಲ್ಲ | ಸಿರಿವಿಜಯದಾಸರ ಯಿಂದು ||ಪ|| ಮಾರಾಳನಂತೆ ತೋರುತ್ತ ಜಗವ ಸಂಚರಿಸಿ। ಸಾರಗ್ರಂಥವ ತೆಗೆದು ಬುಧರಿಗೆ ಒರದು | ಮಾರಾಳ ಜನಕನಂಘ್ರಿ ಮನದೊಳು ಧೇನಿಸುತ್ತ | ಪೂರ ಭಕ್ತಿಯಲಿಂದ ಸುಖವುಂಡ ಮನಗಂಡ ನರಹರಿಯ ತೋಂಡ ||೧|| ಅಂಬು ಮಧ್ಯದಲಿ ಅಂಬುಜ ಪತ್ರಯಿದ್ದಂತೆ। ಕುಂಭಿಣಿಯೊಳು ಗೃಹಸ್ಥಾಶ್ರಮ ಧರಿಸಿ || ಶುಂಭರನುದ್ಧರಿಸಿ ಸ್ತೋತ್ರದೂಷಣವಂದೆ | ಎಂಬಂಥಗುಣಭರಿತ ನೀತ ಪ್ರಖ್ಯಾತ ಮನಸೋತ ಮಾನವರಿಗೆ ಪ್ರೀತ ||೨|| ಧರೆಯೊಳು ತುಂಗಭದ್ರ ತೀರ ಚಿಕ್ಕ ಬದರಿಯ | ಪುರದಲ್ಲಿ ಜನಿಸಿದ ಪಾಮರರ ಆದರಿಸಿ || ಪರಮಾತ್ಮ ಹಯವದನ ವಿಠಲರೇಯ ಘನ್ನಚರಿತೆ ಪೇಳಿದ ಮಹಿಮನೀತ ಸುರಳಿತ ವರದಾತ ಶ್ರೀನಿವಾಸನ್ನ ಜಾತ ||೩||

ಪದ ೯ ರಾಗ ಭೈರವಿ, ತ್ರಿವಿಡಿ ತಾಳ

ದಾಸರ ನೋಡಿರೊ ವಿಜಯದಾಸರ ಪಾಡಿರೊ || ಆಸರವಿಡಿದಿದ್ದ ದಾಸರ ಸಲಹುವ | ಲೇಸ ಕೊಡುವ ಸಂತೋಷಭರಿತರ ||ಪಲ್ಲ|| ಭಗಿರಥ ರಾಯನು ಅಂದಂದಿ ಜಾಹ್ನವಿತಂದ | ಬಲು ಆನಂದ | ವಿಗಡವಾಗಿ ಪೋದ ವಂಶೋದ್ಧಾರಕನೀತ | ಅತಿಪ್ರಖ್ಯಾತ | ಭಗವಂತನ ಲೀಲೆ ಪರಿ

ಪರಿಯಿಂದಲಿ ತಿಳಿದು। ಮನದೊಳು ನಲಿದು। ತಗವಿಡಲರಿಯುವ ಸುಬೋಧಕವನವನುಡಿದ। ಮಾಯಿ ಬಡಿದ ||೧|| ಪುರಂದರದಾಸರ ಕರುಣಕವಚವನ್ನು ತೊಟ್ಟ। ಜಗದೊಳು ಧಿಟ್ಟ। ಗುರುಭಕುತಿ ಮಾಡು ವಲ್ಲಿ ಯಿವರಿಗೆಣೆಗಾಣೆ। ಹರಿಪಾದದಾಣೆ। ಭರಿತ ಜ್ಞಾನನಲಿ ವ್ಯಾಗರಾಜ ನಂದದಿ ಚರಿತ। ಚರಿಸಿದ ತ್ವರಿತ। ಪರಮಗುರುಗಳಾದ ಪುರುತ್ತಮನ ಮತಪಿಡಿದ। ಸತ್ಯವ ನುಡಿದ|| ೨ || ಅಪನಿಯ ಮೇಲಿನ ಸಂಚಾರ ಪರೋಪಕಾರ। ಗುಣಸಾಗರ। ಕವಿಗಳ ಕಾಣುತ ಅವರಿಗೆ ಬಲು ಉಪ ಚರಿಸಿ। ಬಹು ಆದರಿಸಿ। ಖಿಪ ಖಿವ ನಗುತಲಿ ದೀನ ಜನಂಗಳ ನೋಡಿ ವರಗಳ ನೀಡಿ। ನವನವ ಮೋಹನ ಹರಿನಾಮಾಮೃತವುಂಡ ಹರಿಪಾದ ಕಂಡ ||೩|| ಕಾಮಕ್ರೋಧಂಗಳು ಲವಮಾತ್ರವನು ಧರಿಸಾ। ಕುಜನರ ಬೆರಸಾ। ಹೇಮ ಮೊದಲಾದ ಕಾಂಕ್ಷಿಯನೆಲ್ಲವ ತೊರೆದಾ। ಪರರಿಗೆ ವರದ || ಸೋಮನಂದದಿ ಬಳಿವಿಡಿದರ ಮನಸಿಗೆ ತೋರಿ। ಸರ್ವರವಿಹಾರಿ ಮಾಮನೊಹರನ ಸ್ವಾತಂತ್ರ ಅನುಭವನೆಲ್ಲ। ಈತನೆ ಬಲ್ಲ ||೪|| ಸುರ ನದಿ ಮಿಂಯಲು ಯಿವರ ಸಂಗವ ಫಲವೆಲ್ಲ। ಬಿಟ್ಟವಖುಲ್ಲ। ಗರಹೊಡಿದ ವರಂತೆ ಯಿವರಿಗೆ ನುಡಿದ ಮಾನವನು। ಅವದಾನವನು ||  ಅರಿದ ಸುಜ ನರೆಲ್ಲ ಯಿತರ ವ್ಯಾಕುಲವೆಲ್ಲ ತಡೆದು। ವಂದಿಸಿ ನಡೆದು। ಸಿರಿ ಹಯವ ದನ ವಿಠಲನು ಮುಕ್ತಿಯನೀವ। ಅವನ ಕಾವ ||೫||

ಪದ ೧೦ ರಾಗ ಮೋಹನ, ಅಟ್ಟತಾಳ

ಎಂದು ಕಾಂಬೆನೊ ಎನ್ನ ಮನೊಹರ ಬಂಧು ವಿಜಯದಾಸರ। ಜಗಕೆ ವಿಶೇಷರ। ಜ್ಞಾನಧನ ಕೋಶರ ||ಪಲ್ಲ|| ಕಂಡು ವೇಗದಿ ಚರಣಕಮ ಲಕೆ। ದಿಂಡು ವುಂಡೆ ಹೊರಳುವೆ। ಮನದಲಿ ತೊಳಲುವೆ ಪಾಪವ ಯಿಳು ಹುವೆ ||೧|| ಪಾದರಜವನು ಧರಿಸಿ ಯೆನ್ನನು। ಕಾದು ಅಸುರರವ್ವೋಡಿಸಿ। ಹಾದಿಯ ಪಿಡಿಸಿ। ಪುಣ್ಯಾವ ಜೋಡಿಸಿ || ೨ || ವೇದವಾಕ್ಯದ ಅರ್ಥ ಚನ್ನಾಗಿ। ಮೋದದಿಂದಲಿ ಶೋಧಿಸಿ|| ಪದಗಳ ಪೊಂದಿಸಿ। ಮಾಡೊರು ವಂದಿಸಿ|೩। ಕರಗಳನೆ ನಾ ಮುಗಿದು ಯೆನ್ನಯ। ಕರಕರೆಯ ಸಂಸಾರವ। ಬಿಡಿಸಿ ಉದ್ಧಾರವ। ಮಾಡೆಂಬೆ ಪಾರವ||೪|| ಮಾಡಿದರ್ಥವ ಕೇಳಿ ಹರು ಷವ ಪಾಡಿ (ತಾಳಿ) ಸತತ ಬಾಳುವೆ || ಪರರಿಗೆ ಪೇಳುವೆ। ಮನದೊಳು

ತಿಳುಪುವೆ ||೫|| ಎನ್ನ ಬೆನ್ನು ಬಿಡವೆ ಯಿರುತಿಪ್ಪ | ಘನ್ನ ಪಾಪವವ್ವೋಡಿಸಿ ಅಸರರು ಪೀಡಿಸಿ | ಪುಣ್ಯಾದನ ಕೂಡಿಸಿ ||೬|| ಹಯವದನ ವಿಠಲರೇ ಯನ ಸ | ಹಯವಾಗಿ ಧ್ಯಾನವಮಾಡುತ || ದಾಸರ ಪಾಡುತ ನಲಿನಲಿ ಬಾಡುತ ||೭||

ಪದ ೧೧ ರಾಗ ಮುಖಾರಿ ಝಂಪಿತಾಳ

ನೆನಸಿಕೊಂಡರೆ ಎನ್ನ ಎದೆ ಬಿಚ್ಚುತಿಪೆ ಅಣ್ಣ | ಕನಸಿನಂತಾಯಿತೊ ಗುರುವೆ ||ಪ|| ತೀರ್ಥಯಾತ್ರೆಗೆ ನಿಮ್ಮ ಸಂಗಡ ಪೋಗಲು । ಅರ್ಥಿಯಾಗಿಪ್ಪುದೋ ಗುರುವೆ ।। ಅರ್ಥವೆಂಬುದು ಎನಗೆ ತೃಣಪ್ರಾಯವಾಗಿಹುದು | ಸ್ವಾರ್ಥ ವಂದಿದ್ದಿಲ್ಲ ಗುರುವೆ ||೧|| ಸಜ್ಜನರು ಕಾಣಲು ತಮ್ಮ ಸುಜನೆಂದು | ಸಜ್ಜಾಗಿ ಮನ್ನಿಪರೊ ಗುರುವೆ || ದುರ್ಜನರು ಕಂಡರು ಕಲ್ಲಿಲಿಟ್ಟರು | ಬೆಲ್ಲುರಿ ಕಿದ್ದಿ(ತ್ರಿ)ಲ್ಲಾಗ ಗುರುವೆ ||೨|| ಅನಸರನಸಾರೆನ್ನ ಕಿರಿನಖಾಗ್ರದೊಳು । ಸರಿಯೆಂದು ನೋಡಿದ್ಯೆ ಗುರುವೆ || ಬರಿದಾಗಿ ಪೋಯಿತು ಎನ್ನ ಸಿರಿ ಸಡಗರ | ನರಿಯಂತೆ ನಾನಾದೆನೂ ಗುರುವೆ ||೩||

ಪದ ೧೨ ರಾಗ ಪಾಹಡಿ ತಾಳ ತ್ರಿಪುಟ

ಎನ್ನ ಕುಲವಂದು ಪಾವನವಾಯಿತೊ ! ಮನ್ನಿಸಿ ವಿಠಲ ಮನಿಗೆ ಬರಲಾಗಿ ||ಪ|| ಹುಟ್ಟಿದಾರಭ್ಯನಾ ಕಷ್ಟಬಡುತಿರಲಾಗಿ | ಜೇಷ್ಟ ಭ್ರಾತವಿಗೆ ಮನನುಟ್ಟಿ ಬಂದು || ಕಷ್ಟವನೆ ಪರಿಹರಿಸಿ ಯಿಷ್ಟಾರ್ಥವನಿತ್ತು |ಪಟ್ಟವನು ಕಟ್ಟಿ ವೈರಾಗ್ಯ ಭಾಗ್ಯದಲಿ ||೧|| ಕಮಲ ನಾಭನ ಪದಕೆ ಗಯದಲ್ಲಿ ಪಿಂಡವನು | ಅಮಲ ಮನದಿಂದಲಿ ಹಾಕಲಾಗಿ || ಮಮ ಪಿತಾ ಪಿತಾಮಹನು ನಾಯಾಗಿ ಜನಿಸಿರಲು | ಕ್ರಮದಿಂದ ಉದ್ಧಾರ ಮಾಡಿದ ಕಾರಣದಿಂದ ||೨|| ವೈರಾಗ್ಯ ಜ್ಞಾನ ಭಕುತಿಯಲಿ ಯಿವರ ಸರಿ | ಆರನಾದರೆ ಕಾಣೆ ಸೀಮೆಯೊಳಗೆ || ಕಾರುಣ್ಯದಲಿ ಈ ಪರಿ ಚರಿಸುವ ಚರಿತೆ |ಧಾರುಣಿ ಸುರರೆಲ್ಲ ಕೇಳಿ ಹಿಗ್ಗಿದರು ||೩|| ಬಾವನ್ನದಾ ಬರಿಯ ಬೇವಿನಾ ಬನವು ಯಿರೆ । ಪಾವಮಾನೀ ಬಂದು ಬೀಸಲಾಗಿ || ಪಾವನವೆ ಆಗಿ ಅದರಂದದಲಿ ಆಗುವಹು | ಈ ವಿಚಾರವ ತಿಳಿದು ಆದವು ಸಂತೋಷ ||೪|| ಪುರಂದರ ದಾಸರ ಮನೆಯಲ್ಲಿ ಆವಿನ | ಶರೀರವು ಆಗಿದ್ದ ಕಾರಣದಿಂದಲಿ ಸಿರಿಯರಸ ಹಯವದನ ವಿಠ್ಠಲನು ಮನಮೆಚ್ಚಿ | ಸಿರಿ ಪಾದವನೆ ತೋರಿ ಕವಿತೆಯನು ಪೇಳಿಸಿದ ||೫||

ಪದ ೧೩ ರಾಗ ಕಾಂಬೋದಿ, ಝಂಪಿತಾಳ

ತೆರಳಿ ಪೋದರು ಸಿರಿಹರಿಯ ಪುರಕೆ ||ಪಲ್ಲ|| ಕರಿರಾಜ ವರದನ್ನ ಸ್ಮರಿಸುತ್ತ ವಿಜಯದಾಸರು ||ಅ ಪ|| ಯುವ ಸಂವತ್ಸರ ಕಾರ್ತೀಕ ಶುದ್ಧ| ಅವಿರುದ್ಧವಿಲ್ಲದಲೆ ಶುದ್ಧದಶಿಮಿ || ನವನಾಡಿ ಗುರುವಾರ ದಿವಿಜರ ಮೇಳದಲಿ | ಭಳಿ ಭಳೆ ನಗಿಸುಖದಿಂದ ಹರಿ ಚರಿತೆ ಪಾಡುತಲಿ ||೧|| ಪಿಂಗಳನಾಡಿಂದ ಹಿಂಗದಲೆ ನಡೆತಂದು | ರಂಗ ಪ್ರಾಜ್ಞವಾಯುಪದವ ಪೊಂದಿ|| ಸಂಗೀತ ಪಾಡುತ್ತ ಸಾಂಗೋಪಾಂಗದಿಂದ। **ಮಂಗಳ ಘೋಷದಿಂದಿಗಿ ತಜ್ಞರು ನೋಡೆ** ||೨|| ಅಪ್ಪ ತಿಮ್ಮಪ್ಪನಾ ಯಾತ್ರಿ ಮಾಡಿಕೊಂಡು | ಚಿಪ್ಪಗಿರಿಯೆಂಬ ಗ್ರಾಮವಲ್ಲೆ ॥ ಚಪ್ಪಾಳೆ ನಿಕ್ಕುತಲಿ ತಮ್ಮ ದಾಸರು ನೋಡೆ । ಸರ್ಪಶಯನ ಹಯವದನ ವಿಠಲನ ಬಳಿಗೆ ||೩||

ಪದ ೧೪ ರಾಗ ಶಂಕರಾಭರಣ ಅಟ್ಟತಾಳ

ಅಗ್ನ್ಯಂತರ್ಯಾಮಿ ಪರಶುರಾಮ | ಪಗ್ಗಾ ನಿನ್ನೊಳು ಸೇರಿದನು ಹರಿಯೆ||ಪಲ್ಲ|| ಸಿರಿ ವಿಜಯದಾಸರೆಂಬ ಈ ಶರೀರವು| ಪರಮ ಪವಿತ್ರ| ವಿನು ಕೇಳೊ ಸ್ವಾಮಿ || ಧರೆಯೊಳಗೆ ಅವರಲ್ಲಿ ಅರಸಿ ನೋಡಿದರಿಲ್ಲ| ವರ ಸಾರ ಹವಿಸ್ಸವು ಅರ್ಪಿತವು ನಿನಗೆ ||೧|| ಗಂಗಾದಿ ಯಾತ್ರಿತ್ರಿವಾರವುಮಾಡಿದೆ | ಶ್ರೀ | ರಂಗ ಸೇತೂಯಾತ್ರೆ ಪಂಚವಾರ | ಹಿಂಗದೆ ಸರ್ಪ ಗಿರಿಯಾತ್ರೆ ಪರಿಮಿತಿಯಿಲ್ಲ | ಮಂಗಳ ಉಡುಪಿ ಅನೇಕ ನದಿಯ ಮಿಂದೆ ||೨|| ಶರ ವಿಪ್ರಪಾದದಲಿ ಎರಗಿದೆಯಿ | ವರಂಗ ದಿವ್ಯಭೋಜನ ವಸ್ತ್ರ ನಾನಾ| ಚಾರು ಬಂಧುಗಳ ಅನುಸಂಧಾನ ಪೂರ್ವಕದಿಂದ ನಾರಿ ಸಂಗ (ವೆಲ್ಲ) ಸರ್ವ ಸಮರ್ಪಣೆ ||೩|| ಅಷ್ಟ ಮಹಮಂತ್ರ ತತ್ವನ್ಯಾಸ ಮಾಡಿದೆ | ಪುಟ್ಟಿದದು ನದಿ ತುಂಗಭದ್ರ ತೀರ | ವೈಷ್ಣವೋತ್ತಮರಿವರ ತಾಯಿತಂದೆ ಬಲು | ನಿಷ್ಠೆಯಲಿ ತಪ ಮಾಡಿ ಪಡೆದಿಹರಿವರ ||೪|| ಈ ಪರಿಯಲ್ಲೈತಿ ಅವದಾನ|| ಶ್ರೀ ಪ್ರಾಣ ಪತಿ ಹಯವದನ ವಿಠಲ ದಯಾಳು | ನೀ ಪೇಳಿದಂತೆ ನಡಕೊಂಬರಿವರು ||೫||



## ಶ್ರೀ ವಿಜಯರಾಯರ ಸ್ತೋತ್ರ ಪದಗಳು

# ಶ್ರೀ ಗೋಪಾಲ ವಿಠಲಕೃತ

ಪದ ೧೫ ರಾಗ ಕಲ್ಯಾಣ, ಆದಿ (ಏಕ) ತಾಳ

ಚರಣಕಮಲವನ್ನು ನೆನೆವೆನಾ । ಗುರು । ಚರಣಕಮಲವನ್ನು ನೆನೆವೆನಾ । ಚರಣಕಮಲವನ್ನು ನೆನೆದು ನೆನೆದು ಹರಿ ಚರಣಕಮಲವ ಅರ್ಚಿಸುವೆನಾ ॥ಪಲ್ಲ॥ ಸುರದ್ವಿಜ ವೇಷದಿಂದಲಿ ತನ್ನ । ತ್ರೀಣಿ । ಸುರ ಗಂಗೆಯನ್ನು ಸೇವಿಸಿದವನ್ನ । ಸುರಮುನಿಯಿಂದುಪದೇಶನ್ನ । ಭೂ । ಸುರರ ಕರುಣ ಸಂಪಾದಿಸುವನ್ನ ॥೧॥ ಪರ ಮತಗಳನು ಖಂಡ್ರಿಸಿದನ್ನ । ಸತ್ಯ । ಹರಿಪರನೆಂದು ಸ್ಥಾಪಿಸಿದನ್ನ ॥ ಪರತತ್ವವನು ಅರುಹಿದವನ್ನ । ತನ್ನ ವರ । ಗುರು ಮಧ್ವಮತ ಹೊಂದಿದಾತನ್ನ ॥೨॥ ಪರಿಪರಿ ವ್ರತ ಚರಿಸಿದವನ್ನ । ಮನೊ । ದುರವ್ಯಸನ ಸಂಹರಿಸಿದನ್ನ । ಪರಿ । ಪರಿಯಾತ್ರೆ ಚರಿಸಿದವನ್ನ । ನಮ್ಮ । ಗುರುವರ ಶಿರೋರತು ನನ್ನ ॥೩॥ ಶುದ್ಧ ಸಂಪ್ರದಾಯಕ ನನ್ನ । ತತ್ವ । ತಿದ್ದಿ ಮುದ್ದಿ ಮಾಡಿದಾತನ್ನ । ಅದ್ವೈತ ಮತವ ದೂಷಿಸಿ ತನ್ನ । ಸಿರಿ ಮಧ್ವಮತಕೆ ಭೂಷಿತನ್ನ ॥೪॥ ಪರಸತಿ ಪರಧನ ತೊರೆದವನ್ನ । ತನ್ನ । ಪರಿಚಾರಕರಿಗ್ಹಿತ ವರನನ್ನ । ಹರಿನಾಮಾಮೃತವನ್ನು ಸುರಿವನ್ನ । ತನ್ನ । ಸಂಬಂದ ಶಿಷ್ಯರ ಪೊರೆದವನ್ನ ॥೫॥ ದೂರವಾಶಿ ಸರ್ವ ಕಂಡನ್ನ । ನಿಜ । ಪ್ರಾರಬ್ಧ ಭೋಗವ ವುಂಡನ್ನ । ತನ್ನ । ಆರಾಧಿಪರ ಅಘ ಖಂಡನ್ನ । ನಮ್ಮ । ನಾರಾಯಣನ ನಿಜ ತೊಂಡನ್ನ ॥೬॥ ವೈಷ್ಣವ ಸಿದ್ಧಾಂತ ವರದನ್ನ । ಅ । ವೈಷ್ಣವಾಚಾರವು ತೊರವನ್ನ । ವರ । ವೈಷ್ಣವರಿಗುಪದೇಶನ್ನ । ವೀರ । ವೈಷ್ಣವರ ದಾಸವರ್ಯನ್ನ ॥೭॥ ತಪಸೆ ಸಂಸಾರವೆಂದರಿದನ್ನ । ತನ್ನ । ಸ್ವಪನದಿ ಬಂದು ತೋರಿದನ್ನ । ಉಪದೇಶಬಲಿಕೆ ಮಾಡಿದನ್ನ । ನಿಜ ಉಪದೇಶ ಜಪಿಸಿ ಪೇಳಿದನ್ನ ॥೮॥ ವಿಜಯವಿಠಲನ ದಾಸನ್ನ । ತನ್ನ । ಭಜಿಸುವರಿಗೆ ವರದಾತನ್ನ । ಸಿರಿ । ಅಜಗೋಪಾಲ ವಿಠಲದೂತನ್ನ । ನಿತ್ಯ । ಭಜಿಸಿ ಬದುಕುವೆ ಪುಣ್ಯಾತ್ಮನ್ನ ॥೯॥

ಪದ ೧೬ ರಾಗ ಕಾಂಬೋದಿ, ಝಂಪಿತಾಳ

ವಿಜಯ ಆರಿಂದೆನೆಗೆ ಆಗುವದೊ । ವಿಜಯದಾಸರ ಕರುಣದಿಂದ

ಬ್ಬಾಹುವದು ||ಪಲ್ಲ|| ಪರತತ್ವ ವಿಚಾರ ಪರಮುನಿಷ್ಟರ ಸಂಗ| ಪರಿ ಪರಿಯ ಸುಕರ್ಮ ಪರಿಣಾಮವು ||ಪರವಾದಿಗಳ ತುಚ್ಛೀಕರಿಸಿ ಅವರುಕ್ತಿ ಗಳ ಹರಿಯೆ ಸರ್ವೋತ್ತಮನೆಂದರಿದು ಬಾಳುವಂಥ||೧||ಭೂಸುರರ ಸೇವೆ ಭೂಯಾತ್ರಿ ದಾನಧರ್ಮ| ಗ್ರಾಸವುಣ ವುಡುವೋದು ಲೇಸುಯೆಲ್ಲ| ವಾಸುದೇವನ ಗುಣಗಳಾಶೆಯಲಿ ಕೇಳುತ| ಕ್ಲೇಶಪಟ್ಟದೆ ಹರಿವುಪಾಸ ನೆಯ ಮಾಳ್ಪಂಥ ||೨|| ಜ್ಞಾನಿಗಳಿಂದ ಮಾನಕ್ಷೋಣಿಯೊಳಗೆ ಯಶಸ್ಸು| ಹೀನಜನರಿಗೆ ದೈನ್ಯವನು ಬಡದೆ || ನಾನಾ ಪರಿ ಕವನಗಳು ಜ್ಞಾನಿ ಸನ್ಮತ ರಚಿಸಿ|ಶ್ರೀನಿವಾಸನ ದಾಸಾನುದಾಸೆಂಬಂಥ||೩|| ಬಂಧು ಜನರ ಸಂದಣಿ ಛಂದುಳ್ಳ ಆಭರಣ| ನಂದದಿ ಉಡುಗರೆ ಉತ್ಸಾಹವು|ಇಂದಿರೇಶನ ಸ್ತೋತ್ರದಿಂದಲೆ ದಿನವನ್ನು | ಒಂದು ಘಳಿಗಿ ಮರೆಯದಂದಲಿ ಯಿ ಹೊಂಥ (ಯಿಪ್ಪೊಂಥ) ||೪|| ಆಪಾರ ಜನುಮ ಯಿವರ ಪಾದ ಆಶ್ರೈಸಿ| ಶ್ರೀಪತಿಯ ಧ್ಯಾನ ಮಾಡಿದ ಕಾರಣ || ಗೋಪಾಲವಿಠಲನ್ನ ರೂಪ ಧ್ಯಾನದಿ ನಿಲಸಿ | ಈ ಪರಿಯಲಿ ಯೆನ್ನ ಕಾಪಾಡುಯೆಂತೆಂಬ ||೫||

ಪದ ೧೭ ರಾಗ ಮುಖಾರಿ, ತ್ರಿವಿಡಿತಾಳ

ದುರಿತ ವಾರಿವಾಹ ಜಂಝಾನಿಳ| ಶರಣು ಶರಣು ನಮ್ಮ ಗುರುವೆ ವಿಜಯರಾಯ|| ಪಲ್ಲ|| ಆಗಾಮಿ ಸಂಚಿತ ಅಖಿಳ ಕರ್ಮವಿದೂರ| ರಾಗದ್ವೇಷಾದಿ ದುರ್ಗುಣ ವರ್ಜಿತ|| ಭೋಗ ಪ್ರಾರಬ್ಧ ಭುಂಜಿಸುವ ಭೂದೇವ| ಭಾಗವತರನ್ನ ಬಿಡದೆ ಭಜಿಸುವರ ||೧|| ಈ ಷಣತ್ರಯ ದೂರ ಇಳಿಯೊಳಗೆ ಪುಣ್ಯ| ದೇಶಸಂಚಾರ ಪಾವನ ಶರೀರ| ದಾಸರ ನಿಜಪ್ರಿಯ ಶಮದಮಯಾದಿ ಪಾವನ |ಕೋಶ ಭರಿತ ನಿತ್ಯ ಕೊಂಡಾ ಡುವ ಜನರ ||೨|| ಅಧ್ಯಾತ್ಮ ಅಮಿತಗೌಪ್ಯ ತತ್ವವಿಚಾರ| ಸ್ವಾಧ್ಯಾಯ ನಿಪುಣ ಸಕಲ ಜನ್ಮದಿ || ಅದ್ವೈತಮತ ಕೋಲಾಹಲ ಅಮಲಶೀಲ| ಸಿದ್ಧಾಂತ ಜ್ಞಾನನಿಧಿಯೆ ನಿಜಾಶ್ರಿತರ ||೩|| ಕಾಮಾದಿ ಷಡ್ರಿಪುಗಳನೆ ಗೆಲಿದು ಹೃದಯ ವ್ಯೋಮದೊಳಗೆ ನಿತ್ಯದಿ ಪೂಜಿಸುವ ಮಹಿಮ || ನೇಮದಿಂದಲಿ ನಿಮ್ಮ ಸ್ಮರಿಪ ಮನುಜರ ಘ| ಸ್ತೋಮಗಳನು ಕಳೆದು ಪಾಲಿಸುವ ಬಿಡದೆ ||೪|| ಭುವನ ಮಂಡಲದಿಪ್ಪ ಕವಿಗಳ ಶಿರೋರತುನ|

ಭವದೂರ ಭಾಗ್ಯನಿಧಿಯೆ ಭಕ್ತರ । ಪವನಾಂತರ್ಗತ ನಮ್ಮ ಗೋಪಾಲ
ವಿಠಲನ್ನ । ಸು ವನಜ ಚರಣ ಸೇವಿಯಲಿಟ್ಟ ಗುರುರನ್ನ ॥೫॥

ಪದ ೧೮ ರಾಗ ಸಾರಂಗ, ಆದಿತಾಳ

ಭಜಿಸಿ ಬದುಕು ನಿತ್ಯ ವಿಜಯದಾಸರ ಪಾದ । ರಜವು ಸೇವಿಸ
ಬ್ಯಾಗ ನಿಜವೊ ನಿಜವೊ ॥ಪಲ್ಲ॥ಕಾಮಧೇನಿನ ಕಂಡು ಕರವ ಕೊಂಡ
ತ್ತಿನ್ನ । ಗ್ರಾಮಗೋವಿನ ಪಾಲು ಕರದು ಕೊಂಬುವಿಯಾ ॥ ತಾಪ
ರಸ ಬಂಧು ಕಂಡರೆ ತಮಸು ಹಾರಿದಂತೆ । ಧೂಮ ಪೊರಡುವ ಉರಿ
ತಮವು ವೋಡುವದೆ ॥೧॥ ಕಲ್ಪವೃಕ್ಷವು ಕಂಡು ಬೇಡಿದ್ದು ಕೊಡ
ವಂತೆ । ಮಳ್ಳೀ ಮುತ್ತದ ಗಿಡವು ಕೊಡಬಲ್ಲದೆ । ಕಲ್ಪಾಯು ಕೊಡು
ಚಿಂತಾಮಣಿಯು ಕೊಡುವಂತೆ । ಅಲ್ಪ ಚಿಂತಾಕ ಬೀಜನವು ತಾ ಕೊಡ
ವದೆ ॥೨॥ ಹಲವು ಸಾಧನ ಮಾಡಿ ಬಳಲಲಿನ್ಯಾಕೆ ನೀ । ಸಿಲಿಸು ನಿ
ಮಗಳ ಧ್ಯಾನ ನಿಜ ಮನಕೆ ॥ ತಿಳಕೊಯಿವರೆ ನಿನಗೆ ಗತಿ ಪೊಂಗಿಪವ
ಒಲಿವ ಗೋಪಾಲ ವಿಠಲ ಸಂಶಯವಿಲ್ಲಿವಕೆ ॥೩॥

ಪದ ೧೯ ರಾಗ ಭೂಪಾಳಿ, ಝಂಪಿತಾಳ

ವಿಜಯರಾಯರ ನೆನೆದು ದಿಗ್ವಿಜಯು ಮಾಡಿರೊ । ಋಜುಮಾಗ
ಪಿಡಿದಿನ್ನು । ನಿಜಪುರಕೆ ಸೇರಿಪರೊ ॥ಪ॥ ಶ್ರವಣ ಮನನವು ನಿ (ಜ)
ಧ್ಯಾಸನವು ಮಾಡುವಾಗ । ಕವನವ ರಚಿಸಿ ನಿತ್ಯಕುಳ್ಳಿರುವಾಗ ॥ ಭು
ನೇಶನ ತತ್ವ ವಿವರವನು ಮಾಡುವಾಗ । ಪವನ ಮತದಿ ಸದಾಚಾ
ಕರ್ಮವನು ಮಾಡುತ॥೧॥ಹರಿದಿನದಿ ಉತ್ಸಹದಿ ಜಾಗರವ ಮಾಡ್ವಾಗ
ಹರಿಯಾತ್ರೆ ತೀರ್ಥಗಳ ಚರಿಸುವಾಗ ॥ ಹರಿನಾಮ ಕೀರ್ತನೆಯ ಒ
ದೊರದು ಪೇಳ್ವಾಗ।ಪರಿಪರಿವೃತ ಚಾಂದ್ರಾಯಣಿಯ ಚರಿಸುವಾಗ॥೨॥
ಅರಸುಗಳಿಂದ ಆದರಿಸಿಕೊಂಬುವಾಗ । ಕರಕರಿಯ ಸಂಸಾರದಿ ತೊಳಲ
ವಾಗ ॥ ಕರವೆತ್ತಿ ದಾನವನು ಕೊಡುವಾಗ ಕೊಂಬುವಾಗ । ದುರಿ
ಭಯಗಳು ತಡಹಿ ಬಿಡುವುವಾಗ ॥೩॥ ದ್ವೈತ ಅದ್ವೈತ ಪ್ರಸಂಗ
ಮಾಡುವಾಗ । ಶೈತ್ಯವಾತ ಪಿತ್ತವನು ತೊಡರಿದಾಗ ॥ ಸೀತವಾ
ಮಂತ್ರಜಪಕೆ ಕುಳ್ಳಿರುವಾಗ । ವಾತನಿರೋಧಿಸಿ ಪ್ರಾಣಾಯಾಮ ಮ
ಡ್ವಾಗ ॥೪॥ ವರಗಳನು ಬೇಡುವಾಗ ವರಗಳನು ಕೊಡುವಾಗ

ಶರಣು ಜನರಿಂದ ಸೇವೆ ಕೈಕೊಂಬುವಾಗ || ಮರಿಯದೆ ಹರಿಸ್ಮೃತಿಯ
ಮನದೊಳಗೆ ಮಾಡುವಾಗ | ಸಿರಿಯ ಸುಖ ರಸವು ಸವಿವು
ತಾವಾಗ||೫ |ವಿ ಯಿಂದು ಜನಿಸಲು ವಿರಕುತಿ ದೊರಕುವದು| ಜಾಯನ್ನೆ
ಜನನ ಮರಣವು ನಾಶವು ಎನ್ನೆ ಯಲ್ಲಿವಕ್ಕಿಂತ ಭಕುತ್ಯಧಿಕಿತ್ತು ರಾ ಎನ್ನೆ
ರಾಯರಾಯರ ತೋರ್ಪುದು ||೬|| ದಯದಿ ನಿರ್ದೋಷಜ್ಞಾನಾನಂದ
ಪರಿಪೂರ್ಣ | ಹರಿಯೆ ಸರ್ವತಂತ್ರ ಸ್ವತಂತ್ರನು|| ಸಿರಿ ಅಜಭವರೆಲ್ಲ ಪರಿ
ವಾರ ಹರಿಗೆಂದು|ಗುರು ಗತ ಗೋಪಾಲ ವಿಠಲನ್ನ ಸ್ಮರಿಸುತ ||೭||

ಪದ ೨೦ ರಾಗ ಸೌರಾಷ್ಟ್ರ, ಅಟ್ಟತಾಳ

ಸ್ಮರಿಸುವೆ ನಾ ನಿಮ್ಮ ಚರಣಕಮಲವನ್ನು ವಿಜಯರಾಯ |
ಅಯ್ಯಾ | ಶರಣ ಜನರ ಪ್ರಿಯ ಗುರು ಕರುಣಸಿಧೆ ವಿಜಯರಾಯ ||ಪ||
ಜನ್ಮಾರಭ್ಯದಿ ನಿಮ್ಮ ಗುಣಕರ್ಮಗಳು ಯೆಲ್ಲ | ವಿಜಯರಾಯ | ಇನ್ನು
ನಾ ವರ್ಣಿಸಲೆಷ್ಟರವನೊ ಗುರು ವಿಜಯರಾಯ ||೧|| ದಿವಿಜರಾವೇಶ
ದಿಂದವನಿಯೊಳುದಿಸಿದಿ | ವಿಜಯರಾಯ || ದಿವಿಜರಂದಲಿ ಪ್ರತಿದಿವಸ
ಬಿಡದೆ ಯಿದ್ದಿ | ವಿಜಯರಾಯ ||೨|| ಭಾಗವತ ಧರ್ಮವ್ರೋಷಿಸಿ ತ್ರಿರಾ
ವರ್ತಿ | ವಿಜಯರಾಯ || ಭಾಗೀರಥಿಯನು ಚನ್ನಾಗಿ ಸೇವಿಸಿದೆ ನೀ
ವಿಜಯರಾಯ ||೩|| ಕಂಚಿ ಕಾಳಹಸ್ತಿ ಶ್ರೀರಂಗ ಸೇತುಯಾತ್ರಿ ವಿಜಯ
ರಾಯ ಪಂಚವಾರವು ಸಂಚರಿಸಿ ಸೇವಿಸಿದಯ್ಯಾ ||ವಿ||೪|| ಮರಿಯಾದೆ
ಯಿಲ್ಲದೆ ವರಗಿರಿ ಯಾತ್ರಿಯ ವಿಜಯರಾಯ | ಪರಿಪರಿ ಕ್ಷೇತ್ರವಪ್ರೋಗಿ
ಪೂಜಿಸಿದ್ಯಯ್ಯ ವಿಜಯರಾಯ || ೫ || ಮಹಿಯೆಲ್ಲ ಚರಿಸಿ ಸರ್ವಕ್ಷೇತ್ರ
ಮೂರುತಿ ತುತಿಸಿದ್ಯೊ ವಿ||ಒಹಿಸಿ ದಾಸತ್ವ ವೈಷ್ಣವ ಸಿದ್ಧಾಂತ ಒರವ್ಯೊ|
ವಿಜ || ಗುರುಪದಿಷ್ಟರಾಗಿ ವ್ಯಾಸ ಕಾಶಿಲಿರುತಿದ್ದ್ಯ | ವಿಜಯ ||೬|| ಮರ
ಯೋನಿ ಬಂದ ವಂಶಸ್ಥನುದ್ಧರಿಸಿದೆ | ವಿಜಯ ||೭|| ಸ್ವಚ್ಛವಾಗಿ ಗಂಗಾ
ತೀರ ವಾಸವಮಾಡಿ ನಿಚ್ಚಾಗಿ ಶ್ರೀ | ವಿಜಯ || ಹೆಚ್ಚಾದ ಸರವಣಿ
ಮುಚ್ಚೆ ಪರಿಯತೋರ್ದೆ ವಿಚಿತ್ರ | ವಿ ||೮| ತುಂಗಾ ತೀರದಿ ಕುಳಿತು
ಮೇಲಕೆ ಉದಕ ಗಂಗೆ ಉಕ್ಕಿಸಿ ತೋರ್ದೆ | ವಿಜಯರಾಯ || ಅಂಗದ
ಮುಸುಕು ತೆರದನೊ ಕ್ಷೇತ್ರದಿ ಪಾಂಡುರಂಗ| ವಿ ||೯|| ಮಧ್ವಮತಕೆ
ಅವಿರುದ್ಧವಾಗಿ ಕವನ ಬರ್ದಾದಿ| ವಿಜಯರಾಯ| ಶಬ್ದ ಸಂಗುತಿಯಿಂದ

ಸಿದ್ಧಾಂತ ತತ್ವ ಮುದ್ದೆ ಮಾಡಿದೆಯೊ । ವಿ ॥ ೧೦॥ ತದ್ದಿತತ್ವಸಾರಸುಳಾದಿ ಪದಗಳು ಬುನ್ಗಿಲಿ । ವಿಜಯರಾಯ । ತದ್ವಿವಿಧವಿಂದು ಹೃದಯಾಲ ಯದಿ ಹರಿಯ ಎದ್ದು ಕುಣಿಸಿದಿಯೊ ॥ ವಿಜಯ ॥ ೧೧ ॥ ಸದಾಚಾರ ಸಂಪತ್ತು ಮಧುಕರ ವೃತ್ತಿಯಲಿ(ವಿಧಿಯಲಿ)।ವಿ। ಕನನ್ನ ಉಂಡರಿಯಾರು ಶಿಷ್ಯಜನಸಂಘ ಸಪಕಾಲ ॥ವಿ॥೧೨॥ ಭಕ್ತರ್ಗೆ ಬಂನಪಪ್ಪೃತ್ಯು ಜಯಿಸಿ ಆಯುವನಿತ್ತೆ । ವಿ ॥ ಪ್ರತ್ಯಕ್ಷವಲ್ಲವೆ ಮನವೆ ಯಿದಕೆ ಸಾಕ್ಷಿ ಅತ್ಯಂತ ಮಹಿಮ ಮಹಿವೆ ॥ ವಿಜಯರಾಯ ॥೧೩॥ ನಿತ್ಯನ್ನದಾನ ಪುತ್ರೋ ತ್ಸಹಗಳನಿತ್ತು ಸತ್ಯ ಶ್ರೀ ॥ವಿ॥ ಹತ್ತೆಂಟು ಮದುವೆ ಮುಂಜಿಗಳ ಮಾಡಿಸಿ ನಿನ್ನ ಭೃತ್ಯರ ಪೊರದ್ಯೊ ॥ವಿ॥೧೪॥ ಪ್ರತ್ಯಕ್ಷವಾಗಿ ಹತ್ತಿಪ್ಪತ್ತು ಜನರಿಗೆ ತತ್ವೋಪದೇಶ ಮಾಡಿ ॥ ವಿಜಯ ॥ ಹೃತ್ಕಮಲದಿ ಹರಿಯ ತಿಳಿಸಿ ಸದ್ಗತಿಗಭಯಾವಿತ್ತೆ ॥ ವಿ ॥ ೧೫ ॥ ಎಲ್ಲರಲಿ ಸಿರಿವಲ್ಲಭನಂಶವ ನಿಲ್ಲಿಸಿ ವಿಜಯರಾಯ ॥ ಎಲ್ಲ ಬಗೆಯ ಸೇವೆಕೊಂಬುವೆ ನಿನ್ನ ಬಲ್ಲವರಾರೊ । ವಿಜಯ ॥ ೧೬ ॥ ಎನ್ನಿಂದಲೇನೇನು ಆಗೊ ಸಾಧನವೆಲ್ಲ ನಿನ್ನದೇ । ವಿಜಯರಾಯ ॥ ಎನ್ನ ಸಾಮರ್ಥ್ಯವೇನು ಜನ್ಮಜನ್ಮಾಂತರಕೆ ನಿನ್ನಬಿಡಸೆ ॥ವಿ॥೧೭॥ ಈಗ ಈ ಯುಗದೊಳು ಸಾಧನವೆಂಬುದು ನಾ ಕಾಣೆ ॥ ವಿ ॥ ಯೋಗಿ ನಿನ್ನ ಕರುಣವಾಗಿದ್ದವಗೆಲ್ಲ ಸಾಗಿ ಬರುವದೊ ॥ವಿ॥೧೮॥ ಬಲ್ಲಿದ ನೀ ಒಂದು ರೂಪದಿಯೆನ್ನಲಿ ನಿಲ್ಲಿಸಿರಲಾಗಿ ॥ವಿ॥ ಎಲ್ಲ ಜನರು ಬಂದು ಯಿಲ್ಲಿ ವಾಲ್ಗೈಸಿನ್ನು ಎಲ್ಲ ವರವ ಬೇಡುವರೊ । ವಿಜಯರಾಯ ॥೧೯॥ ನಿಮ್ಮ ಪುಣ್ಯವಶೇಷ ಇನ್ನುವುಂಬುವೆ ನಾನು ಬಣ್ಣಿಪೆನೊ ॥ವಿ॥ ಎನ್ನ ಪೊಂದಿದವರು ನಿನ್ನ ಪೊಂದಿವರು ಇನ್ನು ಕೇಳು ॥ ವಿ ॥ ೨೦ ॥ ಪರಮ ಪುರುಷ ನಿಮ್ಮ ಕರುಣ ಕವಚಸ್ತೋತ್ರ । ಪಿರುತ ಮಾಡುವ ಭಕ್ತರ್ಗೆ ॥ ವಿ॥ ಸಿರಿ ಮಹರಾಜ ಗೋಪಾಲ ವಿಠಲವೊಲಿಸು ಕರದು ಕೈಪಿಡಿವನಯ್ಯ ವಿಜಯರಾಯ ॥೨೧॥

ಪದ ೨೧ ರಾಗ ಕಾಂಬೋದಿ, ಝಂಪಿತಾಳ

ಗುರು ವಿಜಯ ವಿಠಲ ನಿನ್ನ ಚರಣ ಯುಗಳಿಗೆ । ಎರಗಿ ನಮೊ ನಮೊ ಯೆಂದೆನೊ । ಹರುಷದಲಿ ನೀ ನಮ್ಮ ಗುರು ವಿಜಯದಾಸರನು । ಕರುಣಿಸಿ ತಂದು ತೋರೋ ಬಾರೊ ॥ಪಲ್ಲ॥ ಹಿಂದೆ ನೀ ನವರ ಪುರಂದರ

ದಾಸರ । ಮುಂದರದಲ್ಲಿ ಸೃಜಿಸಿ । ಛಂದಛಂದದ ಪರತತ್ವ ಕವನಗಳನ್ನು । ಕುಂದುಯಿಲ್ಲದಲೆ ನುಡಿಸಿ ॥ ಸಂದರುಶನವಿತ್ತು ಸಲುಹಿ ಆಗಾಮಿಯನು ಮುಂದನಂಚಿತವನಳಿಸಿ । ನಿಂದ ಪ್ರಾರಬ್ಧ ಉಣತಂದಿಟ್ಟು, ಈ ಧರಿಗೆ । **ಮಂದ ಜನರನ್ನು ಪೊರಿಯೊ** (ದ್ಯೋ) ಪಿರಿಯಾ ॥೧॥ ೧೭ಲು ಮೂರೆ ರಡೊಂದು ಜನರು ಇವರಿಂದ । ಉದ್ಧಾರಗತಿಯನು ಚಿಂತಿಸಿ । ಮೂರು ಜನ್ಮಗಳಲ್ಲಿ ಬಿಡದೆ ಮೂಲವು ಕೆಡದೆ । ಸೇರಿ ಮತ್ತಿವರ ಬಳಿಯಾ ॥ ಶ್ರೀರಮಣ ನಿನ್ನ ವಿಚಾರವನು ಮಾಡುತಾ । ಸಾರಿ ಸಾರಿವರ । ವರವ ಪಡೆದು। ಕಾರಣರು ನಮಗಿವರು ಕರ್ಮಮೂಲವ ಕೆಡಿಸಿ (ಸ) ।ನಾರಾಯಣನೆ ನಿನ್ನ ಪರನೆಂದು ತೋರಿದ ॥೨॥ ನೀನು ನಡೆ (ಯಲಿ) ಯನಲು ನಡೆದು । ನೀನು ನುಡಿ(ಯಲಿ) ಯೆನಲು ನುಡಿದು । ನೀನು ಪಿಡಿಯೆನಲು ಪಿಡಿದು । ನೀನು ಮಾಡಿಸೆ ಮಾಡಿ । ನೀನು ನೋಡಿಸೆ ನೋಡಿ । ನೀನು ಕುಡಿಸಲು ಕುಡಿವೆನೊ ॥ ಏನೇನು ಪರಿ ಪರಿಯಾನು ಮಾಡಿದ ಕರ್ಮ। ಶ್ರೀನಾಥ ನಿನಗರ್ಪಿಸಿ। ನಾನಾಪರಿಯಲಿ ನಮ್ಮನ್ನಕೂಡಿ ಕೊಂಡಾಡಿನ್ನು । ಜ್ಞಾನಬೋಧಿಸಿ ನಿನ್ನ । ಧ್ಯಾನದೋಳಿಪ್ಪಂಥ ॥೩॥ ನಿನ್ನಂತ ನಿಸ್ನಿ । (ರ) ಸೃಷ್ಟ್ಯಾದಿ ಅಷ್ಟ ಕರ್ತೃತ್ವಗಳು। ಚನ್ನಾಗಿ ಮನದಿ ತಿಳಿದು । ನಿನ್ನವ್ಯಾಪ್ತತ್ವವನು । ಯಿನ್ನು ಹುಡುಕುತ ತನ್ನು । ಮನ್ನಬಂದಂತೆ ನಡದು । ಪುಣ್ಯ ಪಾಪಂಗಳಿಗೆ ಹಿಗ್ಗಿ ಕುಗ್ಗದೆ ನೋಡಿ । ನಿನ್ನ ಪ್ರೀತಿಯೆಂದರಿದು । ಸನ್ಮತಿಯಿಂದ ಸಕಲ ಸಜ್ಜನರ ಸಮ್ಮತಿಸಿ । ನಿನ್ನ ತುತಿಸುತ ಮೆರದ (ವ) ಘನ್ನದಯಾನಿಧಿಯೆ ॥೪॥ ಆವದಿನ ನೀನವರ ಸೇವೆ ದೊರಕಿಸಿ ಯೆನಗೆ । ಸಾವಾಸ (ಸಹವಾಸ) ದಲ್ಲಿ ಯಿತ್ತು । ಕಾವು ಘನವಾಗಿ ಪ್ರತಿಕ್ಷಣಕೆಸ್ಮರಣಿಗೆ ಅನು।ಭವಕೆತಂದುಕೊಳು(ಡು)ತ॥ಜೀವಿಸುತ ನಮ್ಮ ನಾ । ಪೊರೆದು ರಕ್ಷಿಸಿ ಬಿಡದೆ । ಪಾವನದ ದಾರಿ ತೋರಿ । ಈ ವಿಧದಲಿ ನಿನ್ನ ಯಿರವ ತೋರುತ ಜಗದಿ। ಧೀರರನು(ಧೀವರನ) ಮಾಡಿ ನೀ ಅಲ್ಲಿ ಪೂಜಿಯುಗೊಂಬ ॥೫॥ ಎಂದಿನಂತದಿ ನಿನ್ನ ಯೋಚಿಸುತ ಬಪ್ಪರೊಳು। ಇಂದು ಎನಗೊಂದು ಪರಿಯೂ। ಸಂದೇಹವನು ತೋರಲಾಗಿ ಮನದೊಳು ಎನಗೆ। ನಿಂದಿದು ಯೇಕ ಸ್ಥಳವಿ ।। ನೊಂದ ದಣಿವಿಕೆ ಯೇನು ನೀನು ಬಲ್ಲಿಯೆ ಮನಕೆ । ತಂದು ಅನುಭವಕೆ ತೋರು । ಛಂದ

ತೊರನು ಅವರ ಬಿಡಿಸಿ ಯೆನ್ನಿಡುವದು। ನಂದ ನಂದನ್ನ ಕಂದ ಮುಕುಂದ ||೬|| ಎಲಿ ನೀನುಂಟು ಮತ್ತಲ್ಲಿ ಅವರುಂಟೆಂಬ। ದೆಲ್ಲ ಬಲ್ಲರು ಸರಿಯೆ। ಅಲ್ಲಿದ್ದು ನೀನು ನಮಗಿನ್ನು ತಿಳಿಸುವ ಕರ್ಮ। ಯಿಲ್ಲಿ ಈಗಾಗರಿಯುದು|| ಎಲ್ಲ ಸಕಲವು ಕರ್ಮ ಅಲ್ಲಿ ವಪ್ಪಿಸಿದೆಪ್ಪೆ। ಬಲ್ಲದ್ದು ಮಾಡು ಧೊರಿಯೇ। ಎಲ್ಲ ನಾಮಕ ನೀನೆ ಗೋಪಾಲ ವಿಠ್ಠಲ। ಅಲ್ಲಲ್ಲಿ ಯೇನಯ್ಯ ಯೆಲ್ಲ ಭಕುತರೊಡಿಯ ||೭||

# ಶ್ರೀ ಮೋಹನ ವಿಠಲ ವಿರಚಿತ ಸ್ತೋತ್ರಗಳು

ಪದ ೨೨ ರಾಗ ಕಲ್ಯಾಣಿ, ತ್ರಿವಿಡಿ ತಾಳ

ಪರನು ಹರುಷವಾಯಿತು ವಿಜಯರಾಯ। ಗುರುಗಳಂಘ್ರಿಯನೆ ಕಂಡು ||ಪಲ್ಲ|| ಪರಿಪರಿ ಜನುಮದ ಘರಘರವಘಗಳು। ತಿರುಗಿ ನೋಡದ ಲೇಪ ತೆರಳಿ ಪೋದವುಯಿಂದು || ಅ ಪ|| ಕಾನನದೊಳು ತಿರುಗಿ ತನ್ನ ಮಾತೆ। ಯಾರು ಕಾಣದೆ ಚಿಂತಿಸಿ|| ಧೇನಿಸಿ ಅರವಲಕ್ಷಣದೊಳಗವಳ ವತ್ಸ ತಾನು ಕೂಗಲು ಕಾಮಧೇನು ಒದಗಿದಂತೆ ||೧|| ತರಣಿಯು ಕಿರಣದಿಂದ ತಪಿಸಿ। ನೆರೆಬಾಯ ಬಿಡುವುತ ಬಪ್ಪರನ || ಕರವ ಪಿಡಿದು ಸುರತರುವಿನಡಿಯಲ್ಲಿ। ಕು। ಳ್ಳಿರಿಸಿ ಕುಡಿಯೆ ದಿವ್ಯ ಸರಸಿಯ ಸಿಕ್ಕಂತೆ ||೨|| **ಧನವ ಪೋಗಾಡಿ ಕೊಂಡುನರನುಬಲು**। ಮನಕ್ಲೇಶದಿಂದಿರಲು || ಘನಸುಹಿಮನೆ ನಮ್ಮ ಮೋಹನ ವಿಠಲನ ಕೈಯೊಳಗ ಚಿಂತಾಮಣಿಯನು ಯಿತ್ತಂತೆ ||೩||

ಪದ ೨೩ ಶ್ರೀರಾಗ, ರೂಪಕತಾಳ

ಸರಿಯುಗಾಣೆನೆಲ್ಲಿ ಜಗದೊಳು। ಕರವ ಮುಗಿದ ರಘುವ ತೆಗೆವ। ಗುರ ವಿಜಯ ದಾಸರಿಗಿನ್ನು ||ಪಲ್ಲ|| ಭೇದವಿಲ್ಲಯೆಂಬ ಮಾಯವಾದಿ **ರಾಮಶಾಸ್ತ್ರಿ ಬಂದು**। ಪಾದಕೆರಗೆ ಅವನ ತನುವ ಭೇದಿಸಿ ಸುಜ್ಞಾನ ವಿತ್ತೆ ||೧|| ವಾದಿಗಿರಿಗೆ ಇಂದ್ರಸ್ಥನೀಯರಾದ ಗುರುಗಳಿಂದ ಮು। ದ್ರಾಧಾರಣಿಯ ಕೊಡಿಸಿ ಪರನು ಆದರದಿಂದ ಅವನ ಕಾಯ್ದೆ || ೨ || ಭಸುಮವನ್ನೆ ತೆಗಸಿ ಅವನ ನೊಸಲಲೂರ್ಧ್ವತಿಲಕ ಪಚ್ಚಿಸಿ। ಎಸವ ಪಂಚಮುದ್ರೆ ದ್ವಾದಶನಾಮಧರಿಸಂತೆ ಮಾಡಿದೆ ||೩|| ಶ್ರೀ ಮನೋಹರ

ಒಡೆಯ ವಿರಂಚಿಯೊಳ್ಯೋಪ...ಶ ಸುರರು ಆತನ । ತಾಮರಸಪದ ಧೂಳಿಗ ಯೆಂಬ ಈ ಮರಿಯಾದಿಗಳ ಪೇಳಿದೆ ||೪|| ಧರೆಯೊಳಿದ್ದ ಭಕ್ತಜನರ ಪೊರೆವ ನೆಂಬ ಬಿರಿದು ಪ್ರೊಹಿಸಿ । ಸಿರಿ ಮೋಹನ್ನ ವಿಠಲನಂಘ್ರಿ ಸರಸಿರು ಹವ ಎನಗೆ ತೋರ್ವೆ ||೫||

ಪದ ೨೪ ರಾಗ ಮಧ್ಯಮಾವತಿ, ತ್ರಿವಿಡಿತಾಳ

ವಿಜಯದಾಸರ ಭಜನೆ ಮಾಡಿರೊ । ವಿಜಯದಾಸರ ಭಜನೆ ಮಾಡಲು । ಅಜನ ಜನಕ ನಿಜನಿಗೊಲಿದು । ಕುಜನ ಸಂಗತಿ ತ್ಯಜನ ಮಾಡಿಸಿ । ಸುಜನರ ಪಾದಾಂಬುಜಪಲ್ಲಿಡುವ || ಪಲ್ಲ || ಶುದ್ಧ ಮಂದರನ್ನ ಉದ್ಧಾರಾರ್ಥವಾಗಿ । ಮಧ್ವರಾಯರ ಮತಾಬ್ಧಿಯೊಳು ಪುಟ್ಟಿ ।ಸಿದ್ಧಾಂತ ಸ್ಥಾಪಿಸಿ ಗೆದ್ದುವಾದಿಗಳ । ಹೆದ್ದೈವವೇ ಅನಿರುದ್ಧನು ಯೆಂದು । ಪದ್ಧತಿಂವ ಪೇಳಿಸಿದಿ ವೈಷ್ಣವರನ್ನ । ಶುದ್ಧಾತ್ಮರ ಮಾಳ್ಪ ಉದ್ಯೋಗದಿಂದಲಿ। ಹದ್ದನ್ನೇರಿಬಪ್ಪ ಪದ್ಮನಾಭನ್ನ। ಹೃದ್ಧಯಮೊಳಿಟ್ಟ ಸದ್ಗುರುರಾಯ ||೧|| ಭೂಸುರಾಬ್ಧಿಗೆ ತಾರೇಶನಂತೊಪ್ಪುವ । ಸಾಸಿರ ನಾಮದ ಶೇಷಗಿರಿ ಶ್ರೀನಿ । ವಾಸನ ಯಾತ್ರೆಯ ಲೇಸಾಗಿ ಮಾಡ್ಯತಿ ಸ । ಹಾಸ ಸಂತೋಷದಿಂವಲೆ || ವಾಸುದೇವನ ಮಾನಸದೊಳಿಟ್ಟು ದು । ರಾಶೆಯ ತೊರೆದು ಕ್ಲೇಶವ ಪಡವಲೆ । ಮಿಸಲ ಪುಣ್ಯದ ರಾಶಿ ಫಳಿಸಿ । ಕೇಶವನ ನಿಜ ದಾಸನೆಂದೆನಿಸ ||೨|| ಪುರಂದರದಾಸರ ವರಕುಮಾ । ರರವಿಂದ ಪಾದ । ಶಿರದಿ ಧರಿಸಿ । ಹರಿ ನಾಮೋಚ್ಚರಣೆ ಮಾಡುತ್ತ । ಹರುಷದಿಂದ ಪದ ರೂಪದಿ ।। ಧರೆಯೊಳಗೆಲ್ಲ ದುರ್ಜನರಾಯೆಂವೆನಿಸಿ । ಮೆರೆವುತ್ತ ನಿತ್ಯ ಸಿರಿ ಮೋಹನ್ನ ವಿಠಲನೆ । ಪರನೆಂದರುಹು ಮಾಡಿದ ಸುರತರುವಾದ ||೩||

ಪದ ೨೫ ರಾಗ ಧನ್ಯಾಸಿ, ಆದಿತಾಳ

ತಂದೆ ವಿಜಯರಾಯ ವ್ಯಾಳಿಗೆ । ಬಂದ್ಯೊ ವಿಜಯರಾಯ || ಹಿಂದೇಸು ಜನ್ಮವು ಮುಂದೇಸು ಜನ್ಮವು । ಒಂದು ತಿಳಿಯದೆಂದೆಗು ಯೆನ್ನಯ ||ಪಲ್ಲ|| ಸೂರ್ಯನ ಸುತನಂತೆ ಅಲ್ಲಿ ಮಹ । ಶೌರ್ಯದೂತನಂತೆ || ಕಾರ್ಯಾಕಾರ್ಯವು ತಿಳಿಯದೆ ನಿನಪರಿ । ಚಾರ್ಯನ ಯೆಳೆತರೆ ಭಾರ್ಯಳು ಮೊರೆಯಿಡೆ ||೧|| ಅವೇ ಧೈರ್ಯನೋಡಿ । ಸುಮತಿತಾ ಹೃದಯಬದ್ಧಮಾಡಿ ||, ಮಧುಸೂದನನೆ ಮೋದ ತೀರ್ಥರಿಂ ।

ದೊದರಿದ ಳೊವರಿದಳ್ ವಿಜಯರಾಯರೆಂಬ ||೭|| ಶರಗಳನೇ ಕಟ್ಟಿ ಯೆಳೆಯುತಿರೆ | ಧೊರೆಗಳನೇ ಮುಟ್ಟಿ || ಸಿರಿ ಮೋಹನ ವಿಠಲನ ಪದವ ತೋರಿ | ಧರಿಗೆ ತಂದುಬಿಟ್ಟಿ ಕರುಣಾಳುವೆ ಯೆನ್ನ ||೩||

ಪದ ೨೬ ರಾಗ ಕಲ್ಯಾಣಿ, ಅಟ್ಟತಾಳ

ದಾಸರ ನೆರೆನೆಂಬಿರೊ ಚಲುವ ವಿಜಯದಾಸರ ನೆರೆನಂಬರೊ||ಪ|| ದಾಸರ ನೆರೆನಂಬಿ ಯೇಸು ಜನ್ಮದ ಭವ | ಪಾಶವ ಹರಿಸಿ ರಮೇಶನ್ನ ಮಹಿಮೆಯ | ಲೇಸಾಗಿ ವಿರಚಿಸಿ ಪರಮೋಲ್ಲಾಸದಲಿ ಜೀ | ವೇಶ ಭೇದವ ಯೇಸು ಬಗೆಯಲಿ ತಿಳಿಯುತಲೆ ನೆರೆ | ದೋಷ ಬುದ್ಧಿಯ ನಾಶಗೈವರ ||ಅ. ಪ|| ಸಂದರುಶನ ಮಾತ್ರದಿಂದ ಬಾಹೊದು ನದಿ | ಸಿಂಧು ಸ್ನಾನದ ಫಲವೊ ಭಾವಶುದ್ಧ | ದಿಂದ ವಂದಿಸೆ ನಿರುತ ಮಾಡಲು ಭವ | ಬಂಧನವ ಪರಿಹರವು || (ದುಡುಕು) ಇಂದು ನಿಜವು ಕುಂದುಗೊರಳ ಮು| ರೇಂದ್ರವಂದ್ಯ ಮುಕುಂದನನು ಬಿಡ | ದಂದು ಭಜಿಪ ಪುರಂದರನ ಪದ| ದ್ವಂದ್ವಯುಗಳರವಿಂದ ಮಧುಪರ ನಂಬದಲಿ ||೧|| ನರಮಾತ್ರರಿವರೆಂದು ನೆರೆ ತಿಳಿಯುವೆ ಸುಂ | ದರನಾದ ಗುಣಗಣಗಳಿಂದಲಿ | ಸಿರಿವರನ ಚರಿತೆಯು ನಮಗೆ ಬಂದ ಕಂಟಕ ಬಂಧ | ಹರನೆಂದು ಮನದಲ್ಲಿ ನೆರೆ ತಿಳಿವರಿಂದ || (ದುಡುಕು) ಪರಮ ಧನ್ಯರು ಧರೆಗೆ ಯಾದವ | ರರಸೆ ಪೊರವನು ಕರುಣದಲಿ **ಭೂಸುರರ ಗುರುಧೊರೆ** ನಿರುತ ಪೊರೆವನು | ಸುರರವರ ಕಾದಿಹರು ಯೆನಿಪರ || ೭ || ಅವನಿಯೊಳಿವರನ ವೊಲಿಸಿದರೆ | ಪಾವನವಾಗಿ ಪೋಗುವರು | ಭುವನದೊಳು ಕವಿಗಳೆನಿಸುತಿಪ್ಪರು | ಅವತರಿಸಿ ಮೂರು||(ದುಡುಕು)ಭುವನ ಭವಕೆ ಪಾವಕರಾಗಿ ಭೂಸುರರ| ಪಾವನವ ಮಾಡುವ | ಭುವನನಿಧಿಸುತೆ ರಮಣಿ ಸಿರಿ ಮಾ | ಧವ ಮೋಹನ ವಿಠಲರೇಯನ | ಅವಸರವ ಕಿಂಕರರ ಭಜಕರು ||೩||

ಪದ ೨೭ ರಾಗ ಕಾಂಬೋದಿ, ಅಟ್ಟತಾಳ

ನಿನ್ನ ಪಾದವನಂಬಿ ಅನ್ಯರಾಶ್ರಯವ್ಯಾಕೆ | ಚನ್ನಗುರು ವಿಜಯ ರಾಯ ||ಪಲ್ಲ|| ಇನ್ನೇನು ಯಿನ್ನೇನು ಯೆನ್ನ ಕುಲಕೋಟಿ ಪಾ | ವನ್ನ ಮಾಡುವ ಸಿಕ್ಷಯಾ ಜೀಯ || ಅನುಪಲ್ಲ || ಪಂಚಮುಹ ಪಾತಕರೊಳಗೆ ಮೂರನೇಕಕ್ಷಿ | ಕಾಂಚನ ದ್ರೋಹಿ ನಾನು ಯೆನ | ಮುಂಚೆ ಬಂದಾಗೆ

ಕೈಬಿಡದೆ ಪ್ರಾ। ಪಂಚವಸು ಬಿಡುಯೆಂದು ನುಡಿದೆ ಯೆನ್ನ । ಸಂಚಿತಾಗಮವೆಲ್ಲ ತೊಡದೆ ಯೆನ್ನ ।ಕಂಚು ಕಟ್ಟೊಳಿ ಕಲ್ಲೊತ್ತಿನ ಮೇಣ್ ಕಾಶಿಗೆ। ಸಂಘೇಟು ಮಾಡಿನಡದೆ ಬಿಡದೆ ||೧|| ವ್ಯಾಸರಾಯರ ಗುಹೆಯೊಳಗೆ ನವಸ । ನ್ಯಾಸಿಗಳ ಸಮಕ್ಷಮದಲಿ ಯೆನ್ನ । ದಾಸನಾಗೆನುತ ನೀ ಪೇಳ್ದೆ ಯೆನ್ನ । ವಾಸಿ ಪಂಥಗಳೆಲ್ಲ ತಾಳ್ದಿವೊಲಿದು । ದೋಷಾಂಕುರಗಳೆಲ್ಲ ಶೀಳ್ದಿ ಸ್ವಾಮಿ || ಶ್ರೀಶ ಸರ್ವೋತ್ತಮನೆಂದು ನೀ ಪೇಳಿ ಸಂ। ತೋಷದಿಂದೆನ್ನ ಪೊರಪೆ ಬಿಡದೆ ||೨|| ರಾಜಾಧಿರಾಜರು ಬಂದು ಪ್ರಾರ್ಥಿಸಲು। ಗುರು । ರಾಜ ನೀನವರ ಮನೆಗೆ ಪೋಗಿ ದಿವ್ಯ। ಭೋಜನವ ಮಾಡಿ ಫಲಗರೆವೆ ನಿತ್ಯ। ರಾಜಧಾನಿಗೆ ಪೋಗಿ ಒರುವೆ ಉಡು। ರಾಜನಂದದಿ ನಿತ್ಯ ಮೆರವೆ ಯೆನ್ನ । ಪೂಜಾ ಫಲವೆಂದು ಆವಾಗೆ ನಿನ್ನ ಪದ । ರಾಜೀವ ಧ್ಯಾನಿಸುವೆ ಸ್ವಾಮಿ ||೩|| ಪುಶಿಯು ಜಗವೆಲ್ಲ ದೈವವು ತಾನೆನುತ । ಅಸಮ ವೇದ ಪೌರುಷ ಯೆಂಬಂಥ । ಭಸುಮಧಾರಿಯನೆ ಕರವೆ ಅವನ । ಅಸುರಭಾವವನೆಲ್ಲ ಮುರಿದೆ ನಮ್ಮ । ಬಿಸಿಜಾಕ್ಷ ಪರನೆಂದು ಪೊರದೆ ಸ್ವಾಮಿ || ಎಸೆವ ದ್ವಾದಶನಾಮ ಪಂಚಮುದ್ರಿಯನಿಡಿಸಿ । ನಸುನಗುತಲವನ ಪೊರದೆ ಬಿಡದೆ ||೪|| **ಎನ್ನೊಬ್ಬನ ಪಾಲಿಸಿದ್ದು ಬಲು ಗುರುತಲ್ಲ । ಚಿನ್ನ ವರದನ ಸಂತತಿಯೆಲ್ಲ** । ನಿನ್ನ ಪಾಲಿಗೆ ಬಿಟ್ಟದ್ದಲ್ಲ । ವಾಕು। ಅನ್ಯಥಾ ಮಾಡುವದು ಸಲ್ಲ । ಮೋ । ಹನ್ನ ವಿಠ್ಠಲ ಯಿದನು ಬಲ್ಲ ಮುನ್ನಾ । ಪನ್ನಗ ಶಯನ ಪ್ರಸನ್ನನಾದದಕೆ ಯಿದು । ಎನ್ನ ಮನೋರಥ ಸಿದ್ಧಿಯೊ ಸ್ವಾಮಿ ||೫||

ಪದ ೨೮ ರಾಗ ರೇಗುಪ್ತಿ, ಝಂಪಿತಾಳ

ವಿಜಯರಾಯರ ಪಾದ ಭಜಿಸಿದವ ಗನವರತ । ವಿಜಯವಾಗುವದಕ್ಕೆ ಸಂದೇಹವ್ಯಾಕೆ ||ಪಲ್ಲ|| ಗಜರಾಜ ವರದನಿಗೆ ನಿಜದಾಸರೆಂದೆನಿಸಿ। ದ್ವಿಜಕುಲವಲ್ಲಿ ಮೆರನರಾ ಯಿವರ || ಅ. ಪ || ಮೊದಲು ಋಷಿಗಳು ಕೂಡಿ ಸತ್ರಯಾಗವ ನಾಕ । ನದಿಯ ತೀರದಲಿ ರಚಿಸಿ ಯಿರಲು || ಪದುಮಸಂಭವನಂಕ ಭವಬಂದು ಮುನಿವೃಂದ । ಹೃದಯ ಸಂಶಯ ಹೊಂದಲು (ಹೊಂದಿಸಲು) ವಿಧಿ ವಿಷ್ಣು ಶಿವರೊಳಗೆ ಉತ್ತಮರ ತೋರದಲಿ। ಮದಡ ಭಾವವ ವೊಪಿಸಲು || ಒದಗಿ ಭೃಗುಮುನಿಗಳೇ

ಸರ್ವೇಶ ವೈಕುಂಠ । ಸದನನೆಂದರುಹಿದವರೊ ಯಿವರೊ ॥೧॥ ಆದೇವ ಮುನಿ ಪುರಂದರ ದಾಸರಾಗಿ । ಈ । ಮೇದನೀ ತಳಕೆ ಬರಲೂ । ಸಾಧು ಸಮ್ಮತವಾದ ಪದಪಂಚಲಕ್ಷಕೆ (ತ್ರಿ) ಪಾದವೇ ನ್ಯೂನವಿರಲು । ಆ । ಪಾದವನು ಪೂರ್ತಿಪರು ಮತ್ಪುತ್ರರಿವರೆಂದು ಆದಿಯಲಿ ಸೂಚಿಸಿದಲೂ॥ ಭೂದೇವ ಜನ್ಮದಿಂದಾದಾಸರಭಿಲಾಷೆ । ಸಾಧಿಸಿದ ಸದಯರಿವರೊ ಯಿವರೊ॥೨॥ ವಿ ಯೆನಲು ವಿಮಲತೆಯು ಜ ಯೆಂದವಗ ಜಯವು । ಯೆ ಯೆನಲು ಯಾಗಫಲವು । ರಾ ಯೆನಲು ರಾಜ್ಯವು । ಯ ಯೆನಲು ಯಮಭಟರು । ನೋಯಿಸರು ಯಿವನ ಕುಲವೂ ॥ ಈ ಯಾವದಕ್ಷರವ ಓಂಕಾರ ಸಹ ಪಠಿಸೆ । ಕಾಯಭವ ಪಿತನ ಬಲವೊ ॥ ಜಾಯಾ ಸಮೇತ ಮೋಹನ್ನ ವಿಠಲನ ಪಾದ। ತೋಯಜ ಭ್ರಮರರಿವರೊ ಯಿವರೊ॥೩॥

ಪದ ೨೯ ರಾಗ ರೇಗುಪ್ತಿ, ಝಂಪಿತಾಳ

ವಿಜಯರಾಯರ ಪಾದ ನಿಜವಾಗಿ ನಂಬಲು । ಅಜನಪಿತ ತಾನೆ ವೊಲಿವಾ ॥ಪಲ್ಲ॥ ದ್ವಿಜಕೇತನನ ಗುಣವ ವೃಜನ ಕೊಂಡಾಡುವ। ಸುಜನ ಮಂದಾರನೀತಾ ದಾತಾ ॥ಅ. ಪಲ್ಲ॥ ವಿ ಯೆಂದು ನುಡಿಯಲು ವಿಷ್ಣು ದಾಸನಾಗುವನು । ಜ ಯೆನಲು ಜನನ ಹಾನಿ । ಯ ಯೆಂದು ಕೊಂಡಾಡೆ ಯಮಭಟರು ವೋಡುವರು । ರಾಯನೆಂದೆನಲು ಹರಿಕಾವ ವರವೀವ ॥೧॥ ಇವರ ಸ್ಮರಣೆಯು ಸ್ನಾನ ಯಿವರ ಸ್ಮರಣೆಯುಧ್ಯಾನ । ಇವರ ಸ್ಮರಣೆಯು ಅಮೃತಪಾನ ॥ ಇವರ ಸ್ಮರಣೆಯು ಮಾಡೆ ಯುವತಿ ಗಕ್ಷಯವಿತ್ತ । ತ್ರಿವಿಕ್ರಮನೆ ಮುಂದೆ ನಿಲುವ ನಲಿವ ॥೨॥ ವಾರಣಾಸಿಯ ಯಾತ್ರೆ ಮೂರು ಭಾರಿ ಮಾಡಿ । ಮಾರಪಿತನೊಲಿಮೆಯನು ಪಡೆದು । ಮೂರಾವತಾರದ ಮಧ್ವಮುನಿರಾಯರ । ಚಾರುಚರಣವನು ಭಜಿಪ ಮುನಿಪ ॥೩॥ ಪುರಂದರ ದಾಸರ ಪರಮಾನುಗ್ರಹ ಪಾತ್ರ । ಗುರು ವಿಜಯರಾಯನೀತ। ಸಿರಿ ವಿಜಯವಿಠಲನ ಶ್ರೀನಿವಾಸಾಚಾರ್ಯರು। ಹರಿಯಾಜ್ಞೆಯಿಂದ ಕೊಟ್ಟರು ಧಿಟರು ॥೪॥ ದಾನ ಧರ್ಮಗಳು ಮಾಡುವನ್ನಿ ಔದಾರ್ಯ । ಗುಣಶೌರ್ಯ ಶ್ರೀನಿವಾಸನ ಕುಮಾರ । ಮಾನವಿಸೀಮಿ ಚಿಕನಬಾವಿ ಮೋ। ಹನ್ನವಿಠಲನ ನಿಜದಾಸನೀತ ಖ್ಯಾತ॥೫॥

ಪದ ೩೦ ರಾಗ ಆನಂದಭೈರವಿ, ಅಟ್ಟತಾಳ

ನಿನ್ನ ನಂಬಿರುವೆ ಪ್ರಸನ್ನನಾಗು ಬ್ಯಾಗ । ಚನ್ನಿಗವರದ ವಿಜಯ ರಾಯ ॥ಪಲ್ಲ॥ ಮನ್ನಿಸಿ ಎನ್ನ ಪಾವನ್ನ ನೀ ಮಾಡದಿರೆ ಬೆನ್ನ ಬಿಡೆನೊ ನಿನ್ನ ಜೀಯಾ ||ಅ.ಪ.|| ಕರುಣಸಾಗರನೆಂಬ ಬಿರಿದು ನಿನಗಿಹುದೆಂದು । ಹಿರಿಯರಿಂದರಿತಿರುವೆ ಜೀಯಾ ॥ ಮರೆಯದೇ ಪೊರೆ ನಿನ್ನ ಚರಣಭಜಕನೆಂದು । ಸರುವ ಅಘವನು ಕ್ಷಮಿಸಿ ರಾಯಾ ॥ ದುರುಳ ವಿಷಯಕ್ಕೆಳಿವ ಮರುಳ ಮನವನ್ನು ನಿನ್ನ ಚರಣದಲಿ ನಿಲಿಸಿನ್ನು ಜೀಯಾ ರಾಯಾ ||೧|| ಅರಿಯೆ ವಿಧಿ ಜಪ ತಪವ ಅರಿಯೆ ಹೋಮ ನೇಮ ಅರಿಯೆ ಮಂತ್ರ ಸ್ತೋತ್ರವ । ಬರಿದೆ ಧರಿಯೊಳು ತಿರುಗಿ ಹರಿಯ ಸ್ಮರಿಸದೆ ದಿನವ ಇರಳು ಹಗಲು ಕಳದೆನು ॥ ಕರುಣವಿಲ್ಲವ್ಯಾಕೆ ಶರಣಾಗತನ ಇನ್ನು ಪೊರೆಯದೇ ಬಿಡುವದು ಥರವಲ್ಲವೆಂದಿಗೂ ||೨|| ಅಜಭವರಿಂದೊಂದ್ಯನಾ ದ್ವಿಜಯ ಮೋಹನ ವಿಠಲ ಭಜಕರಿಗೊಲಿದಂತೆ ಉಪಾಯ । ನಿಜವಾಗಿ ಮಾಡದಿರೆ ಬಿರುದಿಗೆ ಕುಂದು ಗಜರಾಜವರದನ ಪ್ರಿಯಾ ॥ ಕುಜನರನುತ ಬಡಿದು ವಿಜಯ ವಿಠಲನೇ ಪರನೆಂದು । ತ್ರಿಜಗದೊಳುಮೆರಸಿದ ಭಜಕಾಗ್ರೇಸರ ಗುರುವೆ ||೩||

ಪದ ೩೧ ರಾಗ ಕಾಂಬೋದಿ, ಝುಂಪಿತಾಳ

ವಿಜಯದಾಸ ಧೀರರೆಂಬೊ ಅಂಬುಜ ಮಿತ್ರನುದಯಿಸಲು । ಭಜಕರ ಜ್ಞಾನತಿಮಿರ ಭರದಿ ಬಿಟ್ಟೋಡಿತು ||ಪಲ್ಲ|| ಶ್ರುತಿ ಶಾಸ್ತ್ರವೆಂಬ ಕಂಜಗಳತಿ ರಮ್ಯದಿಂದರಳಿದವು । ಕ್ಷಿತಿಯೋಳು ಕುಮುದದಂತೆ ದುರ್ಮತಗಳೆಲ್ಲ ಕುಗ್ಗಿದವು। ಇತರ ದೇವಂಗಳಿಂತು ಭಜಿಸದೆ ರಘುಪತಿಯೆ ದೈವ ಮಧ್ವ । ಮತವೆ ಸಿದ್ಧಾಂತವು ಸತತವನು ಹರಿಸರ್ವೋತ್ತಮನೆಂದು । ಶಾತಿಸುವ ಕಾಂತಿಯು ತುಂಬಿತು ಜಗದೊಳು ||೧|| ಚೋರ ಮಾಯಾವಾದಿಗಳೆಂಬ ತಾರೆಗಳಡಗಿ ಪೋದವು । ಸಾರುವ ವಿಬುಧಜನರೆಂಬೊ ಚಕ್ರವಾಕ ಧ್ವನಿಗೈದವು ॥ ಸಾರಿ ಸಾರಿಗೆ ಹೊತ್ತು ಯೇರುವ ತೆರವಲಿ । ಶ್ರೀ ರಮಣನ ಚರಣಾರವಿಂದವು ನಿತ್ಯ । ಆರಾಧಿ

ಸುವ ವಿಚಾರವಿದೆನುತತಲಿ। ತಾರತಮ್ಯ ಜ್ಞಾನ ತೋರಿದರಿಳಿಯೊಳು ।೨॥ ಅಂದವಾದಲಾ । ದಿಂನ್ನೆ ಹನುಮಂತ ನೊಡಿಯ ।

## (ಮುಂದೆ ದೊರೆತಿಲ್ಲ)

ಪದ ೩೨ ರಾಗ ರೇಗುಪ್ತಿ ಝುಂಪಿತಾಳ

ತೆರಳಿದರು ಹರಿಪುರಕೆ ಗುರು ವಿಜಯದಾಸರು ॥

## ( ಅರ್ಧ ಪಲ್ಲವಿ ೧-೨-೩ ನುಡಿ ಪೂರ್ತಿ ದೊರೆತಿಲ್ಲ )

—ನಂತ ಗೋವಿಂದ ಸುಂದರ ಶ್ರೀಶ ದಾಮೋದರ । ಬರ ಹೇಳಿದನು ನಿಮ್ಮನೆಂದು ಬಿನ್ನೈಸಲಾ । ತ್ವರಿತದಿಂದಲಿ ನಿಲ್ಲದೆಯಿಂದು ॥೩॥ ಒಂದು ಹೆಜ್ಜೆಯು ಸಾಗೆ ಗಂಧ ಪರಿಮಳವು ಬೇ । ಕೆಂದೆಂಬ ಅನ್ನಪಾನಾ। ಅಂದಣಾ ಛತ್ರಚಾಮರ ವ್ಯಜನ ತಾಂಬೋಲ ! ಶ್ಯಂದನ ಗಜತುರಗವು॥ ಮಂದಗಮನಿಯರು ಆರುತಿಯೆತ್ತಿ ನಮ್ರಮು । ಕ್ಷಂದನ ಕರುಣದಾಳು। ಮಂದರನ ವುದ್ಧರಿಸಿ ಬಂದನಿಲ್ಲಿಗೆಯೆನುತ । ಮುಂದೆ ಪೊಗಳುವ ಭಟಜನಯಿಂದು ॥೪॥ ಯಿಂಥ ಪ್ರಭುಗಳಕೃಪಾ ಪಾತ್ರರಗೆ ಇಹಸೌಖ್ಯ । ಕಂತುಜನಕನ ಕರುಣವ ॥ ಸಂತತ ಪಡೆದವರಿಗೇನುಂಟು ಯೇನಿಲ್ಲ । ಚಿಂತಿಸುವರೇ ಮೂರ್ಖರು । ನಿಂತಲ್ಲಿ ಕುಳಿತಲ್ಲಿ ನೆನಸಿದಾಗಲೆ ಮುಕುತಿ । ಅಂತಿಹ್ಯದು ಅಂಗೈಯೊಳು । ಯಂತ್ರವಾಹಕ ನಮ್ಮ ಮೋಹನ ವಿಠಲನ । ಅಂತರಂಗದಿ ಕಾಂಬರು ಯಿಂದು ॥೫॥

# ವೇಣುಗೋಪಾಲ ವಿಠಲಕೃತ

ವಾರ್ಧಿಕ ಷಟ್ಪದಿ

ಪದ ೩೩ ರಾಗ ಉದಯ, ಝುಂಪಿತಾಳ

ಸ್ಮರಿಸಿದವರಘನನಾಶನ । ಸ್ಮರಿಸಿದವರಘನಾಶ । ಸ್ಮರನಯ್ಯನಂಘ್ರಿಯುಗ । ಸರಸಿಜವ ಪೂಜಿಸುವ । ಗುರು ವಿಜಯರಾಯರ ಚರಣಾಬ್ಜ ಸಾರಿದವ । ದುರಿತಾಬ್ಧಿ ಮೀರಿದವ ಹರಿಪುರವ ಸೇರಿದವನೊ ॥ಪ॥ ಹಿಂದೆ ದ್ವಾಪರದಿ ಅರವಿಂದನಾಭನು ಭಕ್ತ। ವೃಂದವನು ಸಲಹುವೆನೆಂದು ಅವತರಿಸಿ ಸಭೆ। ವಂದು ದಿನ ವಿಸ್ತರಿಸಿ ಕುಳಿತಿರಲು ಸುರಮುನಿ ಬಂದು ನುತಿಗೈದು ವರವ ॥ ಪೊಂದಿ ಕಲಿಯುಗದಲ್ಲಿ ನಿಂದು ನರಹರಿಯು

ನಲು । ನಂದವೊಲಿಸಿಕೊಳುತ **ನಂದವನಧಿಯೊಳಗೆ** । ಸಂಪಣಿಸಿ ಸತಿಸುತ ಕೂಡನೆ ಜನರ ಲಘು । ಬಂಧ ಪರಿಹರ ಮಾಡುತಾ ॥ ಜನರು ॥೧॥ ಇಂತು ಸಮು ದಾಯದೊಳು ಯಿರುತಿರ್ದು ಇಭವರದ । ನನು ದಿನವು ಗಾಯನದಿ ಕೊಂಡಾಡಿ । ಮನಮುಟ್ಟಿ । ವಿನಯಾತಿ ಶಯದಲ್ಲಿ ಗುರುವರ್ಯರಾ ಸೇವೆ । ಘನವಾಗಿ ಮಾಡಿ ಮುದದಿ ॥ ತನುವೆತ್ತಿ ವರ ಸರಿತ ತೀರದಾ ಅಣುಬದರಿ । ಜನಶ್ರೇಷ್ಠರೊಳು ಹರಿಯ ದಾಸ ಪೆಸರಲಿ ಬಂದು । ಘನ ಯಾದವಾದ್ರಿ ಪಟ್ಟಣದೊಳಗೆ ಯಿದ್ದು ಬಗೆ । ಜನನಿ ಅನುಜಾತಿ ಸಹಿತ ॥೨॥ ಕೆಲವು ದಿನ ಸಂಸಾರ ಗಲಭಿಯೊಳು ಯಿರು ತಿರ್ದು । ಜಲದೊಳಗೆ ಅಂಬುಜವು ಮಿಳಿತ ವಾಗಿದ್ದ ತೆರ । ಹಳಿದುದು ಷ್ಟಾಸಿಯನು ಕಳಿದು ಕಡು ಮುಮುತೆಯನು । ಪುಳಕೋತ್ಸ । ಮನದಿ ತಾಳಿ ॥ ಜಲದೊಳುತ್ತಮವಾದ ಭಾಗೀರಥೀ ಯಾತ್ರಿ । ಛಲಭಕುತಿ ಯಿಂದಲಿ ಮಾಡಿ ನೋದದಿ ಹರಿಯ । ಹಲವು ಬಗೆ ಲೀಲೆಯನು ಹರುಷ ದಿಂದಲಿ ಯಿನ್ನು । ತಿಳಿದು ಗುರುಕರುಣ ಬಲದಿ ॥ ೩ ॥ ಅಲ್ಲಿ ಗುರುಗಳ ಧ್ಯಾನದಲ್ಲಿ ಧೃಡವಾಗಿ ಮನ । ನಿಲ್ಲಿಸೀವರ ಪಡೆದು ನಾನಾಕು ಪರಿಯು ಸಿರಿ ವಲ್ಲಭನ ಮೂರ್ತಿ ಮನದೊಳು ಕಂಡು ಸುಖವನಧಿಯಲ್ಲಿ ಲೋಲ್ಯಾ ಡಿಕೊಳುತ ॥ ಅಲ್ಲಿಂದ ತೆರಳಿ ಗಿರಿಯೆಲ್ಲಿದ್ದ ವೆಂಕಟನ । ಸಲ್ಲುವಾ ಭಕುತ ರೊಳು ಸಲೆಶ್ರೇಷ್ಠ ನೆಂದೆನಿಸಿ । ಮಲ್ಲಮರ್ದನನಾದ ಮುರಹರನ ಮಹಿಮೆ ಮನಬಲ್ಲನಿತು ವಿಸ್ತರಿಸುತ ॥ ಜನರು ॥ ೪ ॥ ಈ ತೆರದಿ ಇಭವರದ ನಾ ತುಮದೊಳಗೆ ತಂದು । ಭೂತಳದ ಬಲುವಿಧವ ತೀರ್ಥಕ್ಷೇತ್ರಗಳಲ್ಲಿ । ಪ್ರೀತಿಯಿಂದಲಿ ಪರಮಪುರುಷನ್ನ ಧೇನಿಸುತ । ಖ್ಯಾತಿ ಮಹಿಯೊಳಗೆ ಮೆರದು ॥ ವಾತಜಾತನ ಮತದ ವೊಳಗಿಪ್ಪ ವೈಷ್ಣವರ । ತಾತನೆಂದೆನಿಸಿ ಸುಖವ್ರಾತದೊಳಗಿಡುವಲ್ಲಿ । ಚಾತುರ್ಯದಿಂದ ಬಲುದಾತನೆನಿಸುತಲಿ ಭವತೀತರನ ಮಾಡಿ ಪೊರವ ॥ಜನರು ॥ ೫ ॥ ಆ ಬಗೆಯಲೀ ಕಮಲ ನಾಭ ಕರುಣಿಸಿ ಯಿವರ । ಈ ಜನನದೊಳು ಯಿಟ್ಟು ಜನರ ವೃದ್ಧರಿ ಸುನ । ಲೋಭದಿಂದಲಿ ಸಕಲ ಸಜ್ಜನರ ಸನ್ಮಾರ್ಗ ಲಾಭದೊಳು ಸೇರಿಸಿ ದನೊ ॥ ಶ್ರೀ ಭುವನ ದೆಸೆದೆಯನ್ನ ಕಥೆಯ ತಿಳಿಸುವ ಜನಕೆ । ಶೋಭಿ ಸುವ ಗಾಯನವ ಸೊಬಗಿನಿಂದಲಿ ಕೇಳಿ । ಶ್ರೀ ಭೂರಮಣವೊಲಿಮು

ಪಾಲಿಸುವ ನಾ ಮೇಲೆ ಶೋಭನಗತಿಯನೀವನೊ ॥ ೭ ॥ ಶ್ರೀಕಾಂತ ಸಕಲ ಜಗವ್ಯಾಪಕನು ಸರ್ವೇಶ । ಲೋಕದೊಳು ಇವರಲ್ಲಿ ಬೇಕಾದ ಚರಿತೆಯು ಅ । ನೇಕ ಬಗೆಯಿಂದಿವರ ಮುಂಭಾಗ ತೊಲಗದಲೆ ತಾ ಕುಣಿಸ ತ್ತೋರಿಕೊಳುತ ॥ ಕಾಕು ಜನರಿಗೆ ಕಲುಷ ವಾಕು ವುಪಜೀವರಿಗೆ । ಏಕಮನದಿಂದಿರುವದೇ ಈ ಕಲಿಯುಗದಲಿ । ಸಾಕಾರ ಗುಣಪೂರ್ಣ ಶ್ರೀನಿವಾಸನು ಬಿಡದೆ ಸಾಕುವನು ಸರ್ವ್ವೊಗದಲಿ। ಜನರು ॥೭॥ ದೇವಮುನಿ ನಾರದನು ಜೀವಿಗಳನುದ್ಧರಿಪ । ಭಾವದಲಿ ಯಮಪುರಿಯ ದೇವನಲ್ಲಿಗೆ ಪೋಗಿ । ಸಾವಧಾನದಿ ಸಕಲ ಸತ್ಕಾರಕೊಳ ಗಾಗಿ ನೋವು ಬಡುವರನೀಕ್ಷಿಸಿ ॥ ಸಾವಧಾನದಿ ಕೇಳಿ ಕಲಕಾರುಣೀ ಭಕ್ತ । ರಾವಳಿಯ ಸಲಹುವ ದೇವದೇವೇಶನನು । ತಾ ವದರಿ ಕೂಗಲಾ ಜೀವರೆಲ್ಲರು ಕೇಳಿ ಪಾವಿತ್ರವನೆಗೈದರೊ ॥ ಜನರು ॥ ೮ ॥ ಸಾಧು ಗಳು ಯಿದು ಕೇಳಿ ಸಂತೈಸುವದು ಶಬ್ದ । ಬಾಧೆಗಳು ಯಿದ್ದರೂ ತಿಳಿದು ತಲೆದೂಗಿ ಮಹ । ಮೋದಕೊಳಗಾಗುವದು ಮನವುಟ್ಟಿ ನಲಿದು ಬುಧ ರಾದವರು ಭವ ವರ್ಜರೊ ॥ ವೇದಶಾಸ್ತ್ರಗಳು ಬಲು ಸಾಧನ ಪುರಾಣ ಗಳು । ಶೋಧಿಸೀ ಮನದಲ್ಲಿ ಪೇಳಿದವನಲ್ಲ ಗುರು । ಪಾದರೇಣುಗಳನ್ನು ಆಶ್ರೈಸಿ ಅರ್ಪಿಸಿದೆ ಶ್ರೀಧವನ ಸಿರಿ ಚರಣಕೆ ॥ಜನರು॥೯॥ ಪರಮಾತ್ಮ ಸಿರಿ ಬ್ರಹ್ಮ ಪುರಹರನು ಹರಿರಾಣಿ । ಗಿರಿಜೆ ಗಿರಿವೈರಿ ಪ್ರಾಣಾನಿರುದ್ಧ ಮರುತ । ತರಣಿ ವರುಣಾ ದೇವ ಮುನಿ ಭೃಗು ಋಷಿಗಳು ಸಪ್ತವರ ವಿಶ್ವಾಮಿತ್ರವೈವಸ್ವತಾನು ತಾರಾದಿಚತುರಗಣಪ ಮೊದಲಾದಶೇಷಶತರು॥ ಭರತಾದಿ ಕರ್ಮಜರು ಗಂಗೆಸ್ವಹಾ ಬುಧನು । ಸುರರ ವೈದ್ಯರ ಮುಡದಿ ಶನಿ ಪುಷ್ಕರಾಮತ್ತೆ । ಇರುವ ದೇವತೆಗಳ ತಾರತಮ್ಯವ ತಿಳಿಸಿ ಶರಧಿ ಶಯನನ ತೋರುವ ॥ ಜನರು ॥ ೧೦ ॥ ದಾನವಾಂತಕ ದನುಜರನ್ನು ಸಂಹರಿಸುವಾ । ಜ್ಞಾನಪೂರ್ಣನು ಗುಪ್ತ ತಾನಾಗಿ ಜಗದೊಳಗೆ । ಹಾನಿ ವೃದ್ಧಿಂಗಳಿಗೆ ಹೊರಗಾಗಿ ಜೀವಿಗಳ ಮಾಣದಲೆ ಪರಿಪಾಲಿಪ॥ ಕ್ಷೋಣಿ ಯೊಳು ಭಕುತರಘ ಹಾನಿಗೈಸುವ ಬಗಿಗೆ । ಈ ನಿರುದ್ಧಕೆ ಯಿನರ ಧೀನ ಮಾಡಿದ ನಮಗೆ । ವೇಣುಗೋಪಾಲ ವಿಠ್ಠಲರೇಯ ತಾನೊಲಿದು ಸ್ವಾ ನಂದವನೆ ವುಣಿಸುವ ॥ಜನರು॥೧೧॥



ಪದ ೩೪ ರಾಗ ಕಲ್ಯಾಣಿ, ಏಕತಾಳ

ಕರುಣವ ಮಾಡೊ ಶರಣರ ಪ್ರೇಮಿ। ಕರುಣವ ಮಾಡೊ ಅರುಣ ನಿಭನೆಗುರು। ಕರುಣವ ಮಾಡೊ ॥ ಪಲ್ಲ ॥ ಸುರತರುವಿನ ಅನುಸರಿಸಿದ ಮನುಜಗೆ। ವೃಷ್ಟ್ಯಾನ್ನದ ಒರವೆ ॥ ಸುರನದಿ ಅನುಸರಿಸಿದ ಮನುಜಗೆ। ಘನತೃಷಿಯ ಬಾಧೆ ॥ ೧ ॥ ಕಾಮಧೇನು ತನ್ನ ಧಾಮದೊಳಗೆ ಯಿರೆ। ಸೀಮೆ ಆಳುವ ರಾಸೆ ॥ ರಾಮನ ಪದಯುಗ ತಾಮಸವನಂಬೆ। ಪಾಮರ ರಂಜಿಕೆಯೆ ॥೨॥ ವ್ರಜತಾಧಿಪ ವೇಣುಗೋಪಾಲ ವಿಠಲನ್ನ । ನಿಜವಾಗಿ ಸ್ಮರಿಸುವರ । ಕುಜನಪಲ್ಲಣ ಗುರು ವಿಜಯಬಾಸರೆ । ಸ್ಮರಿಸುವರೆ ಯಿವರ ॥೩॥

ಪದ ೩೫ ರಾಗ ಕಾಂಬೋದಿ, ತ್ರಿವಿಡಿತಾಳ

ನಿನ್ನ ನಂಬಿದ ನರಗೆ ಅನ್ಯ ರಾಶಿಗಳೇನೊ। ಚನ್ನಗರು ವಿಜಯ ರಾಯ ॥ ಬನ್ನಬಡುವೆನೊ ಜೀಯ ಘನ್ನ ಭವದೊಳು ಶಿಲ್ಕಿ। ಇನ್ನು ಕಡೆ ಘ್ಯಾಕೋ ಬ್ಯಾಗ ಈಗ ॥ ಪಲ್ಲ ॥ ಸಪ್ತ ದ್ವೀಪಾಧಿಪನ ಪುತ್ರನೊಬ್ಬನು ಪರರ। ಭೃತ್ಯನಾಗುವದುಚಿತವೆ । ವತ್ತಿ ಸುರನದಿ ನರನ ಸುತ್ತ ಪರಿಯಲು ನೀರಿ। ಗಾರ್ತನಾಗುವದುಚಿತವೆ। ಮತ್ತೆ ಸುರಧೇನುವಿನ ಹತ್ತಿಲಿರುವ ಯಿನ್ನು ಹಸ್ತು (ಹಸಿವು) ಬಳಲುವದುಚಿತವೆ। ನಿತ್ಯ ಸುಖದಾರಿ ವಿಚಿತ್ರ ನೀ ತೋರೆ ನಾ। ಹಸ್ತ ನರಗೊಡ್ಡುವದು ಯತ್ನ ಉಚಿತವೆ ಗುರುವೆ ॥೧॥ ಕ್ಷೀರವಾರಿಧಿ ಶೇರಿ ನೀರಮಜ್ಜಿಗೆಗಾಗಿ । ಚೀರಿ ವರಲುವದುಚಿತವೆ। ನೂರಾರು ವಸನದ ಹೇರು ಮನೆಯೊಳಗಿರಲು । ಕೋರಿವುಡುವುದು ವುಚಿತವೆ॥ **[ ೧ ಪಾದ ಕಡ್ಮೆ ಅದೆ ]**

ಪಾರ ವಾರಕೆ ಹರಿಯ ತೋರುವರನ ಬಿಟ್ಟು। ಕ್ರೂರವನ ಸೇವಿಸುವ ದಾರಿಗುಚಿತವೊ ಗುರುವೆ ॥೨॥ ಸಾಕಿ ಸಲಹೆಂದು ಅತಿ ವ್ಯಾಕುಲದಿ ಬಂದವನ। ನೂಕಿ ಬಿಡುವದುಚಿತವೆ। ಬೇಕಾದ ವರವು] ನೀ ಲೋಕರಿಗೆ ಕೊಡುವೆನ್ನ । ಕಾಕುಗೊಳಿಸುವ ದುಚಿತವೆ॥ ಏಕ ಬುದ್ಧಿಯನಿತ್ತು ಜೋಕೆ ಮಾಡಿ ಪುನ। ನೇಕ ಮಾಡುವದುಚಿತವೆ ॥ ಶ್ರೀಕಾಂತ ವೇಣು

ಗೋಪಾಲ ವಿಠ್ಠಲ ನಿನ್ನ | ವಾಕು ಮನ್ನಿಸಲು ನಾ ಕೆಡುವದುಚಿತವೆ ಗುರುವೆ ||೩||

ಪದ ೩೬ ರಾಗ ಬಿಲಹರಿ, ಆದಿತಾಳ

ಕಾಯೊ ಕಾಯೊ ಗುರು ವಿಜಯರಾಯ | ಕಾಯೊ ಕಾಯೊ ವರ ವೀಯೊ ವಿಜಯ ಗುರು | ರಾಯ ನೀನಲ್ಲಿದ ಉಪಾಯವೆ ಯಿಲ್ಲ ||ಪಲ್ಲ|| ತಾಪತ್ರಯಗಳು ದೀಪನವಾಗಿದೆ | ನೀ ಪರಿ ಪಾಲಿಪದೀ ಪರಿಥರಪೆ | ಕಾಯೊ ಕಾಯೊ ||೧|| ಪಾಪಗಳೆಣಿಸದೆ ಪಾವನ ಮಾಳ್ಪದು | ಶ್ರೀಪತಿ ಪಡೆದ ಸುರಾಪಗದಂತೆ ||೨|| ದೂರ ನೀ ನೋಡಲು ಆರುಯಿಲ್ಲವೊಗತಿ | ಕಾರುಣ್ಯದಲಿ ನಿವಾರಿಸು ದುರಿತ ||೩|| ಸ್ವೀಕರ ಮಾಳ್ಪದು ನೀ ಕರಿಸದೆ ಬಲು | ವ್ಯಾಕುಲನಾಗಿಹ ನೀ ಕರುಣದಲಿ ||೪|| ಪರಿಹರಿಸಲಿ ಸಲ್ಲ ಕರ ವಿಡಿ ಬ್ಯಾಗನೆ | ಗುರುವೆ ನಿಮ್ಮಯ ಚರಣ ಸೇವಕನ || ೫ || ನೀನಾಳುವರೊಳು ಈ ನರಮೂರ್ಖನು | ಏನು ಅರಿಯೆ ಬಲು ದೀನವಾಗಿ ಹನೊ || ೬ || ಆಲಸ ತಾಳದು ಪಾಲಿಸು ವೇಣು ಗೋ | ಪಾಲವಿಠಲನ ಆಳು ಕೃಪಾಳೊ ||೭||

# ಶ್ರೀ ಜಗನಾಥ ವಿಠಲ ವಿರಚಿತ

ಪದ ೩೭ ರಾಗ ಬಿಲಹರಿ, ಆದಿತಾಳ

ರತುನ ದೊರಕಿತಲ್ಲ ಎನಗೊಂದು ರತುನ ದೊರಕಿತಲ್ಲ || ಪಲ್ಲ || ರತುನ ದೊರಕಿತು ಎನ್ನ ಜನ್ಮ ಪ | ವಿತುರವಾಯಿತು ಈ ದಿನವು | ಯತನ ಗೈಯುತ ಬರುತಲಿವೆ ಪ್ರ | ಯತ್ನವ ಮಾಡದೆ ವಿಜಯರಾಯ ರೆಂಬೊ ||ಅ. ಪ|| ಜ್ಞಾನವೆಂಬೊ ಪುತ್ರಿನಲಿ ಕಂಬಿಯಲಿ| ಅಣಿ ಮುತ್ತಿನ ಭಕ್ತಿಲಿ ಸುಕೃತಮಾಲಾ | ನಾನಾ ವಿಧಗಳಲ್ಲಿ ಯೋಚಿಸುತಿರೆ | ಪ್ರಾಣ ಪದಕವೆಂಬ ಮಾಲೆನು | ಮಾನವಿಲ್ಲದೆ ಕೊರಳಿಗ್ಹಾಕುತ | ಗಾನದಿಂದಲಿ ಕುಣಿಮು ಪಾಡಲು | ದೀನ ಜನರುದ್ಧಾರಗೈಯುತ ||೧|| ಪಥದಿನಾಬರು ತಿರಲು ಥಳಥಳವೆಂದು | ಅತಿಕಾಂತಿಯು ಕಾಣಲು ಬೆರಗಾಗುತ | ಅತಿ ಚೋದ್ಯನ ಪಾಡಲು ಸೇವಿಸುತಿರೆ || ಸತತ ಕರಪಿಡಿದಾದರಿಸಿ | ಮನೋ

ರಥವ ಪ್ರೇರೈಸುತಲಿ ಎನಗೆ ಸ । ನ್ಮತಿಯ ಪಾಲಿಸಿ ಮೋಕ್ಷ ಪಥವನೆ । ಅತಿಶಯದಿ ತೋರಿಸುತ ಪೊರೆಯುವ ॥೨॥ ಶೋಧಿಸಿ ಗ್ರಂಥಗಳಾ ಸುಳಾದಿಯ । ಮೋದದಿಂದಲಿ ಬಹಳ ಕವತೆ ಮಾಡಿ । ಸಾಧುಜನಕೇಸು ಕಾಲಲಸಂಪವಿತ್ತು ॥ ನಾದಿಯನು ತಾ ಪಡೆದು ಕಾಲಿಲಿ।ಮಾಧವ ಜಗ ನ್ನಾಥ ವಿಠಲನ । ಪಾದಕಮಲಕೆ ಮಧುಪನಂದದಿ । ಸಾದರದಿ ತೋರು ತಲಿ ಮೆರೆಯುವ ॥೩॥

ಪದ ೩೮ ರಾಗ ಕಾಂಬೋದಿ, ಝಂಪಿತಾಳ

ತೆರಳಿದರು ವಿಜಯರಾಯರು ವಿಠಲನಾ। ಪುರದೊಳಗೆ ಪರಮ ಭಕ್ತರ ಕಾಣಬೇಕೆನುತ ॥ಪ॥ ಯುವ ಸಂವತ್ಸರದ ಕಾರ್ತೀಕ ಶುದ್ಧ ದಶ । ಮಿ ವಿಭಕರ ಗುರುವಾರ ಪ್ರಥಮ ಸುಯಾಮದಿ ॥ ಪವನಾಂತರಾ ತ್ಮಕಾ ಶ್ರೀ ಹರಿಯ ದರ್ಶನೋ । ತ್ಸವ ಸಂಪಾದಿಸುವ ಬಹು ಲವಲವಿಕೆ ಯಿಂದಲಿ ॥೧॥ ಧರಣಿಯೊಳು ಭಾಸ್ಕರ ಕ್ಷೇತ್ರವೆನಿಸುವ ಚಿಪ್ಪ । ಗಿರಿ ಯೆಂಬ ಗ್ರಾಮದಿ ವಿ ಬುಧರ ಮುಖದಿ ॥ ಪರಭಾಗವತ ಬ್ರಹ್ಮಸೂತ್ರ ಭಾರತಗೀತ । ಮರುತ ಶಾಸ್ತ್ರಾರ್ಥ ಗ್ರಂಥಗಳ ನಾಲಿಸುತಲಿ ॥ ೨ ॥ ಸುಖತೀರ್ಥ ಮುನಿಯ ಮನಕನುಕೂಲ ಸಚ್ಛಾಸ್ತ್ರ । ನಿಕರಗಳ ಕವನ ರೂಪದಲಿ ರಚಿಸಿ॥ ಭಕುತರಿಗೆ ಸನ್ಮಾರ್ಗ ತೋರಿ ಸಂತೋಷದಲಿ । ವಿಖನಸಾರ್ಚಿತ ಜಗನ್ನಾಥ ವಿಠಲನ ಪದಕೆ ॥೩॥

# ಶ್ರೀ ಗುರುಗೋಪಾಲ ವಿಠಲಕೃತ

ಪದ ೩೯ ರಾಗ ಭೈರವಿ, ತ್ರಿವಿಡಿತಾಳ

ಕಾಯೊ ಗುರುರಾಯ ಕವಿಗೇಯ । ಆಯಾಸ ಪರಿಹರಿಸೊ । ರಾಯ ಗುರು ವಿಜಯ ॥ಪಲ್ಲ॥ ಹಗಲು ಇರುಳು ನಿನ್ನ ಹೊಗಳುವ ಭಕುತನ್ನ । ಹಗೆಗಳಿಗೊಪ್ಪಿಸಲು ನಗರೆ ಮಾನ್ನವರು ॥ ೧ ॥ ನೀರಿಗೆ ಅಂಜಿ ದೂರ ಸೇರಿದವಗೆಭಯವಿತ್ತು । ಪಾರುಗಾಣಿಸದಿರಲು ಕೀರುತಿ ಕೆಡದೆ ॥ ೨ ॥ ಆಡಿದ ವಚನ ಸತ್ಯ ಮಾಡದಿದ್ದರೆ ನಿನ್ನ । **ಪಾಡಿ ಪೊಗಳಲ್ಯಾಕೊ ಪ್ರೌಢಜನರೊಡಿಯ** ॥೩॥ ಶಪಥದಿ ಬೇಡುವೆ ನಿನ್ನ ವಿಪಥನೀ ಪೊರಿ ಯದಿರಲು । ತಪಸು ಯಿದ್ದೇನು ಫಲವೊ ಕೃಪಣ ವತ್ಸಲನೆ ॥ ೪ ॥

ಎನ್ನ ಗುರುಗಳ ಗುರುವೆ ನಿನ್ನ ತುತಿಸಿ ಕರವೆ । ಬಿನ್ನಹ ಚಿತ್ತೈಸೊ ಧನ್ನ ಜನ ಮಾನ್ಯ ||೫|| ಹಲವು **ವಿಧದಿ ಹರಿಯಾ ಒಲಿಮೆಯ ಪಡೆದ ಪಿರಿಯಾ** । ಸುಲಭದಿ ವೇಣುದಾಸನ್ನ ಸಲಹೊ ಶ್ರೀ ಗುರುರಾಯ ||೬|| ಗುರು ಗೋಪಾಲ ವಿಠಲನ್ನ ಚರಣಾಶ್ರಯರಾವ। ಪುರಂದರದಾಸ ರಾಯರ ವರಾನುಗ್ರಹ ಬಲದಿ ||೭||

# ಶ್ರೀ ವ್ಯಾಸ ವಿಠಲಕೃತ

ಪದ ೪೦ ರಾಗ ಸಾರಂಗ, ಆದಿತಾಳ

ಸ್ಮರಿಸಿ ಬದುಕಿರೊ ದಿವ್ಯ ಚರಣಕೆರಗಿರೊ । ದುರಿತ ತರಿದು ಪೊರೆವ ವಿಜಯ ಗುರುಗಳೆಂಬರ ||ಪಲ್ಲ|| ದಾಸರಾಯನ ದಯವು ಸೂಸಿ ಪಡೆದನ । ದೋಷರಹಿತನ ಸಂತೋಷಭರಿತನ || ೧ || ಜ್ಞಾನವಂತನ ದಯ ನಿದಾನ ಶಾಂತನ । ಮಾನ್ಯವಂತನ ಬಲುವದ್ಯಾನ ದಾತನ||೨|| ಹರಿಯ ಭಜಿಸುವ ನರಹರಿಯ ಯಜಿಸುವ। ದುರಿತ ತ್ಯಜಿಸುವ ಜನಕೆ ಹರುಷ ಸುರಿಸುವ || ೩ || ಮೋದ ಭರಿತನ ಪಂಚ ಭೇದವರಿತನ । ಸಾಧು ಚರಿತನ ಮನೊ ವಿಷಾದ ಮರೆತನ ||೪|| ಇವರ ನಂಬಿದ ಜನಕೆ ಭವವಿದೆಂಬುದ । ಹವಣವಾಗದು ಎಮ್ಮರರ ಮತವಿದು || ೫ || ಪಾಪ ಕೋಟಿಯಾ ರಾಶಿ ಲೇಪವಾಗದು । ತಾಪ ಕಳೆವನು ಬಲು ದಯಾಪಯೋನಿಧಿ ||೬|| ಕವನ ರೂಪದಿ ಹರಿಯ ಸ್ತವನ ಮಾಡಿದ । ಭುವನ ಬೇಡಿದ ಮಾಧವನ ನೋಡಿದ || ೭ || ರಂಗನೆಂದ ರಾ ಭಯವು ಹಿಂಗಿತೆಂದನು । ಮಂಗಳಾಂಗನು ಅಂತರಂಗ ಫಲವನು (ಭರಿತನು) ||೮|| ಕಾಶಿ ನಗರದಿ ಇದ್ದ ವ್ಯಾಸದೇವನ । ಸೂಸಿ ಭಜಿಸಿದ ಉಲ್ಹಾಸದಿಂವತಿ ||೯|| ಚಿಂತೆಯಾತಕೊ ನೀ ನಿಶ್ಚಿಂತನಾಗಿರು । ಶಾಂತ ಗುರುಗಳ ಪಾದ ಯಿಂತು ನಂಬಿರೊ ||೧೦|| ಖೇದವಾಗದು ನಿಮಗೆ ಮೋದವಾಹದು । ಸಾಧು ಗುರುಗಳ ದಿವ್ಯ ಪಾದ ನಂಬಿರೊ ||೧೧|| ತಾಪ ತಡೆವನು ಬಂದ ಪಾಪ ಕಡಿವನು । ಶ್ರೀಪತೀಶನಾ ಪದ ಸಮೀಪದಿಡುವನು ||೧೨|| ವೇದ ವೋದಲು ಬಲು (ಬಹಳ) ವಾದ ಮಾಡಲು । ಹಾದಿ ದೊರೆಯದು ಬುಧರ ಪಾದ ನಂಬವೆ ||೧೩|| ಗಂಗೆ ಮಿಂದರೆ ಮಲವು ಹಿಂಗಿತಲ್ಲದೆ ।

ರಂಗವ್ವೊಲಿಯುಸೊ ಭಕ್ತ ಸಂಗದೊರಿಯದೆ ॥ ೧೪ ॥ ಲಕ್ಷ್ಮಿಯಿಲ್ಲದಾ ದೇಶ ತುಷ್ಟಿ ಬಂದರೆ । ದುಃಖವಿಲ್ಲದೇ ಲೇಶ [ಲೇಸು] ಭಕ್ತಿ ದೊರೆಯದು ॥೧೫॥ ದಾನ ಮಾಡಲು ದಿವ್ಯ ಗಾನ ಮಾಡಲು । ಜ್ಞಾನ ದೊರೆಯದೊಯಿವರ ಧೀನವಾಗದೆ ॥೧೬॥ ನಿಷ್ಠಿಯಾತಕೋ ಕಂಡ ಕಷ್ಟವ್ಯಾತಕೊ । ಧಿಟ್ಟ ಗುರುಗಳ ಪಾದಮುಟ್ಟಿ ಭಜಿಸಿರೊ ॥೧೭॥ ಪೂಜೆ ಮಾಡಲು ಕಂಡಗೋಜು ಬೀಳಲು । ಬೀಜ ಮಾತಿನ ಫಲ ಸಹಜವಾಗದು ॥೧೮॥ ಸುರರು ಯೆಲ್ಲರು ಯಿವರ ಕರವ ಪಿಡಿವರು । ತರುಳರಂದದಿ ಹಿಂದೆ ತಿರುಗುತಿಪ್ಪರು ॥ ೧೯ ॥ ಗ್ರಹಗಳೆಲ್ಲವು ಯಿವರ್ಗೆ ಸಹಯವಾಗೋವು । ಅಹೊ ರಾತ್ರಿಲಿ ಸುಖದ ನಿವಹ ಕೊಡುವವು ॥೨॥ ವ್ಯಾಧಿ ಬಾರದು ದೇಹಬಾಧೆ ತಟ್ಟದು । ಆದಿ ದೇವನ ಸುಪ್ರಸಾದವಾಹುದು ॥೨೧॥ ಪತಿತ ಪಾಮರ ಮಂದಮತಿಗನಾ ಬಲು । (ಮತಿಗಳಿವರ) ತುತಿಸಬೇನೆ (ಬಲ್ಲರೆ) ಮಹಿಮೆ ಅತಿಶಯಂಗಳ ॥೨೨॥ ಕರುಣದಿಂದಲಿ ಎಮ್ಮ ಪೊರೆವನಲ್ಲದೆ । ದುರಿತಕೋಟಿಯಾ ಬ್ಯಾಗ ತರಿವ ದಯದಲಿ ॥೨೩॥ ಮಂದಮತಿಗಳು ಯಿವರ ಛಂದವರಿಯದೆ । ನಿಂದ್ಯ ಮಾಡಲು ಭವದ ಬಂಧ ತಪ್ಪದು ॥೨೪॥ ಇಂದಿರಾಪತಿ ಯಿವರ ಮುಂದೆ ಕುಣಿವನು । ಅಂದವಚನವು ನಿಜಕೆ ತಂದು ತೋರ್ವನು ॥೨೫॥ ಉದಯ ಕಾಲದಿ ಈ ಪದವ ಪಠಿಸಲು । ಮೂಢನಾದರು ಜ್ಞಾನಉದಯ ವಾಹುದು ॥ ೨೬ ॥ ಸತಿ (ಟಿ) ಯಿಲ್ಲವಪ್ಪೊ ವ್ಯಾಸ ವಿಠಲ ಬಲ್ಲನೊ । ಪಠಿಸಬಹುದಿನು ಕೇಳಿ ಕುಟಿಲರಹಿತರು ॥೨೭॥

ಪದ ೪೧ ರಾಗ ಯದುಕುಲಕಾಂಬೋದಿ ಅಟ್ಟತಾಳ

ದಯಮಾಡೊ ಪ್ರೀಯಾ ದಾಸರ ಕುಷಿಣೀ । ದಯ ವಿಜಯ ರಾಯ ಸಾ । ಹಯವಾಗಿ ಪೊವಗುವ್ವೊ ಭಯ ನಿವಾರಣ ಮಾಡಿ ॥ಪಲ್ಲ॥ ಪ್ರಬಲವಾಗಿಹ ಮೋಹ ನಿಬಿಡವಾದದರಿಂದ । ಅಭದಾಯಕ ನಿನ್ನ ಕುಜ ವಾದ ಪಾದಕ್ಕೆ । ಅಭಿವಂದಿಸದಲೆ ಅಲ್ಪರ ಸೇರಿ । ಅಬಲನಾಗುತಲಿ ಪಾಪದ ವನಧಿ । ಗಭಿರ ನೋಡದಲೆ ಬಾಳಿದೆಯೆನ್ನ । ಅಭಿಮಾನ ಪೊಡಿಯಾನೆ ಅಗಡು ಮಾಡದಲೆ ॥೧॥ ನೆರೆನಂಬಿದವರಿಗೆ ದುರಿತ ರಾಶಿಯ ಕಳೆವ । ಪರಿಪರಿ ವರಗಳಗರೆವ ಕಾರಣ ನಿನ್ನ । ಬಿರಿದು ನಾ ಬಲ್ಲೆ ಎನ್ನಯ ಭಾರ । ಸರಿ ನಿನ್ನದಲ್ಲೆ ಲೌಕೀಕವ । ಪರಿ ಮತ್ತೊಂದೊಲ್ಲೆ ।

ಇಹಪರದಲ್ಲಿ । ಪರಮ ಸೌಖ್ಯಕೆ ನಿನ್ನ ಸ್ಮರಣಿ ವಂದಲ್ಲಿ ॥೨॥ ಪಾಮರ ಜನರಿಗೆ ಸುಮಾರ್ಗಗೋಸುಗ । ಶ್ರೀ ಮನೋಹರ ನಿನ್ನ ಪ್ರೇಮದಿಂದಲಿ ಸೃಜಿಸಿ । ಭೂಮಿಯೊಳಿಡಲೂ ಹರಿಯು ದಿವ್ಯ । ನಾಮ ನಾ ಬಿಡಲು । ದುರ್ವಿಷಯವ ಕಾಮಿಸಿ ಕೆಡಲೂ । ಸುಮ್ಮನಿರುವರೆ । ಯಾಮ ಯಾಮಕ ನಿನಗ ನಾ ಮೊರೆಯಿಡಲೂ ॥೩॥ ಜಗದಂತರ್ಯಾಮಿಯಾ ಹಗಲು ಇರಳು ಬಿಡದೆ । ಸುಗುಣ ಮಾರ್ಗದಲಿದ್ದು । ಬಿಗಿಯಾದ ಕವನಕ್ಕೆ । ಬಗೆ ತೋರಿದವನೆ ಹರಿಯುಕ್ಷಣ । ಅಗಲದಿದ್ದವನೆ ಕಾಮದ ಬಲಿಗೆ । ಸಿಗದೆ ನಡೆದವನೆ ಅನುನಯದಿ ಕರದ । ಮುಗಿದು ಬೇಡುವರಲ್ಲಿ ಮುದದಿಂದ ನಲಿವನೆ ॥೪॥ ಎನ್ನೊಬ್ಬಗಲ್ಲ ಈ ಬಿನ್ನಪ ಕರುಣಾಳೆ । ನಿನ್ನ ಪೊಂದಿದವರ ಮನ್ನಿಸಿ ಸಲಹಯ್ಯಾ । ಬೆನ್ನ ಬಿಡದಲೆ ವ್ಯಾಸ ವಿಠ । ಲನ್ನ ಪಾಡುತಲೆ ಕಾಲವ ಕಳೆವ । ಸನ್ಮಾರ್ಗವನೆ ತೋರಿ ತಡಮಾಡದಲೆ ॥೫॥

## ಶ್ರೀ ಗುರು ವ್ಯಾಸ ವಿಠಲಕೃತ

ಪದ ೪೨ ರಾಗ ಮುಖಾರಿ, ಝಂಪಿತಾಳ

ಸರಿಗಾಣೆನಯ್ಯಾ ಈ ಅವನಿಯೊಳಗ । ಪರಮ ಪಾವನರಾದ ಗುರು ವಿಜಯದಾಸರಿಗೆ ॥ಪಲ್ಲ॥ ಗಿರಿ ಶಾದ್ರಿಸಿಲಯನ ಮಹತ್ಮೆಯನು ತಮ್ಮ । ಪರಮ ಆಪ್ತರಾದ ಶಿಷ್ಯಗಣಕೆ ॥ ಒರಬೊರಮ ಪೇಳುವರು ಕರುಣಾಳು ಗಳು ಯಿವರ । ಚರಿಯಕ್ಕೆ ಸಾಯುಂಟೆ ಈ ಕಲಿಯುಗದಿ ॥೧॥ ಆವ ದೇವತೆಗಳೊ ಈ ಯುಗದಿ ಬಂದಿಹರು । ನಾನಾಥಾನದಿ ತಿಳಿ ು ಈ ಪರಿಯಲೀ ॥ ಭಾವ ಶುದ್ಧದಲಿ ನೆರೆನಂಬಿದವರ ಕ್ಷ । ಮಾವನ್ನ ಮಾಡುವರು ಆವರಿವಕಾಲದಲಿ ॥೨॥ ನರಹರಿ ಸರ್ವಜ್ಞ ವ್ಯಾಪ್ತನೆಂಬುವದಲ್ಲಿ । ಪರಿಪರಿಯ ಶ್ರುತಿ ಸ್ಮೃತಿಯು ಪೇಳುತಿಹರು ॥ ಪರಮಧನ್ಯನಾದೆ ಇವರ ಚರಣವ ನೋಡಿ । ಗುರುವ್ಯಾಸ ವಿಠ್ಠಲನ ಕರುಣ ಪೂರಿತರಿಗೆ ॥೩॥

## ಶ್ರೀ ಗುರು ವೇಣುಗೋಪಾಲ ವಿಠಲಕೃತ

ಪದ ೪೩ ರಾಗ ನಾಟಿ. ಗದ್ಯ

ನಮೋ ವಿಜಯ ರಾಯ ಗುರು ನಮಿತ ಶರಣ ನಮೊ ನಮೊ । ನಿಮ್ಮ ಮಹಿಯೊಳಗೆ ನಿರುತದಿ ಪರಮ ಕರಣಿಯ ಸಿಷ್ಯ ಸ್ಮರಣೆಯು

ದೂರ ಪಡಿಸಿತು ಎನಗೆ—ಅನುಭವವು ಸ್ಥಿರವಹುದು । ಎಂದಿಗಾದರು
ನಿನ್ನ ಪೊಂದಿಹ್ಯ ಚರಣ ಸೇವಕರ । ಮನೆಯ ತರುಳನನು । ಪರಿ
ಪರಿಯು ನೀವು ಮಾಡಿದ ಕವನ ಸುಳಾದಿ । ಪರತತ್ವರಹಸ್ಯ ಹರಿಗುಣ
ಗಳ ಯರಕವಾಗಲಿ ಎನ್ನಮನ ಅರುಪಂತೀಗ । ವರ ಪಾಲಿಪುದು ಎನ್ನ
ದೂರು ನೋಡದೆ । ಇದೆ ಸುಖವ ನೀಡುವದು ನೀನು ಎನ್ನೊಳಗಿದ್ದು ।
ಒದಗಿಸುವುದು ವೈರಾಗ್ಯ ಜ್ಞಾನ ಭಕುತಿ ಸದಾ ಬೇಡಿಕೊಂಬೆ ಗುರು
ವೇಣುಗೋಪಾಲ ವಿಠಲ । ತವಹೃದಯಾಬ್ಜ ವಾಸ ರಕ್ಷಿಸಲಿ ಸತತ
ನಮೋ ನಮೋ ವಿಜಯರಾಯ ॥೧॥

## ರಾಮಚಂದ್ರ ವಿಠಲಕೃತ

ಸುಳಾದಿ ೪೪ ರಾಗ ಭೈರವಿ, ಧ್ರುವತಾಳ

ವಿಜಯರಾಯ ಗುರುವೆ ನಿಮ್ಮ ಪಾದಾಬ್ಜದ । ರಜವು ಶಿರದಲಿ
ಧರಿಸಿದವರ ದಾಸರ । ನಿಜವಾಗಿ ನಂಬಿದ ಬಗೆಯು ತಿಳಿಯದೆ ಎನ್ನ ।
ಸುಜನರಿಂದ ಬಲು ಕೊಂಡಾಡಿಸಿ । ಭಜಕರ ಪಾದಸೇವೆ ಸ್ವಲ್ಪವಾದರು
ಕೊಡದೆ । ಕುಜನ ಶ್ರೇಷ್ಠನ ಮಾಡಿ ನೋಡುವರೆ । ಗಜರಾಜ ವರದ
ರಾಮಚಂದ್ರ ವಿಠ್ಠಲನ್ನ । ಧ್ವಜವಜ್ರಾಂಕಿತ ಪಾದ ಮನದಿ ನಿಲಿಸಿದ
ಕರುಣಿ ॥೧॥

ಮಟ್ಟತಾಳ

ನಿನ್ನ ನಂಬಿದೆ ಗುರುವೆ ಜ್ಞಾನಭಕುತಿ ಸಂ। ಪೂರ್ಣ ವೈರಾಗ್ಯವನ್ನು
ಕೊಟ್ಟು ಹರಿಯ ಪಾದ । ವನ್ನ ಜಲದಲ್ಲಿ ಮನ ಯರಕ ಮಾಡೊದೆಂದು ।
ಬಿನ್ನಪ ಕೇಳದಲೆ ಸಕಲ ಸುಜನರಿಂದ । ಮನ್ನಿಸಿ ವಿಪರೀತ ಮಾಡಬಹು
ದೇನಯ್ಯ । ಎನ್ನಾಣೆ ಪುತಿಯಿಲ್ಲ ಮೊದಲಿಗಿಂದಲಿ ನಾನು ಚನ್ನಾಗಿ ಕೆಟ್ಟು
ತೆರವಿ ತೋರುತಲಿಹೆನು । ಸನ್ನ್ಯಾಯ ವಹುದೆ ರಾಮಚಂದ್ರ ವಿಠಲನ್ನ ।
ಭ । ಜನೆಯಿಂದ ದೂರನ್ನ ಮಾಡುವದು ॥೨॥

ರೂಪಕ ತಾಳ

ಜೋಳವನ್ನ ಮೊದಲು ಉಂಬುವ ಸಮಯ । ವಲ್ಲಿ ಪೊಂದಿದ್ದಿಲ್ಲ
ಮನ ಕೇವಲಾಸಕ್ತಿಯಲಿ । ಹೋಳಿಗೆ ತುಪ್ಪ ನೀನು ಈಗ ಬೇಡದೆ

ಕೊಡಲು । ಪಾಲಯ ಬಂದು ಸ್ನೇಹದಿಂದ ಭೋಜನ ಮಾಡ್ಪ। ವೇಳೆ ವೇಳೆಗೆ ದೊರಕಲು ಬಲು ಸುಖಿಸುವೆ । ತಾಳದೆನಗೆ ಸ್ವಲ್ಪ ವೈರಾಗ್ಯ ನಾದ ಪಾಲುತಿ । ಸೀಲ ಜನರ ಪಾದ ಕೆರಗಲು ಮೊದಲು ಬಹು । ಮೇಲು ಕರುಣದಿಂದ ವಂದಿಸಿ ಕೊಳುತಿದ್ದರು । ಕಾಲರಘಳಿಗೆ ತವ ಶರಣರ ಪಾದಾಬ್ಜದ ! ಧೂಳಿ ಎನ್ನ ಶಿರಕೆ ಅತಿ ದೂರಾಯಿತು ಗುರುವೇ। ತಾಳಾರು ಸ್ವಲ್ಪ ಹತ್ತ ಸೇರಗೊಡರೆನ್ನ । ಘಾಳಿಗಂಜುವರು ಮುಂದೇನು ಗತಿಯೊ.। ಧಾಳಿ ಬಂದು ಭಕುತಿ ಸೂರೆ ಹೋಗಿ ಗ್ರಾಸು । ಪಾಳು ಬಿದ್ದಂತೆನ್ನ ಮನವಾಯಿತೊ । ಪೇಳಲೇನು ದುಃಖ ವುಂಡುಂಡು ಮದ ದಿಂದ । ಶ್ರೀಲೋಲನಂಘ್ರಿ ಸ್ಮೃತಿ ಅಡಗಿತಲ್ಲ । ಪಾಲನಾಗರಶಾಯಿ ರಾಮಚಂದ್ರ ವಿಠಲ । ನೂಳಿಗರ ಕೊಂಡಾಡಲಹಂಕಾರ ಹೆಚ್ಚಿತು ||೩||

ಝಂಪಿತಾಳ

ಪಡೆದ ಜನನಿ ಒಬ್ಬಳೆ ಧರ್ಮಕ್ಕೆ ವಿಷ್ಣು । ಒಡಹುಟ್ಟಿದವನೆಂದು ಮಾಡುತಿಹ್ಯಳು । ಪೊಡವಿಯೊಳಗುಳ್ಳ ಜ್ಞಾನಿಗಳು ಈಗಲು ಆ । ಪಡದ ಜನನಿಕಿಂತ ಅಧಿಕವಾಗಿ। ಒಡಲಿಗೆ ಪ್ರುಷ್ಟಾನ್ನ ಕೊಟ್ಟು ಪ್ರೋಷಿಸಿ ನಿತ್ಯ । ಸಡಗರದಿಸೇವೆ ಎನ್ನಿಂದ ಕೊಳ್ಳದು । ತಡೆಯದು ಛಳಿಯೆಂದು ಹಿಮಪರ್ವತವ ಸೇರಿ । ಮಿಡಕುವಾನಂತೆನ್ನ ಮಾಡಬಹುದೆ । ಕಡು ಕರುಣಿ ನೀನೆಂದು ಪೊಂದಿದವಗೆ ಮುಂದೆ । ಬಡಿವಾರ ಕೆಡುವಂತೆ ಮಾಡಲೊಲ್ಲಿ । ಧೃಡಶರಣರಿಗಿತ್ತದರಿಂದ ಬಾಧಿಲ್ಲ । ಕಡುಮೂರ್ಖ ನಾನೆಂದು ಬೋಧಿಸುವದೊ । ಪ್ಪುಡನಂದ್ಯಾ ಸಿರಿ ರಾಮಚಂದ್ರ ವಿಠಲ ನಂಘ್ರಿ । ಬಿಡದೆ ಪೊಗಳುವ ಶರಣ ಈ ಬಗೆ ತಿಳಿಯದೆನಗೆ ||೪||

ತ್ರಿವಿಡಿ ತಾಳ

ಉಂಡುಂಡ ಪಾಪಕೆ ಎನ್ನಲ್ಲಿ ಭಾಧಿಸವು । ತೋಂಡಗಧಿಕ ದಾಸನು ಆಗಲೆಂಬ ಬಗೆಯೊ। ಹಿಂಡು ಮುತ್ತರನುಂಡೆ ಮನ್ನಿಸುವರೆಂದು । ಪಂಡಿತ ಜನರಿಂದ ಪ್ರೋಷಿಸುವ ಸಾದ್ರುಶವೊ । ಚಂಡವಿಕ್ರಮ ರಾಮಚಂದ್ರ ವಿಠ್ಠಲನಂಘ್ರಿ। ಕಂಡು ಭಜಿಸುವ ಮಹಮಹಿಮೆಯು ತಿಳಿ ಯದೆನೆಗೆ ||೫||

ಅಟ್ಟತಾಳ

ಏನಾವರು ಸರಿ ಪಾಪ ಎನಗಿಲ್ಲೆಂಬ । ದಾನು ಮನಕೆ ತೋರುವದು ಗುರುತೆ । ಶ್ವಾನ ಬಹುಕಾಲ ಉಪವಾಸವಿದ್ದು ಕೊನೆಗೆ। ಏನು ಕಷ್ಟಂಡರೂ ಪುಣ ವಿಲ್ಲ । ಹೀನ ನಡತಿಯು ಕಂಡು ಕೊಲ್ಲದಿರುವರೆ । ಜಾನಕಿ ಶ್ರೀನಾಥ ನಂಘ್ರಿ ಪಾದಾಬ್ಜ ಮಧುಪ । ಏನಾದರೊಂದು ಸಮ್ಮಂಧಾದ ಪುರುಷಗೆ । ಪಾಣಿಯಿಂದ ಕೊಟ್ಟು ಸಲಹಬೇಕಲ್ಲದೆ । ವಾಣಿಯಿಂದ ಉಪಚರ್ಯ ಮಾತುಗಳಾಡಿ । ಮೇಣು ಕರುಣ ವನಮಾಡೆ ದಣಿಯರಲ್ಲ । ಜ್ಞಾನಿ ಶಿರೋಮಣಿ ಸ್ವಲ್ಪ ಕಡ್ಡಾಪತ್ತು । ಸ್ವಾನ (ನಿ) ಂವಸೇಳಲು ವಶವಲ್ಲವ್ರೊ । ಏನು ವೃಂಡರೆ ಏನು ನಿನ್ನವರ ಪೊಂದಲು।ಹೀನ ಪಾಪವ ತಮ ಭಾನುಗೆಮರೆ। ಪೌನಿಶ ವಂದ್ಯ ರಾಮಚಂದ್ರ ವಿಠಲನ್ನ । ಧ್ಯಾನ ಮನದಿ ತೋರಿ ಸರಿ ಬಂದತೆರಮಾಡೊ ॥೬॥

॥ ಆದಿತಾಳ ॥

ಉಣಿಸು ಉಪವಾಸವಲ್ಲೆ ಯಿರಿಸೊ ಮನ। ಸಿನೊಳೀ ಅಹಂಕಾರವ ಮಾತ್ಸರ ಬಿಡಿಸೋ । ಅನುದಿನ ಹರಿದಾಸರ ಪಾದಾಬ್ಜದ । ಕಣಧೂಳಿಗೆ ಶಿರವ ನಮಿಸಲಿ । ಕ್ಷಣವಾವರು ಹರಿ ವಿಸ್ಮೃತಿ ಕೊಡದಲೆ । ಮನೆತನ ವೆಂಬ ವಯವಿರಲಿ। ಇನಿತು ಬಿನ್ನೈಸಿದೆ ಪ್ಯಾಗೆ ನೀ ಮಾಡಲು। ಎನೆಸಪ ಕೀರ್ತಿ ನಿನ್ನ ದಾಕ್ಷೋಣಿಗೆ । ವನಜಾಕ್ಷ ರಾಮಚಂದ್ರ ವಿಠಲನ ದಾಸಾ । ಗ್ರಣಿ ಎನಗೆ ಚಿಂತಾಮಣಿ ।

॥ ಜತೆ ॥

॥ ಸಮ್ಬಂಧವಾದವೋಲೆ ನಿನಗೆ ಎನ್ನ ಚಿಂತೆತಪ್ಪದೊ ॥
॥ ಒಮ್ಮೆ ರಾಮಚಂದ್ರ ವಿಠಲನ ಮೂರ್ತಿಯ ತೋರೊ ॥

# ತಂದೆ ವೇಣುಗೋಪಾಲ ವಿಠಲ ಕೃತ

ಪದ ೪೫ ರಾಗ ಆರಭಿ ತ್ರಿಪುಡಿ ತಾಳ

ಭಜಿಸಿ ಬದುಕಿರೊ ನಿಸ್ವಗಜನ ಧರಿಸಿರೋ। ಅಜನ ಪಿತನ ಪ್ರೀಯ ರಾಘವ ನಿಜನ ರಾಯರ ॥ಪಲ್ಲ॥ ಭೋಗ ಬಡದಲೆ ಸುಖಕೆ ಪೋಗಿ ಕೆಡದಲೆ। ನಾಗಶಯನನ ಭಜಿಸಿ ಜಾಗು ಮಾಡದೆ ॥೧॥ ಕುಜನ ಸಂಗವ

ಒಲು ತ್ಯಜಿಸಿ ವೇಗದಿ । ಭಜನೆ ಮಾಡಿರೊ ನಮ್ಮ ವಿಜಯರಾಯರ॥೨॥ ಪೊಂದಿಯಿದ್ದೆನೊ ಭವದಿಂದ ಗೆದ್ದನೊ । ತಂದೆ ವೇಣುಗೋಪಾಲ ವಿಠಲ ಮನಕೆ ತೋರುವ ॥೩॥

## ರಘುಪತಿ ವಿಠಲ ಕೃತ

ಪದ ೪೬ ರಾಗ ಪಂತುವರಾಳಿ ಆದಿತಾಳ

ವಿಜಯರ ಭಾಗ್ಯವಿದು ತ್ಯಜಿಸದೆ ನಮ್ಮನು ಬಿಡದೆ ಪೊರೆವುದು॥ಪ॥ ಅಘಸುರಾದವರೆಲ್ಲ ಬುಧರಾಗಿ ಇರುವದು । ಸಾಧು ಮಾರ್ಗಗಳನುಸರಿಸುವದು । ಭೇದಾರ್ಥದಲಿ ದೃಢವಾಗಿ ಎಂದೆಂದು ಅಪ । ರಾಧ ಮಾಡದೆ ಬಾಳುವದೆಲ್ಲ ॥೧॥ ಯಾತ್ರೆ ತೀರ್ಥಕೆ ಪೋಗಿ ಸ್ತೋತ್ರದಿ ಹರಿಯಪಾಡಿ ಪಾತ್ರರಾದವರ ಸಂಗಡ ನಲಿದು । ಗಾತ್ರ ಪರವು ಮರೆದು ಧಾತ್ರಿಯೊಳಗೆ ಸಜ್ಜನ । ಮಿತ್ರರೆನಿಸಿ ಬದುಕುವದೆಲ್ಲ॥೨॥ಸಂದೆವಂದನೆಗಳು ಪಂದೆರಡೆಣಿಸದೆ । ಸಂದೇಹವಿಲ್ಲದೆ ಲೇಶವು ತಾಳದೆ ಮುಂದರ ಧರ ಎಲ್ಲರಿಂದ ಯೇನಾಡಿಸ ಲಾ । ನಂದವೆಂದು ಹಿಗ್ಗುವದೆಲ್ಲ ॥೩॥ ಜಡತನ ಭಾಗ್ಯವೆಂದಡಿಗಡಿಗೆ ಮನ। ಕಡು ಮರುಗದೆ ಹಿಗ್ಗಿ ನಿತ್ಯ! ಸಡಗರ ಸಾಧನ ಬಿಡದೆ ಭೂಷಣವೆಂದತಿಇಡುವದು ತೊಡುವದು ಸತ್ಯರ್ಪಣ ಸರ್ವದ ॥೪॥ ಅಂದಣ ಕುಂದಣ ಮಂದಿರ ಬಯಸದೆ ನಿಂದಿರ ಪುಷ್ಕರ ರಂಗಿನಲಿ ॥ ಇಂದಿರಪತಿ ರಘುಪತಿ ವಿಠ್ಠಲ ಗುಣ । ವೃಂದಸಂಪೂರ್ಣನೆಂದು ಬಾಳುವದೆಲ್ಲ ॥೫॥

ಪದ ೪೭ ರಾಗ ಅಠಾಣ ಆದಿತಾಳ

ವಿಜಯರಾಜಗುರು ರಾಜಾಧಿರಾಜ ಮುಹರಾಜ ಶಿರೋರತುನ ॥ ತ್ಯಜಿಸದೆ ನಿಮ್ಮ ಪಾದಾಬ್ಜವ ಬಿಡೆನೆಂಬೆ। ಸುಜನರ ಪಾಲಿಸಯ್ಯಾ ॥ಪ॥ ಜ್ಞಾನ ಭಕುತಿ ಕೊಡು ಗಾನಶೀಲರನಾಡು । ಹೀನ ಮನವ ಕೆಡಿಸೊ । ಆನೆಂಬೊ ಅಹಂಕಾರ ರನ್ನೆ ತೊಲಗಿಸೊ । ನಿನ್ನವರವ ನೆನಿಸೊ ॥ ಧೇನಿಸು ವಂದದಿ । ಹರಿಯ ಪಾದಾಂಬುಜ ಮಾನಸದಲಿ ಸರ್ವದ ॥ ಕಾಣಿಸಿ ಕೊಡುವನು ಜೀವನು ನಿಜನೆಂಬ। ಧ್ಯಾನ ಮನಕೆ ಬರಲಿ ॥೧॥ ಮೌನಿಯಾಗಿರಲಾರು ಹೀನತೆ ನುಡಿಯಾಲು । ಪ್ರಾಣಪ್ರೇರಕರಿಂದಲಿ । ಆನೆ ನಾಡುವನಲ್ಲ ಆನೆನೆನಿಸುವನಲ್ಲ ಆನೆ ಸ್ವತಂತ್ರನಲ್ಲ॥ ದೀನನಾಗೆರಗಿ ಸಜ್ಜನರ

ಪಾದಾಬ್ಜಕೆ ಲೀನನಾಗಿ ನಡೆನು। ನೀನೇವೆಗತಿಯೆಂದು ನಿನ್ನನೆ ಮೊರೆ ಹೊಕ್ಕೆ ಕ್ಷೋಣಿಭೋಳಗೆ ಬಳಲಿ॥೨॥ ನಿಮ್ಮ ಕೊಂಡಾಡುವ ಬುಧರಕಾಣ ಲು ಅವರೆ ಮ್ಯಾಪ್ತರೆಂದೆನಲಿ। ನಿಮ್ಮ ಪುಣ್ಯದ ಪುತ್ರಗೋಪಾಲದಾಸರು ಎಮ್ಮ ರಕ್ಷಕರಾಗಲಿ ಇಮ್ಮಹೀಯೊಳಗೇಸು ಕಾಲವಾದರು ಪುಣ್ಯ। ಸ ಮ್ಯಂಥ ಕೆಪದಿರಲಿ। ಸುಮ್ಮನಸರೀಶ ರಘುಪತಿ ವಿಠ್ಠಲನು। ನಮ್ಮ ಸ್ವಾಮಿಯಾಗಲಿ ॥೩॥

# ವರದ ಗುರು ಮುದ್ದು ಕೃಷ್ಣ

ವಿಜಯರಾಯರ ಉಪಾಸ್ಯ ವೇಣು ಗೋಪಾಲ ದೇವರ ಸ್ತೋತ್ರ

ಪದ ೪೮ ರಾಗ ಭೈರವಿ ಝಂಪಿತಾಳ

ಅಪರೂಪ ದರುಶನವು ಆಯಿತಿಂದೂ। ಸಫಲವಂತನ ಮಾಳ್ಪ ಸದ್ಗುಣ ಸಿಂಧು ॥ಪ॥ ಅನಂತ ಜನುಮದ ಅಘನಾಶನಾದವು। ಮಾನವಂತನಾದೆ ಮಹಿಯೊಳಗೆ॥ ಜ್ಞಾನ ಗುಣಪೂರ್ಣ ವಿಜಯಸಾಖ್ಯ ಶಿರೋಮಣಿಯಿಂದ। ಧ್ಯಾನಮಾಡಿಸಿಕೊಂಬ ದೀನವತ್ಸಲ ನಿನ್ನ ॥೧॥ ಭಾಗೀರಥಿಯ ಪಡೆದ ಭಾಗವತರರ್ಚಿಪ। ಭೋಗ ಪಡೆತುಳಿದು ಅವರರಿಯ ಸೇರಿ॥ ಜಗರೂಪದಿ ಜಗದಿ ಬಾಳ್ವರನು ತೋರಿಪ। ರಾಗ ಪೂರಿತಶರಣ ಕಮಲ ಶ್ರೀಕರ ನಿನ್ನ ॥೨॥ ಪುರಂದರನನುಸರಿಸಿ ಪರಮಾರ್ಥಿಕವ ಪ್ರೊಹಿಸಿ। ಪರಿಪರಿಯು ವ್ರತಸೇತುವಾಚರಿಸಿ॥ ಕರಪಿಡಿದು ಎನ್ನ ಹಿರಿಯರು ಕರುಣ ಮಾಡಲು ಪರಣಶಯನಾ ವರದಗುರು ಮುದ್ದು ಕೃಷ್ಣ ನಿನ್ನ ॥೩॥

ಪದ ೪೯ ರಾಗ ಕಾಂಬೋದಿ ಝಂಪಿತಾಳ

ಜಯಭೇರಿ ಹೊಯಿಸುವೆನು ಜಯಶೀಲ ವಿ। ಜಯರಾಯರ ಪಾದವ ನೆನೆದು। ಗಯಕ್ಷೇತ್ರ ಮಧ್ಯದಲಿ॥ಪ॥ ನಯ ವಿನಯ ಸಂಪತ್ತು ನಮ್ರ ಭಾವದಿ ವಿಪ್ರ। ಆರ್ಯಮುನಿಗಳಲ್ಲಿ ಅರ್ಚಿಸುತ॥ ಭಯಭಕುತಿಯಿಂದ ಕರಜೋಡಿಸಿದಿರಲಿ ನಿಂದು। ಭಯನಿವಾರಣ ಹರಿಯ ಭಕ್ತಿವನ ವಿಧದಲ್ಲಿ ॥೧॥ ಕುಜನವನ ಕುಠಾರಿ ಸಜ್ಜನರ ಸುರ ತರುವೆ। ಅಜನ ಕುಲಾಬ್ಧಿ ಸೋಮನೆನಿಸುವ॥ ನಿಜ ಗುರುವೆ ನಿನ್ನ

ದ್ವಯ ಅಬುಜಪಾದನ ನೆನೆದು । ಗಜರಾಜ ವರವನ್ನ ಪುರನ ಸೂರೆಗೊಂ
ಡು ॥೨॥ ಭೂಸುರರ ಸಂಪ್ರೀತಿ ಸಕಲ ದಳಸಿದ್ಧಿಪ। ಶಾಶ್ವತದಿ ಗುರು ಕರು
ಣ ಶ್ವೇತ ಛತ್ರ॥ ವಾಸೆ ಪಂಥವ ಬಿಟ್ಟು ವರದ ಗುರು ಗುದ್ದು ಕೃಷ್ಣನ ।
ಭಾಸುರ ಕೀರ್ತಿ ಕೊಂಡಾಡಿ ಜಯಜಯವೆಂದು ॥೩॥

# ಬಾದರಾಯಣ ವಿಠ್ಠಲ ಕೃತ

ಪದ ೫೦ ರಾಗ ಯರಕಲ ಕಾಂಬೋಧಿ ಝಂಪಿತಾಳ

ನಿಜ ವಿಜಯರಾಯರ ಸಿರಿ ವಿಜಯ ವಿಠಲನ ಪ್ರಿಯ । ಭಜಕನೇ
ಭಾಗ್ಯೋದಯ ॥ಯಜಮಾನ ಎಮಿ ಕುಲೇಶನೆ ಯಾಕೆ ದಯ ಬರದು ।
ನಿಜ ಜನಪ್ರಿಯ ಸದಯಾ ಸ್ವಾಮಿ ॥ಪ॥ ಪುಟ್ಟಿದಾರಭ್ಯ ಈ ಪರಿಯಂತ
ವೊಂದುದಿನ । ಕೃಷ್ಣರಾಮಾ ಯೆನ್ನದೆ। ಶಿಷ್ಟ ಜನರಲಿ ಪೋಗಿ ಸೇವೆನಾ
ಡೆನರ ಉ । ತ್ಕೃಷ್ಟ ದಯವನು ಪಡೆಯದೆ । ನಿಷ್ಠೂರ ಜನರ ನುಡಿಯ
ನು ಸೇರಿಸತತ । ಈ ಪೊಟ್ಟೆಯನು ನೆರೆ ತುಂಬಿದೆ ॥ ದುಷ್ಟ ಜನರ ಸಂಗ
ತು ದುರ್ಜನರ ಕೂಡಾಡಿ । ಕೆಟ್ಟೆನೋ ಕರ ಣ ನಿಧಿಯೇ ಸ್ವಾಮಿ ॥೧॥
ಉತ್ತಮರು ಸಜ್ಜನರ ಉತ್ತಮರು ಎನಲು । ಉನ್ಮತ್ತ ರಿಪರೆಂದರಿವೆನೊ।
ತೀರ್ಥ ಕ್ಷೇತ್ರ ವಿಜನಸ್ಥಳದಿ ಕುಳಿತು ನಾ । ಮತ್ತೆ ಬಲಿಯರ ನೆನೆದೆನೊ।
ಮತ್ತೆನರ ಮೈಬಣ್ಣನೆತ್ತಿ ಕೂದಲು ನೋಡಿ।ಧೂರ್ತ ಮತಿಗೊಳಗಾದೆನೊ।
ಅತ್ಯಂತ ಪತಿತನಾನಾದ ಕಾರಣದಿಂದ । ಎತ್ತಲೋ ಮರೆತೆ ಯೆನ್ನೋ
ಗುರುವೆ ॥೨॥ ಜ್ಞಾನಿ ಜನರೊಡೆಯ ಸರ್ವಜ್ಞ ಸನನುಳಸಿಖಿಳ । ದೀನ
ಜನ ವ್ರಜವರ್ಯ । ನೀನೆಂದು ನಿನ್ನಿಪವ ಪನಜ ನಂಬಿದೆ ಯೆನ್ನ । ಮನ್ನಿ
ಪುದು ನಿನಗೆ ಧರ್ಮ ॥ಗೇಣು ಮುಂದಾಗೆ ನೂರ್ಗಾವು ಗ್ಲಿಂದ್ಯಾಕುತಿದೆ।
ಏನ್ಹೇಳಲೆನ್ನ ಕರ್ಮ ॥ ದೀನನಾದೆನು ನಗುತಲಿಹ್ಯರ ಮುನ್ನುಗ್ಗರಿಸಿ।
ದಾನವರ ತೆರದಿ ಸುಕರ್ಮ ಸ್ವಾಮಿ ॥೩॥ ಮೃತನಾದವನ ಬದುಕಿಸಿದೆ
ಯೊ ನೀ ಜಗವರಿಯೆ । ಸತಿಗೆ ಮಾಂಗಲ್ಯ ನೀಡ್ದೆ । ಪತಿತರ ಮಹಾ
ಪಾಪ ಪರಿಹರಿಸಿ ಪರಮ ಸ । ದ್ಗತಿಗೆ ಸೋಪಾನ ಮಾಡ್ದೆ । ತತುಪ್ರೋಪ
ದೇಶವಮಾಡಿ ನಂಬಿದವರನು । ಗತ ಕಲ್ಮಷರನ ಗೈದೆ। ಪೃಥುವಿಯೊಳ್
ಸಂತಾನ ವೊದಲಾದ ಫಲವಿತ್ತು।ಸತತ ಭಕ್ತರನ ಕಾಯ್ದೋ ಗುರುವೆ ॥೪॥
ಎಣೆಗಾಣೆ ನಿಮಗೆ ಕರುಣೆಗಳಲ್ಲಿ ಜಗದೊಳಗೆ ।ಗುಣವಂತ ಗುರುವರೇಣ್ಯ

ದಣಿದು ತಾಪತ್ರಯದೊಳಾಳ್ಪುರಿದೆ ಕಾರುಣ್ಯ । ವನಧಿಯೇ ಕೇಳುಯೆನ್ನ। ಮನದ ಉಬ್ಬಸವನ್ನ ಪರಿಹಾರಮಾಡುವದು । ನಿನಗಧಿಕವಲ್ಲೊ ಘನ್ನ ॥ ಪ್ರಣವ ನಾಮಕ ಬಾದರಾಯಣ ವಿಠಲ । ನಿನಗೆ ಮನೋವಶ ನೋಯೆಂದು ನಿನ್ನ ನೆನೆಯುವೆ ಸ್ವಾಮಿ ॥೫೬॥

ಪದ ೫೧ ರಾಗ ಮೋಹನ ಝಂಪಿ ತಾಳ

ನೀನುದಾಶನ ಮಾಡಲೇನುಗತಿ ಮುಂದೆನಗ । ದೀನ ಜನ ದಿವಿಜ ನ್ವಕ್ಷ ॥ಪ॥ ಜ್ಞಾನಿ ಕುಲತಿಲಕ ಗೋಪಾಲ ದಾಸರಿಗೊಲಿದ । ಜಾಣಗುರು ವಿಜಯರಾಯಾ ಜೀಯಾ ॥ಅ.ಪ॥ ಹಡೆದ ತಾಯಿ ತಂದೆಗಳು ಒಡಲೊಳುದಿಸಿದ ಮಗನ । ಬಿಡಲು ಪಾಲಿಸುವರಾರೊ । ಗಿಡಹಾಕಿದವಗಿಡದಬುಡ ಕಡಿವೇನೆನಲು ಕೈ । ಪಿಡಿದು ನಿಲ್ಲಿಸುವರಾರೊ ॥ ನಡುನೀರಿನೊಳು ನಾವಿ ನಡಿಸುವೆನೆ ಕೈ ಬಿಡಲು ಧಡಕೆ ಸೇರಿಸುವರಾರೊ। ಪೊಡವಿಯಾಳುವ ಅರಸು ಬಲ್ ಬಡುವನಪರಾಧ । ಒಡಂಬಡದೆ ದಣಿಸುತಿರೆ ದಿಕ್ಕುದಾರೆ ಲೋಗುರುವೆ ॥೧॥ ಕರಪಿಡಿದ ಸತಿಯು ಪರಪುರುಷಗೊಪ್ಪಿಸಿ ಪತಿಯು। ಜರಿದು ಬಿಡುವದು ನ್ಯಾಯವೆ । ಕುರುಡನಿಗೆ ಕರವಿತ್ತು ಕರದೊಯ್ದು ಕುಣಿಯಲ್ಲಿ । ಜರಿದು ನಗುವದು ನ್ಯಾಯವೆ। ಕುರಿ.ಹಿಂಡುಗಳ ಸಾಕಿ ಕರೆದು ಹೆಬ್ಬುಲಿ ನಾಯಿ । ನರಿಗಣಿಸುವದು ನ್ಯಾಯವೆ । ನಿರುತ ತವ ಚರಣ ನೆರೆನಂಬಿರೆ ನಗೆನ್ನ । ಕರವು ಸಾಕದೆ ದೂರು ನೋಡುವರೆ ಗುರುವೆ ॥೨॥ ಬಿಸಲಿಂದ ಬಾಯಾರಿ ಹಸು ಗೂಸುನೀರೆನಲು । ಬಿಸಿ ಬಿಸಿ ಜಲವೀಪರೆ । ಹಸಿವೆರೆಶು ತಾಯಿ ತನ್ನ ಶಿಶುವಿಂಗೆ ಮೋಸದಲಿ ವಿಷ ಬೆರಿಸಿ ತುತ್ತೀವರೇ । ಅಸನು ಕರುಣಾಬ್ಧಿ ನಿನ್ನೊಶವಾದವರ ಕೈ ಬಿಡಲು । ಕುಶಲು ಕರುಣಿಗಳು ನಗರೆ ॥ ಋಷಿಕುಲಾರ್ಚಿತಬಾದರಾಯಣ ವಿಠಲ ನಿನ್ನೊಶವಾದ ಸೌಭಾಗ್ಯ ದಲ್ಲೆನ್ನ ಮರೆವರೆ ॥೩॥

## ಕೇಶವ ವಿಠಲ ವಿರಚಿತ

ಪದ ೫೨ ರಾಗ ಶಂಕರಾ ಭರಣ ಏಕತಾಳ

ವಿಜಯ ರಾಯರ ಪಾದಕಮಲ ಭಜಿಸಲಾಕ್ಷಣ ದಿ । ಗ್ವಿಜಯ ಮಾಡಿಸು ಜನರನ್ನ ಪೊರೆವನನುದಿನ ॥ಪ॥ ದಾಸಪ್ಪನೆಂಬ ನಾಮದಿಂದ

ಕರೆಸುತ ಉದರ | ಗೋಪುಗದಿ ಪರರ ಬಳಿಯು ಆಶ್ರಿಸುತ || ಯೇಸು ಪರಿಯು ಬಡತನವು ಸೋಸಿ ದಣಿವುತ | ಕ್ಲೇಶಗೊಂಡು ಸುಲಿಸಿಕೊಂಡು ಕಾಶಿಗ್ಹೋಗುತ ||೧|| ವಾಸವಾಗಿ ಸನ್ಯಾಸಿ ವೇಷ ಧರಿಸುತ ನಿತ್ಯ | ಬ್ಯಾಸರದಲೆ ವ್ರತಗಳು ಉಪವಾಸ ಮಾಡುತ ರಾಶಿ ರಾಶಿ ಜನರ ಕೂಡಿ ದೇಶ ಚರಿಸುತ ಮ್ಯಾಲೆ ಕಾಶಿ ಬಿಟ್ಟು ಶೇತು ರಾಮೇಶನ್ನ ಹುಡುಕುತ ||೨|| ತಿರುಗಿ ತಿರುಗಿ ಚೀಕಲಾ ಪರಿಗೆ ಬಂದನು ಕಂಡು| ಗುರುತು ಹಿಡಿದು ಆ ಕ್ಷಣದಿ ಕರೆದು ವೈದರು | ಪರಮ ಸಂತೋಷದಿಂದ ಭರಿತ ರಾವರು ವೈ | ನೆರೆದ ಶೋಭನಾದಿಗಳನು ತ್ವರಿತಮಾಡ್ದರು ||೩|| ನಿತ್ಯ ಸಂಸಾರದಲ್ಲಾಸಕ್ತರಾಗುತ ದೊಡ್ಡ | ಹತ್ತುಯೆಂಟು ಗ್ರಾಮವನ್ನು ವತ್ತಿ ಆಳುತಾ | ಗುತ್ತಿಗೆಯು ಹೊತ್ತ ರೊಕ್ಕ ಮ್ಯಾಲೆ ಬೀಳುತು ಯೆನ್ನು ಎತ್ತ ಸೇರಲೆಂದು ಭಾಗೀರಥಿಗೆ ಹೋಗುತ ||೪|| ಕಾಶಿಯೊಳಗೆ ಮಲಗಿರಲು ಸ್ವಪ್ನ ಕಂಡರು ಪುರಂ | ದಾಸರೇಪೆಂಬದು ವ್ಯಾಸ ಕಾಶಿಗೆ ಐಯ್ದರು || ಶ್ರೀಶನಿಂದಲಿವರಿಗೆಉಪದೇಶ ಕೊಡಿಸೋರು ವಿಜಯ ದಾಸರೆಂದು ಕರಸಿರೆನ್ನೆ ಎದ್ದುಕುಳಿತರು||೫|| ಕನಸಿನೊಳಗೆ ದೇವರ ದರುಶನಾಗುತ ಶ್ರೀ ಮನಸಿಜನ ಪಿತನ ದಯವು ಘನ ಘನಾಗುತ ||ಜಿನಸು ಜಿನಸು ಪದ ಸಳಾದಿಗಳನು ಪೇಳುತ ಆಗ |ನೆನಿಸಿದಾಕ್ಷಣದಲಿ ಮುಖದಿ ಕವಿತ ಹೊರಡುತಾ|೬| ಮತ್ತೆ ಹೊರಟು ಅದವಾನಿ ಸ್ಥಳಕೆ ಬಂದರು | ಯೇನು ಹತ್ತು ಜನರಿಗೆ ಪೇಳಿದ ವಾಕ್ಯ ಸತ್ಯವೆಂದರು || ಸುತ್ತು ಮುತ್ತು ನೂರಾರು ದಾಸರು ನೆರೆದರು | ಆಸಿ | ಸತ್ತಿಗಿ ಪಲ್ಲಕ್ಕಿಯುವರೆ ಶಿಷ್ಯರಾದರು || ೭ || ಯಾತ್ರಿ ತೀರ್ಥಗಳನು ಬಹಳ ಚರಿಸಿ ನೋಡುತ | ಸ| ತ್ಪಾತ್ರರಲ್ಲಿ ನೋಡಿ ಧರ್ಮಗಳನೆ ಮಾಡುತ || ರಾತ್ರಿ ಹಗಲು ವಿಜಯ ವಿಠ್ಠಲನೆಂದು ಪಾಡುತ | ಜನರ ಶ್ರೋತ್ರ ಯಿಂದ್ರಿಯುಗಳ ವುದ್ಧಾರ ಮಾಡುತ ||೮|| ಪೂರ್ತಿಜ್ಞಾನದಿಂದ ಕರ್ಮವೆಲ್ಲ ಕಡಿದರು | ಸ | ತ್ಕೀರ್ತಿವಂತರಾಗಿ ಬಹಳ ಖ್ಯಾತಿ ಪಡೆದರು || ಕಾರ್ತಿಕಾಶುದ್ಧ ದಶಮಿ ದಿವಸ ನಡೆದರು |ಶ್ರೀ ಸತ್ಯರಮಣ ಕೇಶವ ವಿಠಲನ್ನ ಕಂಡರು ||೯||



## ವೆಂಕಟ ವಿಠಲಕೃತ

ಪದ ೫೩ ರಾಗ ಸೌರಾಷ್ಟ್ರ ಅಟ್ಟತಾಳ

ನಂಬಿದೆ ನಾ ನಿನ್ನ ಚರಣಕಮಲವನ್ನು ವಿಜಯರಾಯ ||ಪ|| ಬೆಂಬಿಡದಲೆ ವಿಷಯ ಹಂಬಲ ಬಿಡಿಸಯ್ಯ ||ಅ. ಪ|| ತಾಯಿ ಯಳೆ ಶಿಶುವನ್ನು ಬಿಟ್ಟಿರುವದುಂಟೆ || ವಿಜಯ|| ಬಾಯ ಬಿಡುವೆನೊ ಭವದಲ್ಲಿ ಸಿಗಬಿದ್ದು | ವಿಜಯರಾಯ || ನೋಯಲಾರೆನೊ ಯೆನ್ನ ಕಾಯೊ ಕರುಣದಿಂದ ವಿಜಯರಾಯ || ಕಾಯ ಮನವು ನಿನ್ನ ಚರಣಕೊಪ್ಪಿಸಿದೆನೊ | ವಿಜಯರಾಯ ||೧|| ಎತ್ತ ಕಾಣದೆ ಕರ್ಮ ಕತ್ತಲೆಯೊಳು ಸುತ್ತಿ | ವಿಜಯರಾಯ | ತತ್ತಳಗೊಳು ತಿಪ್ಪೆ ಯೆತ್ತಿಕೊ ಯಿನ್ನಾರು ವಿಜಯರಾಯ || ಪೆತ್ತ ತಂದೆಗೆ ಮಗ ಭಾರವಾಗುವದುಂಟೆ | ವಿಜಯರಾಯ | ವಿತ್ತಾದಿ ಭಾಗ್ಯವನೊಲ್ಲೆ ಎಂದೆಂದಿಗೂ | ವಿಜಯರಾಯ ||೨|| ತುಂಬಿದ ಭಂಡಾರ ಸಂಪತ್ತು ಯೆನಗಿಂದು ವಿಜಯರಾಯ| ಹಂಬಲಿಸುತ ಬಲು ಸಂಭ್ರಮದಿರುತಿಪ್ಪೆ | ವಿಜಯರಾಯ| ಸಂಬಳಕರ ಶಿಷ್ಯ ನಿನಗಲ್ಲ ಕೇಳಯ್ಯ ವಿಜಯರಾಯ || ಬಿಂಬಗಾರು ( ಶ್ರೀ ) ವೆಂಕಟ ವಿಠಲನ ತೋರಯ್ಯಾ ವಿಜಯರಾಯ ||೩||

## ಲಕ್ಷ್ಮೀಪತಿ ವಿಠಲಕೃತ

ಪದ ೫೪ ರಾಗ ದೇಶಿ(?) ಅಟ್ಟತಾಳ

ಜಯವಾಯಿತೆನಗೆ ಯಿಂದು ಸಂಪದರೂಪದಿ ||ಪಲ್ಲ|| ಜಯವಾಯಿತೆನಗೆ ವಿಜಯದಾಸನವರ್ಯರ | ದಯ ಸುಧಾಂಬುಧಿಯು ಆಶ್ರಯವ ದೊರಕಿ ಮುದ || ಉಪಪಲ್ಲ || ಹರಿದಾಸಸ್ಥಾನ ವಾರಣಾಶಿ ಪ್ರಯಾಗ ಗಯಾ | ಕುರುಕ್ಷೇತ್ರ ಮಿಗಿಲು ಯೆನಿಸಿ ಸಿರಿಹರಿ ತಾನೊಲಿದು | ಸಂತತ ಮುಕ್ತಾದ ಪರಿವಾರ ದೇವಕ್ಕಳು ಹಗಲು ಇರಳು || (ದುಡುಕು) ನಿರತ ರಾಗಿವರಂದ ಸೇವೆಯು | ತರತಮದಿ ಕೈಕೊಂಡು ಅನುದಿನ | ದಯ ಚರಣಕೆ ಅರ್ಪಿಸುತ ಸುಖ | ಭರಿತರಾಗಿಹರಂಬೊದರಿದು ||೧|| ವಿರಚಿತ ನಾಮದಿಂದಾ ಮುಖಕಮಲದಿ ಪೇಳ್ದ | ಸಕಲಶಾಸ್ತ್ರಾರ್ಥಗಳು ಪ್ರಾಕೃತವೆಂಬ | ಅಕಟ ಮನುಜರ್ಗೆ ಕೇಳು || ತಪ್ಪದು ನಿರಯಾ | ಧಿಕರು ಅವರ ಜನುಮಗಳು ಮುನ್ನಿನಿಗಳು || (ದುಡುಕು) ಲಕುಮಿಪತಿ ಪಸ್ತ

ಮಹಿಮೆಗಳನು | ಪ್ರಕಟಿಸುತ ಇಳಿಯೊಳಗೆ ಮೋದದಿ | ಭಕುತಿಯಿಂದಲಿ ಪಾಡಿ ಪೊಗಳುತ । ಅಕುಟಿಲರು ಯೆನಿಸುವದು ಕಂಡು ||೩|| ಜಿತವಾಗಿ ವರ ಸೇವೆ ಪ್ರತಿದಿನಮಾಡಿ | ಶೇರುತಿವಂತರಾಗುವರು | ಬಹುಕಾಲ ಶ್ರೀ | ಮಂತರಾಗಿ ಬಾಳುವರು ಸತಿಸುತರಿಂದ | ಅತಿಶಯರೆನಿಸುವರು ನಂಬಿದ ನರರು || (ದುಡಕೆ.) ಇತರ ಕಹಂಬಲಿಸದಲೆ ಲಕ್ಷ್ಮೀ | ಪತಿ ವಿಠಲನ ಪಾದಾಬ್ಜ ಯುಗಳವ | ರತರೆನಿಸಿ ದುರ್ಮತಿ ಕಳೆದು ಸು| ಪಥನ ಸೇರುವ ರಿಂದು ಮನಕೆ ||೪||

## ಶ್ರೀಶ ಗೋಪಾಲ ವಿಠಲ ಕೃತ

ಪದ ೫೫ ರಾಗ ರೇಗುಪ್ತಿ ತ್ರಿಪುಡಿ

ಕರದು ಕೈಪಿಡಿದೆನ್ನ ವಿಜಯರಾಯ | ಗರುವರ ದಯಾಸಂಪನ್ನ | ಗುರವೆ ನಿನ್ನಯ ಚರಣ ಸರಸಿಜ | ಕೆರಗಿ ಬಿನ್ನೈಸುವೆ ಕರುಣಿಸುವುದು | ಸ್ಮರಭವಾಂಬುಧಿ ತ್ವರದಿ ದಾಟಿಸಿ | ಹರಿಯ ಚರಣವ ತೋರಿ ಭವದಲಿ |ಪ| ಸಂಚರಿಸಿದ ಯಾತ್ರದಿ ಪಾವನ ವೃಂದ | ಬಂದು ಪ್ರೀಪ್ರದ ಭರದಿ | ಆಂದಾದಿವರ ಸ್ತೋತ್ರ ನಂದು ಕೇಳಲು ಇಹದಿ | ಕುಂದದ ಪ್ರಮೋದದ ಪ್ರೇಮದ ಸ್ವರದಿಂದ | ಮಂದಿರದೊಳು ಆನಂದದಿಂದ ಕುಳಿತು ಒಂದೊಂದು ವರ್ಣಗಳಿಂದ | ಓಂ ವಿಜಯ ಎಂದು | ಅಂದ ಮಾತುರದಲಿಂದ ಯಿಂದಿರೆಯಿಂದ || ಮಂದ ಜಾಲನ ನಂದಿವಾಹನ ಪು | ರಂದರಾದ್ಯಮರೇಂದ್ರ ವಂದಿತ | ಸಿಂಧು ಶಯನ ಮುಕುಂದ ಪರಮಾ | ನಂದ ಕಂದನರುಯೆಂದು ನುಡಿದೆ ||೧|| ಮಂಡಲದೊಳಗೆಲ್ಲ ವಿಜಯರಾಯರ ಪನ | ಪುಂಡರೀಕನ ಭಜಿಸಿ ತೊಂಡರಾ ಪಾದಾಬ್ಜವಲ್ಲಿ| ಬಂಡುಣಿಗನಾ ನೋಡಿ ಪುಂಡರೀಕಾಕ್ಷ ಜಿಯಾ | ಬ್ರಹ್ಮಾಂಡ ದೊಡೆಯ ತೋರ್ದ | ಮುಂಡೆ ಬಾಗುವೆ ನಿನಗೆ ಪೂರ್ವದಿ ಸುಜನ | ಥಂಡ ಪಾಲಿಸಿದವಗೆ ಯೆನ್ನಯ ಜೋಡ || ಖಂಡ್ರಿಸುವದೊ ನೀ ಬ್ಯಾಗ ಅಂಡಲೆವೆ ನಿನಗೆ | ಕಂಡ ಜನರನ ಕೊಂಡಾಡಿ ಮನ ಬೆಂಡಾಯಿತು ಕೇಳು | ಕ್ಯಾಂಡಿ ತೊತ್ತು | ಚಂಡ ದುರ್ಮತಿ|ಷಂಡ ತನುಕೆ ಮಾರ್ತಾಂಡನೆನಿಸದ |ದಖಂಡ ಮಹಿಮನೆ|೨| ಅಪಾರ ಜನುಮದಿಂದ ಆರ್ಜನ ಮಾಡಿದ | ಪಾಪ ನಿವಹಗಳಿಂದ ತಾಪ

ನಿವಹಗಳಿಂದ ತಾಪ ಬಡುತ ಭವ | ಕೂಪಾರವೊಳು ಬಿದ್ದು ದ್ವೀಪಾ ಕಾಣ ದೆ ನಾ ನಿ | ವ್ಯಾಪಾರ ದವನಾಗಿ ಈ ಪರಿಯಲಿ ನಾ ನಿನ್ನ ಮೊರೆಯಿಡುವೆನೆ | ಕೋಪ ಮಾಡದೆ ಪಾವನ್ನ ಮಾರ್ಗವ ತೋರೆ | ಲೇಪವಾಗುವು ಯೇ | ಘನ್ನ ದೋಷಗಳಿನ್ನ ವ್ಯಾಪಿಸಿದ ಪಾಪಗಳ ನೋಡಿಸಿ ತಾಪ ಆಲಾಪಗಳ್ | ಲೋಪ ಗೈಸುತ ಆಪದ್ಬಾಂಧವನಾದ ಶ್ರೀಶ ಗೋಪಾಲ ವಿಠಲನ ಮನದಿ ತೋರೆನ್ನ ||೩||

ಪದ ೫೬ ರಾಗ ಆರಭಿ ಆದಿ ತಾಳ

ದಾಸರಾಯ ಎನ್ನ ಸಲಹೊ ವಿಜಯಾ | ದಾಸಯು ಘನ್ನ ವಾಸುದೇವನ ನಿಜ ದಾಸರ | ದಾಸರ ದಾಸ್ಯವನಿತ್ತೆನ್ನ ಪೋಷಿಸು ಅನುದಿನ ||ಪ|| ವೇದಶಾಸ್ತ್ರಗಳರಿಯೆ ಗ್ರಂಥಗಳನು | ವೋದಿ ಬರೆಯಲರಿಯೆ | ವೋದ ತೀರ್ಥರ ಮತ ಬೋಧಿಪ ಸುಜನರ | ಪಾದದಿ ಭಕುತಿಯ ನೀ ದಯಪಾಲಿಸೊ ||೧|| ಜಪ ತಪಗಳನಳಯೆ ಸುಜನರ ಸ| ತ್ಕೃಪೆಯ ಪಡೆಯಲರಿಯೆ ಕಪಟ ರಹಿತರಾಗಿ ತಪಮಾಳ್ಪದಾಸರ | ಕೃಪೆಯಿಂದಲೆನಗೆ ಸುಪಥ ತೋರಿಸೋ||೨|| ಯತಿ ಪ್ರಾಸಗಳನರಿಯೆ ಶ್ರೀಹರಿಯ | ಸ್ತುತಿಸಿಪ್ಪೊಗಳಲರಿಯೆ || ಪ್ರತಿದಿನ ಶ್ರೀಶ ಗೋಪಾಲ ವಿಠಲನ ಪ ದೃತಿಯನೆ ಕರುಣಿಸು ಕ್ಷಿತಿ ಸುರ ವಂದ್ಯನೆ ||೩||

# ಶ್ರೀ ವಿಜಯದಾಸರ ಆತ್ಮಾನುಭವ ಕಥನ ಶ್ರೀಹರಿ ಪ್ರಾರ್ಥನೆ

## ಕೆಲವು ಐತಿಹಾಸಿಕ ಪದಗಳು

ಪದ ೫೭ ರಾಗ ಸೌರಾಷ್ಟ್ರ ಅಟ್ಟತಾಳ

ನಿನ್ನ ಪ್ರೊಲಿಮೆಯಿಂದ ನಿಖಿಳ ಜನರು ಬಂದು | ಮನ್ನಿಸುವರೊ ಮಾಧರಾಯಾ | ಎನ್ನ ಪುಣ್ಯಗಳಿಂದ ಈ ಬಗೆ ಉಂಟೇನೊ ನಿನ್ನದೆ ಸರ್ವ ಸಂಪತ್ತು ||ಪ|| ಜೀರ್ಣ ಮಲಿನ ವಸ್ತ್ರ ಕಾಣದ ಮನುಜಂಗೆ | ಊರ್ಣ ಸುವಿಚಿತ್ರವಸನಾ || ವರ್ಣವರ್ಣದಿಂದ ಬರುವದೇನೊ ಸಂಪೂರ್ಣ ಗುಣಾರ್ಣವದೇವ ||೧|| ಸಂಜೆತನಕ ಇದ್ದು ಸಣ್ಣ ಸವಟತುಂಬ | ಗಂಜಿ ಕಾಣದಲೆ ಬಳಲಿದೆನೊ || ವ್ಯಂಜನ ನಾನಾ ರಸಿರಸಾಯನಂಗಳು | ಭುಂಜಿ

ಸುಗಮು ಮುಕ್ತಿಗೆ ||೩|| ಒಬ್ಬಾಹೆಂಗಸಿಗೆ ಹೊಟ್ಟೆಗೆ ಹಾಕುವದಕಿನ್ನು| ತಬ್ಬಿಬ್ಬುಗೊಂಡೆಯೊ ಅಂದು || ಸಿಬ್ಬೆರದಲಿ ಇಂದು ಸಬಾರಕೂಡಿನ್ನು| ಹಬ್ಬ ಉಂಬುವಾವೇನೊ ಹರಿಯು || ೩ || ಮನೆ ಮನೆ ತಿರಪಾರಿ ಕಾಸು ಪುಟ್ಟದೆ | ನಮ್ಮಸೆ ಚಾಲ್ವುದು ಬಾಗಿದೆನೊ || ಹಣ ಹೊನ್ನುದ್ರವ್ಯಂಗ ಳೆಲ್ಲಿಂವೆಲ್ಲಿ ತಾನೆ | ತನಗೆ ಪ್ರಾಪ್ತಿ ನೋಡೋ ಜೀಯಾ || ೪|| ನೀ ಜೋಚ್ಚ್ ತಿಳಿಯದೆ ಸರ್ವರಾಚರಣಕ್ಕೆ | ಚಾಚುನೆನೋ ಸಲಹಸ್ತ ಗಳಾ || ಯೋಚಿಸಿ ನೋಡಲು ಸೋಜಿಗವೀಗಿದೆ | ವಾಚಕ್ಕೆ ತಿಲುಕದಾ ಹರಿಯೆ ||೫|| ಮುಧ್ಯಾಹ್ನ ಕಾಲಕೆ ಅಧಿತಿ ತುತ್ತನ್ನವ | ಮೆದ್ದೆನೆಂದರೆ ಈಯಾಗಾಣೆ || ಈ ದ್ವರಿಯೊಳು ಸತ್ಪಾತ್ರರಿಗುಣಿಸುವಾ | ಪದ್ಧತಿ ನೋಡೊ ಧರ್ಮಾತ್ಮ || ಪ್ರೈಮೀಕಪವವೀ ಕೊಡುವಾವನೀಗೆ | ಲೌಕೀಕ ಐವಿಸುವ ಮಹಾಖ್ಯಾತಿ || ಪ್ರೇಮಸಗೊಲಿದ ಶ್ರೀ ವಿಜಯ ವಿಠಲ ನಿನ್ನ | ಪಾದವೆ ಸಾಕ್ಷಿ ಅನುಭವ ಪ್ರೊ ||೭||

ಶ್ರೀ ವಿಜಯದಾಸರಿಗೆ ಸ್ವಪ್ನದ್ವಾರಾ ವಾಸ ಕಾಶಿಯಲ್ಲಿ ಪುರಂದರ ದಾಸರ ರೂಪಿನಲ್ಲಿ ಶ್ರೀ ಅನುಗ್ರಹವಾದ ನಂತರ ಜನರು ನಾನಾ ಬಗೆ ಯಾಗಿ ದಾಸರನ್ನು ಮನ್ನಿಸಿ, ಆದರಿಸಿ ಭೋಜನ ಸಮಾರಂಭ ಮಾಡು ವಾಗ್ಗೆ ತಮ್ಮ ಹಿಂದಿನ ಕಷ್ಟಾನುಭವಗಳನ್ನು ಸ್ಮರಿಸಿ, ಹರಿಯೊಲುಮೆಯಾ ಗಲು ಜನರ ಮನ್ನಣೆ ಸಕಲಾಭಿಷ್ಟವೆಂದು ಎರಡು ಪದಗಳಿಂದ ಸ್ತೋತ್ರ ಮಾಡಿರುವರು. ನಿನ್ನ ಒಲುಮೆ ಮುಖ್ಯ! ಇಹದ ಸೌಖ್ಯವೇ ಬೇಡವೆಂದು ಪ್ರಾರ್ಥಿಸುವರು.

ಪದ ೫೭ ರಾಗ ಘಂಟಾರವ, ಅಟ್ಟತಾಳ

ನೀನೊಲಿದವರಿಹ ಸೌಖ್ಯವೆ | ರಂಗ | ನಾನೊಲ್ಲೆ ನಾನೊಲ್ಲೆ ಸರ್ವೇಶ | ಮಾನಸದಲಿ ನಿನ್ನ ನೆರೆನಂಬಿದಂಥ | ಮಾನವನ ಕೂಡ ಮಾನಿಸವಾಗಿಸ್ಸರ ||ಪಲ್ಲ|| ಷಡುರಸ ನಾನಾ ಸುಭೋಜನ | ಬಿಡಿಸಯ್ಯಾ ದಾನವ ಭಂಜನ | ಒಡಹೊಡನೆ ಮೊರೆ ಇಡುವೆನು ಕರುಣಿಸೊ | ಅಡಿ ಗಡಿಗಜ್ಞಾನ ಕೊಡದಂತೆ ಪ್ರತಿ ದಿನ ಒಡಲಿಗೋಸುಗ ಪೊಡಮಟ್ಟು ನಿ | ನ್ನಡಿಗಳಿಗೆ ನಮಿಸಿವೆನೆ ಕೇಳಿ | ನ್ನೊಡೆಯ ಧ್ಯಾನವ ಪಾಲಿಸಿ ಭವ |

ಬಿಡಿಯ ತಡಿಯುಂಬೆತ್ತಿಸೋಲ್ಪದು ||೧|| ಜನ ರಾಜರಿಂ [ಯ] ದ
ಮನ್ನಣೆ ದೇವಾ | ಎನಗೆ ಹತ್ತದು ಕಾಣೆ ನಿನ್ನಾಣೆ | ಮರ್ತ್ಯದೇವಾಚ
ಕಾಯದಲ್ಲಿನಿತು ಸಿದ್ಧವಾದೆ | ಅನುವಿಲ್ಲ ಯೋಚನೆ ಯಾತಕೆ ದೇವ ||
ಜನುಮದೊಳು ಸಾಧನವಿದಾಯಿತು | ಧನಕನಕ ವಾಹನಗಳಿಂದಲಿ |
ಘನಗತಿಗೆ ಪೊಂದಿದ ಒಂದಾದರು | ಗುಣವಿ ನಿನ್ನಾರ್ಚನೆ ಮಾಡ
ಲಿಲ್ಲ ||೨|| ಕಂಡ ಕಂಡಲ್ಲಿನ್ನಾ ತಿರುಗಿಸಿ | ದಂಡ ಧಂಡದಿಂದ ಮರುಗಿಸಿ|
ಮಂಡಲದೊಳು ನೀ ಚಂಡಕರ್ಮದೊಳಿಟ್ಟು | ಉಂಡ ಉಂಡದಕಲ್ಲಿ |
ದಂಡಿಸುವರು ಯೋನೊ || ತೊಂಡನಾಸ್ಕೃತನಕದಿಂದಲಿ | ಬಿಂದ ಮತಿ
ಯನು ಕೊಡದ ಒಲಿದು ಬಿಂದುಮುಕ್ತರ ಸಂಗವೀವುದು | ಗಂಡುಗಲಿ
ಸಿರಿ ವಿಜಯವಿಠಲಾ ||೩||

ಪದ ೭೫ ರಾಗ ಭೈರವಿ, ಅಟ್ಟತಾಳ

(ವಂದಿಸ್ಸಿಕೊಂಬುವೆ ಎಂದು ಮುದ್ದಾಡುವೆ ಎಂಬ ಧಾಟಿ)

ಎಂದೊಡನಾಡುವೆ ಎಂದರ್ಥ ಬಡುವೆ | ಎಂದಿಗೆ ದರ್ಶಿಸಿ
ಸಂತೋಷಬಡುವೆ ||ಪಲ್ಲ|| ಉತ್ಸವ ಮಂಟಪದೊಳಗೆ ಕುಳಿತು ಭಕ್ತವತ್ಸ
ಲನೆಂದು ನುತಿಸಿಕೊಂಬನ ಕೂಡ ||೧|| ಸಕಲ ಭೂಷಿತನಾಗಿ ಭಜಕರ
ಪೊರೆವನ || ನಿಕರ ಕ್ಕೈಯಿಂದ ಸ್ತುತಿಸಿಕೊಂಬನ ಕೂಡ ||೨|| ಶ್ರೀಪತಿ
ಷ್ಠಾನದ ಯಂಥನೆಂಬೋದ ಮಂತ್ರ | ಆ ಪುರೋಹಿತರಿಂದ ಕರೆಸಿ
ಕೊಂಬನ ಕೂಡ ||೩|| **ನಾಲ್ಕುತ್ತುಮೂರು ಪದಂಗಳು ಮಾಡಿಂದು|**
ಹೇಳಿದ ವೇದಾದ್ರಿ ಶಿಖರಾಕಾರನ ಕೂಡ ||೪|| ದಂಡಿಗೆ ಕರದಲ್ಲಿ
ಕೊಟ್ಟು ಅಪ್ಪಾತ ಕರ | ದಂಡಿಯಲ್ಲೀ ಇಟ್ಟ ಮಹಮಹಿಮನ ಕೂಡ||೫||
ಪಲ್ಲಕ್ಕಿ ಮರಿ ಪವಳಸುತ್ತಿ ನರ್ತಿಸೀ | ನಿಲ್ಲದೇ ಗುಡಿಪೊಕ್ಕ ನಿರಂಜನ
ಕೂಡ ||೬|| **ವಾರಶನಿ ಚತುರ್ದಸಿ ಕೃಷ್ಣ ಪುಷ್ಯದಿ | ಈ ರೀತಿಯಲಿ
ಕಂಡ ಇಂದಿರೇಶನ ಕೂಡ ||೭|| ರೌದ್ರಿ ಸಂವತ್ಸರ ಅರ್ಧರಾತ್ರಿ
ಯಲ್ಲಿ** | ಭದ್ರ ಮೂರುತಿಯಾದ ಭವಹರನ ಕೂಡ ||೮|| ಗುರು ಪುರಂದ
ರನ ಉಪದೇಶ ಬಲದಿಂದ | ಸಿರಿ ವಿಜಯ ವಿಠಲನ ಚರಣ ತಕ್ಕೈಸಿ ||೯||

ಶ್ರೀ ವಿಜಯದಾಸರಿಗೆ ಶ್ರೀ ವೆಂಕಟೇಶನು ಒಲಿದು ರೌದ್ರಿಸಂವತ್ಸ
ರದ ಪುಷ್ಯವದಿ ಚತುರ್ದಶಿ ಶನಿವಾರ ಅರ್ಧರಾತ್ರಿಯಲ್ಲಿ ಪ್ರತ್ಯಕ್ಷನಾಗಿ

೪೩ ಪದಗಳು ಮಾಡಲಿಕ್ಕೆ ಆಜ್ಞಾ ಇತ್ತ ಶ್ರೀ ವೆಂಕಟೇಶನನ್ನು ಪುನಃ ನಾನೆಂದು ನೋಡಿ ಅಪ್ಪಿಕೊಳ್ಳುವೆನೆಂದು ಆರ್ತಪ್ರಾರ್ಥನೆ.

ಪದ ೬೦ ರಾಗ ಶಂಕರಾಭರಣ, ಅಟ್ಟತಾಳ

ನೋಡಿದೆ ನಾ ನೋಡಿದೆ ಮೂಡಲಗಿರಿಯ ವಾಸನ ಯಾತ್ರೆಯ ಮಾಡಿದೆ ನಾ ಮಾಡಿದೆ ।। ಪಲ್ಲ ।। ಬೆಟ್ಟವ ಕಂಡೆನು ಸೌಪಾನಂಗಳು ನಿಟ್ಟುಸಿರಿಕ್ಕದೆ ಏರಿದೇ ।। ಕಟ್ಟಕಡಿಯಣ ಗೋಪುರ ಶಿಖರ । ದಿಟ್ಟಿಸಿ ಕಣ್ಣಲಿ ನೋಡಿದೆ ।। ೧ ।। ಈ ಸಮಸ್ತರ ಗುರುವಾದ ಭಾರತೀ ಈಶನ ಪಾದಕ್ಕೆ ಎರಗಿದೆ ।। ಕ್ಲೇಶವ ಕಳೆದು ಎದುರಾಗಿ ಪೊಳೆವ । ಶ್ರೀಶನ ಮಹದ್ವಾರ ನೋಡಿದೆ ।। ೨ ।। ಬಲವಾಗಿ ಬಂದು ಸ್ವಾಮಿ ಪುಷ್ಕರಣಿ । ಒಳಗೆ ವರಹನ ನೋಡಿದೇ ।। ಜಲದಲಿ ಮಿಂದು ವೇಗದಲಿ ತಿರು ವೆಂ । ಗಳ ದೇವನ ನೋಡಸಾಗಿದೆ ।। ೩ ।। ಗುಡಿಯ ಪೊಕ್ಕೆನು ಗರುಡಗಂಭದ । ಪಡಗರವನು ನಾನೋಡಿದೆ ।। ಒಡನೆ ಪ್ರಾಣಾಚಾರದವರು । ಪಡದ ವರಗಳ ಕೇಳಿದೆ ।।೪।। ಮುನ್ನ ಅವಸರ ಮನಿಯೊಳಗೆ । ಅನ್ನಪೂರ್ಣಿಯ ನೋಡಿದೆ । ಚನ್ನಾಗಿ ಮಂಟಪದೊಳು ಶ್ರೀನಿವಾ । ಸನ್ನ ಮೂರುತಿಯ ನೋಡಿದೆ. ।।೫।। ತೊಟ್ಟಿಲ ತೀರ್ಥವಕೊಂಡು ಪ್ರಸಾದವ ಇಟ್ಟು ಮಾರುವದು ನೋಡಿದೆ । ಇಷ್ಟ ಭಕುತರು ಸನ್ಮುಖದಲಿ ಮುಟ್ಟಿ ಪಾಡುವದು ನೋಡಿದೆ ।।೬।। ದ್ವಾರ ಪಾಲಕರಿಗೆ ಸಾಷ್ಟಾಂಗದಲಿನನು । ಸ್ಕಾರವನು ಮಾಡಿದೆ ।। ಘೋರನೆ ಕಟಾಂಜನದ ಫಲ್ಗುಣಿ ಭಂ । ಗಾರ ಬಾಗಿಲವ ನೋಡಿದೆ ।।೭।। ಇಂದು ರವಿ ಶತಕೋಟಿ ತೇಜದ । ಇಂದಿರೇಶನ ಪಾದಾರವಿಂದ ಯುಗ್ಮವ ಪುಳಕೋತ್ಸಹದಿಂದ ಸಂದರುಶನನಾ ಮಾಡಿದೆ ।।೮।। ಇಟ್ಟಿದ್ದ ಅಂದಿಗೆ ಉಟ್ಟ ಪೀತಾಂಬರ ಕಟ್ಟಿದ್ದ ಧಟ್ಟಿ ವಡ್ಯಾಣ ।। ರುಲಿಟಿ ಕಂಕಣಾಕಾರದಲಾಯುಧ । ಇಟ್ಟ ಕಸ್ತೂರಿಯ ನೋಡಿದೆ ।।೯।। ಮಾಸದ ಪೂವು ಪೂಸಿದ ಗಂಧ । ಭೂಷಣ ನಾನಾ ಪರಿ ಪರಿ ವಿಧ।। ಏಸು ಬಗೆಯುಳ್ಳಿಟ್ಟು ಶ್ರೀನಿ । ವಾಸನ ಶೃಂಗಾರ ನೋಡಿದೆ ।।೧೦।। ಜಯ ಜಯ ಜಗದೀಶ ಜಗನ್ನಿವಾಸ । ಜಯ ಜಯ ೬ಕು ೨ ಪಂತೋಷ।।ಜಯ ಜಯ ವಿಜಯ ವಿನಾಶ ಜಯಜಯ ಸರ್ವೇಶ ಜಯವೆಂದು ಸ್ತೋತ್ರವ ಮಾಡಿದೆ ।।೧೧।। ಕೇಸಕ್ಕಿ ದದ್ಯೋದನ

ಪರಮಾನ್ನ ದೋಶಿ ಬಿಸಿ ಬಿಸಿ ಮನೋಹರ ||ಲೇಸಾಗಿ ಚತುರ್ವಿಧ ಪ್ರಸಾದವನ್ನು ಈಸು ಅವಸರ ನೋಡಿದೆ||೨|| ಕರ್ಪೂರದಾರುತಿ ಒಪ್ಪದಿಂದಲಿ ತಂದು|ತಪ್ಪದೆ ಬೆಳಗೋದು ನೋಡಿದೆ || ರೆಪ್ಪೆಯ ಹಾಕದೆ ಮನದಣಿಯ ತಿ | ಮ್ಮಪ್ಪನ ವಿಗ್ರಹ ನೋಡಿದೆ ||೧೩|| ಹಿಮ ಋತು ಪ್ರಥಮ ಮಾಸದ ದಶಮಿ | ಹಿಮಕರವಾರ ದಿನದಲ್ಲಿ || ಕ್ರಮದಿಂದಲಿ ಪೋಗಿ ಬಿಂಬ ಮೂರುತಿಯ | ವಿಮಲ ಚಾರಿತ್ರ್ಯವ ನೋಡಿದೆ || ೧೪ || ಶತ ಅಪರಾಧವ ಮಾಡಲು ಕಳವು | ಗತಿಯು ನೀನೆ ಇಂದಿರಾ || ಪತಿ ವಿಜಯ ವಿಠಲ ಪುರಂದರದ ಸಂ | ಗತಿಯಲ್ಲಿ ಸತತ ಸಾಕಿದ ||೧೫||

ಈ ಪದವು ಐತಿಹಾಸಿಕವಾಗಿದೆ. ಮಾರ್ಗಶಿರ ಶು| ೧೦ ಚಂದ್ರವಾರದಲ್ಲಿ ಶ್ರೀ ವೆಂಕಟೇಶ ದರ್ಶನಮಾಡಿ ಬಿಂಬಮೂರ್ತಿಯ ಅತಿ ವಿಮಲ ಚಾರಿತ್ರ್ಯ ನೋಡಿದೆಂಬುದು ದೇವತೆಗಳ ಬಿಂಬೋಪಾಸನ ಕ್ರಮ ಹೇಳಲಾಗಿದೆ.

## ಶ್ರೀ ಗೋಪಾಲದಾಸರಿಗೆ ಅಂಕಿತ ಸ್ತೋತ್ರಗಳು

ಪದ ೬೧ ರಾಗ ಕಲ್ಯಾಣ ಝಂಪಿತಾಳ

ಗೋಪಾಲವಿಠ್ಠಲನಿನ್ನ ಪೂಜೆಮಾಡುವೆನೊ| ಕಾಪಾಡು ಈ ಮಾತನು| ಅಪಾರ ಜನುಮದಲಿ ಕೂಡಿದವನಮೇಲೆ|ನೀಪ್ರೀತಿಯನುಮಾಡಿ ನಿಜದಾಸ ರೊಳಗಿಡು ||ಪ|| ಶ್ರುತಿಶಾಸ್ತ್ರ ಪುರಾಣ ಮಿಕ್ಕಾದ ಗ್ರಂಥಗಳ | ಸತತ ಅಭ್ಯಾಸ ಮಾಡಿ ಮಿತಿಇಲ್ಲದಲೆ ತೀರ್ಥಯಾತ್ರೆ ದಾನ ನಾನಾ ವ್ರತಗಳನು ಬಿಡದೆ ಮಾಡಿ | ಮತಿಯಲ್ಲಿ ನಿಂದು ಮಹಾ ಸ್ತೋತ್ರಗಳ ಗೈದು| ಉನ್ನತ ತಪಸುಗಳ ಮಾಡಿ| ಹಿತ ಪುಣ್ಯದಿಂದದವಗೆ ಉಪದೇಶ ಮಾಡಿದೆನೊ| ಚ್ಯುತ ದೂರ ನಿನ್ನ ಕರುಣಾಸರಕೆ ಎಣೆಗಾಣೆ ||೧|| ಏನೊ ನಿನ್ನಲಿದ್ದ ನೇಮನಾ ಕರ್ತೃತ್ವ ಕಾನೇನು ಕೊಂಡಾಡುವೆ | ಜ್ಞಾನವೆ ಭಕುತಿಗೆಯಿತ್ತು ಯಥಾರ್ಥದಲಿ ಕ್ಷೋಣಿಯೊಳಗೆ ನಡಸುತ | ಮಾನವರೊಳಗಿತ್ತು ವಿಚಿತ್ರವನೆ ತೋರಿ | ಮೌಣಾಧನ್ಯನ ಮಾಡುವೆ | ಮಾಣದೆ ಈ ಪರಿ ಕೀರ್ತಿ ತುಂಬಿರಲಾಗಿ| ಧ್ಯಾನದಲಿ ಅಮರರಿಗೆ ಬೆಡಗುಗೊಳಿಸುವೆ ದೇವಾ ||೨|| ಅಂಕಿತವು ನಾನಿತ್ತೆ ನಿನ್ನ ಪ್ರೇರಣೆಯಿಂದ| ಕಿಂಕರಿಗೆ ಲೌಕಿಕವ| ಡೊಂಕ

ನಡತಿಯ ಬಿಡಿಸಿ ಜನುಮ ಜನುಮದಲಿದ್ದ ಪಂಕನಿಕರವ ತೊಲಗಿಸಿ। ಶಂಕೆ ಪುಟ್ಟದಂತೆ ಕಾವ್ಯಗಳ ಪೇಳಿಪದು । ಸಂಕಟಗಳಟ್ಟಿದಾಗೆ ವೆಂಕಟ ಕೃಷ್ಣನು ನೀನೆ ವಿಜಯ ವಿಠಲ ಇಂದು ಅಂಕುರವ ಫಲಿಸಿಫಲಪ್ರಾಪ್ತಿ ಯಾಗಲೊ ॥೩॥

## ಶ್ರೀ ವೇಣುಗೋಪಾಲದಾಸನಿಗೆ ಅಂಕಿತ ಪ್ರದಾನ

ಪದ ೬೨ ರಾಗ ಕಲ್ಯಾಣ ಝಂಪಿ ತಾಳ

ವೇಣು ಗೋಪಾಲ ವಿಠ್ಠಲರೇಯಾ । ನಿನ್ನ ಪದರೇಣು ನಂಬಿದ ಮಾನವಾ । ಏನು ಅರಿಯದಲಿಪ್ಪ ನೀನೊಲಿದು ಕರುಣದಲಿ ಜ್ಞಾನಭಕುತಿಯ ಕೊಡುವದು ಸ್ವಾಮಿ ॥ಪ॥ ಪರನೈವ ನೀನೆಂಬ ಮೂಢಕ್ತ್ವತನದಲ್ಲಿ । ಪರಿಪೂರ್ಣವಾಗಿನಿರುತಾ ನೆರೆನಂಬಿಪೆನು । ನಾನಾ ಪ್ರಕಾರದಲಿ। ಸ್ಮರಣೆ ಮಾಡುತ ಮನದಲಿ । ತರತಮ್ಯ ಭಾವದಲಿ ಮಾರ್ಗವನೆ ತೋರಿದಿ । ಸ್ಥಿರಮಾಡು ಇವನ ಕೀರ್ತಿ । ಕರುಣಾಕರನೆ ನಿನ್ನ ಮೊರೆಹೊಕ್ಕ ಶರಣನ್ನ ಕರಪಿಡಿದು ಪಾಲಿಸುವದು ಸ್ವಾಮಿ ॥೧॥ ಲೌಕಿಕವೆಲ್ಲಿವಗೆ ವೈದೀಕ ವೆಂದೆನಿಸಿ ಸಾಕುವದು ಸಾಕಾರನೆ । ನೂಕು ದುರುಳರಿಂದ ಬಂದ ವಿಪತ್ತುಗಳ । ತಾಕಗೊಡದಂತೆ ವೇಗ ಬೇಕು ಬೇಕೆಂಪೆನುತ ಸ್ತೋಗಳುವನಿಗೆ ಶುಭಾ । ವಾಕು ನೇಮಿಸು ಸಂತತ । ನಾಕ ಜನ ಬಲನಾಗಿ ರಕ್ಷಿಸಲಿ ಸುರತರುವೆ । ಶ್ರೀಕಾಂತ ನಿನ್ನಿಂದಲಿ ಸ್ವಾಮಿ ॥೨॥ ಓರ್ವನ ಪೆಸರುಗೊಂಡು ಪೇಳಲೀತಕೆ ಇನ್ನು । ನರ್ವದನು ನಿಧದಲಿ ಊರ್ವಿಯೊಳಗೆಯಿಟ್ಟು ಉದ್ಧರಿಸುಬುರ.ಕಾಲಸಿವಾರ್ಜನನದ ಮಾಡಿ । ಸರ್ವರ ಗೋಪುಗ ನಾನು ತುತಿಸಿಯೋಗ್ಯರಿಗೆ । ಸರ್ವದಾ ಕೃಪೆಮಾಡೆಂದೆ । ಸರ್ವ ರಾಧಾರಿಸಿರಿ ವಿಜಯ ವಿಠ್ಠಲ ನಿನ್ನ । ಶರ್ವ ತುತಿಸಿ ಕಾಣ ನಾನೊಬ್ಬ ಪೊಗಳುವೆನೆ ॥೩॥

## ಮೋಹನ ವಿಠ್ಠಲರ ವಿ॥ ಪ್ರಾರ್ಥನೆ

ಪದ ೬೩ ಶ್ರೀ ರಾಗ ಅಟ ತಾಳ

ಇವನ ಪಾಲಿಸಿದರೆ ನಿನಗೆ ಪುಣ್ಯ । ಅವನಿಯೊಳಗೆಂದೆಂದಿಗು ನಾನೆ ಧನ್ಯ । ಪ। ನಟ್ಟ ಮುಳ್ಳು ಕಿತ್ತಿ ಬಿಟ್ಟಂತೆ ಮಾಡೊ । ಘಟ್ಟ್ಯಾಗಿ ಭಕುತನ್ನ

ಕಾಪಾಡೊ ||೧|| ಸಾಧನ ಪ್ರಾಣಿಗಳಿರಬೇಕೋ | ಆದರದಿಂದ ಕೇಳಿನ್ನ ವಾಕು||೨||ಭಜಿಪರ ಭಾಗ್ಯೋದಯ ಸಿಧಿಯೆ| ವಿಜಯ ವಿಠಲ ಕೇಳಿನ್ನ ಧೊರಿಯೆ ||೩||

ಶ್ರೀ ಮೋಹನರಾಯರು ಕೂಸಿರುವಾಗ್ಗೆ ಮೈ ಎಲ್ಲಾ ವ್ರಣವಾಗಿದ್ದ ಕೂಸನ್ನು ಸ್ವೀಕರಿಸಿ ಚಕ್ರ ತೀರ್ಥದಲ್ಲಿ ತೊಳೆದು ಅಮೃತ ಹಸ್ತದಿಂದ ಅವರ ಮೈಮೇಲೆ ಕೈಯಾಡಿಸಲು ವ್ರಣ ನಿವಾರಣ ಈಶಪ್ರಾರ್ಥನೆ.

## ಶ್ರೀ ಮೋಹನದಾಸರಿಗೆ ಅಂಕಿತಪ್ರದಾನ ಪ್ರಾರ್ಥನಾ

ಪದ ೬೪ ರಾಗ ಕಲ್ಯಾಣ ಝಂಪೆತಾಳ

ಪಾಹಿ ಗೋಪನ ವಿಠಲ ಪರಮ ಕರುಣಾ ಜಲಧಿ | ಮಹದಾದಿ ದೇವ ಸಂಸ್ತು | ಮೋಹ ಪಾಶವ ಬಿಡಿಸಿ ನಂಬಿದವನಿಗೆ ಒಲಿದು ರಹಸ್ಯ ಮತಿ ಕೊಡುವುದು ಸ್ವಾಮಿ ||ಪ|| ನೀನಿತ್ತ ಮಾತುಗಳು ಪೊಳ್ಳಾಗ ಬಲ್ಲವೆ ಅನಂತ ಜನುನುವಾಗೆ ಆನೊಬ್ಬ ನಿನ್ನದಿರು ಕೀರ್ತಿಸುವನರನೆಂದು ಜ್ಞಾನಿಗಳಿಗರುದಾಗಿದೆ | ವಿಷಯ್ಯಾ ನಿನ್ನಂಘ್ರಿ ಭಜಿಸದಿಪ್ಪ | ಮಾನವನ ಕ್ಲೇಶಕೆಣಿಯೆ | ಆನಂದನಂದನೆ ತ್ವಣವ ಪಿಡಿದು ರತು | ನನನು ಮಾಡಿ ತೋರುವ ಸ್ವಾಮಿ ||೧|| ನಿನ್ನಾಧೀನ ಕರ್ಮ ಸ್ವಭಾವ ಮೊದಲಾಗಿ | ಅನ್ಯಥಾ ಯಲ್ಲಿ ಕಾಣೆ ಮನ್ನಿಪ್ಪದು ಮುದದಿಂದ | ಮೋದವಲ್ಲಿ ಎನ್ನ ಬಿನ್ನಪವನ್ನು ಬಿಂದೆನಿಸದೆ | ಅನ್ಯರಿದರೊಳಗಿಲ್ಲ ಎನ್ನ ಪೊಂದಿದವನು | ನಿನ್ನ ದಾಸನ ದಾಸರು | ಉನ್ನತ ಗುಣವಿತ್ತು ಉರುಕಾಲ ಒಲಿದು ಪ್ರಸನ್ನ ನಾಗೋಪಾಪನ್ನ ರನ್ನಾ ||೨|| ನರನಿಗೆ ನಾಥನಾ ಸತ್ಕೀರ್ತ್ತನೆ ಯೆಂದು | ಪರಮೇಷ್ಠಿ ಒಲಿಪ ನಾಹಕೊ । ಪರಿಪರಿಬಗೆಯಿಂದ ಕರ್ಮಗಳ ಮಾಡಿದರೆ | ನಿರಿತ ಜಿನ್ಮ್ಯಗವಾಗವು | ಪಿರವಾಗಿ ಬೇಡಿದೆನೊ ವಿಜಯ ವಿಠ್ಠಲ ನಿನ್ನ ಶರಣರೊಳಗಿಡು ಕಾಪಾಡು | ಸ್ಥಿರವಾಗಿ ಅಂಕಿತವ ಪ್ರೇರಿಸಿ ಕೊಡಿಸಿದ್ದು ಧರೆಯೊಳಗೆ ಪರಿಪೂರ್ಣವಾಗಿ ಇರಲಿ ಸ್ವಾಮಿ ||೩||

## ಮೋಹನದಾಸರಿಗೆ ಆಶೀರ್ವದಿಸಿದ್ದು

ಪದ ೬೫ ರಾಗ ಕಾಂಬೋದಿ ಝಂಪಿತಾಳ

ಚಿರಜೀವಿ ಯಾಗೆಲೋ ಚಿನ್ನ ನೀ ನೂ| ಪರಮ ಭಾಗವತರ ಪದ ಧೂಳಿಧರಿಸುತಲಿ||ಪ||ಬೆರಿಯಾಬ್ಯಾಡಾ ಹರಿಯ ಮರೆಯಬಾಡೆಂದೆಂದು|

ತಿರಿಯ ಬ್ಯಾಡಾ ಖಳರ ಮನೆಗೆ ಪೋಗಿ || ಒರೆಯ ಬ್ಯಾಡನ್ಯರಿಗೆ ತತ್ವೋಪದೇಶಮಾಡಿದ್ದು| ಬೆರೆಯ ಬ್ಯಾಡಾ ಅನ್ಯಸತಿಯು ಸ್ವಪ್ನದಲಿ ||೧|| ಸಾಲ ಮಾಡಲಿ ಬ್ಯಾಡ ಸಾಲದೆನ್ನಲಿಬ್ಯಾಡಾ | ನಾಳಿಗೆ ಹ್ಯಾಗೆಂಬೊ ಚಿಂತೆ ಬ್ಯಾಡಾ|| ಖೂಳ ಜನರೊಡನಾಡಿ | ಕಂಗೆಡಲು ಬೇಡಾ| ಬಾಳುವರ ಸಂಗಡ ಬಾಳಿಲವೊ ಬಾಲಾ||೨|| ಲೋಕ ವಾರ್ತೆಯ ನಿನ್ನ ಕಿವಿ ಕೇಳಿಸಲಿ ಬ್ಯಾಡಾ | ಶ್ರೀಕಾಂತನೇಕ ಕೀರ್ತಿಯ ಕೇಳದಿರಬೇಡಾ ಪಾಕವನುಮಾಡಿ ಏಕಾಂತದಲಿ ಉಣಬೇಡಾ| ಭೂಕಾಂತರನುಸರಿಸಿ ಬೆಸಗೊಳಲು ಬೇಡ||೩|| ಪಂಡಿತರು ಪಾಮರು ಆರಾದರೂ ನಿನ್ನನೆ ಕಂಡವರಿಗೆಲ್ಲ ಕೌತುಕ ತೋರಲಿ| ಹೆಂಡರು ಮಕ್ಕಳು ಅಳಿಯ ಸೊಸೆ ಮಮೆಕ್ಕಳು| ಉಂಡುಟ್ಟು ದ್ವಿಜರು ಸಹ ಗಂಡುಗಲಿಯಲಿಯುತಲಿರು ||೪|| ಮಂದ ಮತಿಗಳಕೂಡ ಮಾತನಾಡದಿರು ಹರಿ | ನಿಂದಕರ ಕಣ್ಣೆತ್ತಿ ನೋಡಬ್ಯಾಡಾ | ಇಂದಿರೆ ಯರಸ ನಮ್ಮ ವಿಜಯ ವಿಠಲನ್ನ ಪಾದ | ದ್ವಂದ ಮಸ್ತಕ ತನಕ ನೋಡ ದಿರಬೇಡ ||೫||

ಪದ ೬೬ ರಾಗ ಕಾಂಬೋದಿ ಝಂಪಿತಾಳ

ಏನು ಕಾರಣ ಮತಿಯಿಲ್ಲ ಮನವೆ ಇಂಥ | ಹೀನತಿಯ ಮಾಡಿ ಪರರವಗುಣಗಳಿಸದಿರು || ಪ|| ಅವನ ಗೊಡಿವೆ ಯಾಕೊ ಅವನಾರೊ | ನೀ ನ್ಯಾರೊ | ಅವನ ಪಾಪಕೆ ನೀನು ಭಾಗಾದಿಯೆ | ಅವನೆ ಉತ್ತಮ ನಾದರವನೆ ಬದುಕಿದ ಕಾಣೊ | ಅವ ಪುಣ್ಯ ಮಾಡಿದರೆ ಅವನ ಕುಲ ಉದ್ಧಾರ ||೧|| ನಿನಗೆ ಕೊಡುವವರೊಳಗೆ ಬೇಡ ಬಂದವನಲ್ಲ| ನಿನಗೆ ಅವನಿಗೆ ಏನು ಸಂಬಂಧವೊ | ಮನೆ ಒಡವಿ ಪಾತ್ರೆಗಳು ಹಂಚಿಕೊಂಬವ ನಲ್ಲ | ದಿನ ದಿನಕೆ ಕ್ಲೇಶವನು ಬೆಳೆಸಿ ಕೊಂಬುವನಲ್ಲ ||೨|| ನಿನ್ನ ಗತಿ ಮಾರ್ಗಕ್ಕೆ ಅವನಡ್ಡಬಾಹನೆ | ನಿನ್ನಿಂದ ಪರಲೋಕ ಅವನಿಗಹದೆ | ನಿನ್ನಿಂದ ನೀ ತಿಳಿಯೋ ವಿಜಯ ವಿಠಲ ನಂಘ್ರಿ | ಸನ್ನುತಿಸಿ ಭವರೋಗ ನೀಗಗಳಿಯೊ ||೩||

ಈ ಪದವು ಐತಿಹಾಸಿಕವಾಗಿದೆ. ಭಕ್ತನ ಭವರೋಗ ಕಳೆದದ್ದು.

ಪದ ೬೭ ರಾಗ ಕಾಂಬೋದಿ ಝಂಪಿ ತಾಳ

ಶ್ರೀ ವಿಜಯ ದಾಸರು ತಮ್ಮ ಶಿಷ್ಯರಾದ ಶೇಷಗಿರಿದಾಸರು ತಮ್ಮ ಮುಂದೆ ಯಾತ್ರಾಪಾತಲು ೧೨ ಪದಗಳಿಂದ ಶ್ರೀಹರಿಯನ್ನು ಪ್ರಾರ್ಥಿಸಿದ್ದು

ಹೋದ್ಯಾ ಶೇಷಗಿರಿದಾಸ ಸುಲಭಾ । ಹಾದಿಯನು ನೋಡ್ದಿ, ನನ್ನನ್ನ ಭವಾಬ್ಧಿಯೊಳಿಟ್ಟು ॥ಪ॥ ಸಲಹಿದೆನು ಸಾಕಿದೆನು ಕಾಲಕಾಲಕೆ ನೋಡಿ । ತಿಳಿಸಿದೆನು ತತ್ವಗಳು ನಿರುತ ಬಿಡದೆ ॥ ಬಳಿವಿಡಿದು ತಿರುಗಿ ಉಣಿಸಿದೆನು ಉಡಿಸಿದೆನು । ವೆಗ್ಗಳವಾಗಿ ನೋಡಿ ಸುಖಿಸಿದೆನು ಮಾತಾಡಿ ॥೧॥ ನಿನ್ನ ಮ್ಯಾಲಿನ ಕರುಣ ಕಮಲಾಕ್ಷ ವೇಗದಲಿ । ಯನ್ನ ಮ್ಯಾಲೆ ಇನ್ನು ಮಾಡಲಿಲ್ಲಾ । ಮುನ್ನೆ ಸಾಧನ ಪೂರ್ತಿ ನಿನಗಾಯಿತೇನೊ ಸಂ । ಪನ್ನ ಮತಿ ಉಳ್ಳವನೆ ಸಜ್ಜನ ಶಿರೋಮಣಿ ॥೨॥ ಧಿಕು ಎನ್ನ ಜನುಮ ನಿನ್ನಂಥ ಪ್ರಿಯನ ಬಿಟ್ಟು । ಅಕಟಕಟ ಭೂಮಿಯೊಳು ಬದುಕುವದೂ । ಸಕಲ ಲೋಕೇಶ ಸಿರಿ ವಿಜಯ ವಿಠ್ಠಲ ನಿನ್ನ ಭಕುತಿಗೆ ಮೆಚ್ಚಿ ತಡಮಾಡದಲೆ ಕರದೊಯ್ದ ॥೩॥

ಪದ ೬೮ ರಾಗ ಕಾಂಬೋದಿ ಝಂಪಿತಾಳ

ಧನ್ಯನೋ ಶೇಷಗಿರಿದಾಸ ನೀನೂ । ಪುಣ್ಯವಂತನು ಅಹುದೊ ಮನೊ ವಾಚದಲಿ ನಿತ್ಯ ॥ ॥ಪಲ್ಲ॥ ಮುಂಗ್ಯಯ ಮ್ಯಾಲಿನಾ ಗಿಳಿಹಾರಿ ಹೋದಂತೆ । ರಂಗ ಮಧ್ವನ ಸ್ಮರಣೆ ಮಾಡಿಕೊಳುತಾ ॥ ಮಂಗಳಾಂಗನಾಗಿ ಸ್ವರ್ಗಸ್ಥನಾದಿಕ್ಷಣ । ಭಂಗುರವೆಂಬ ಪ್ರಮಾಣ ಸಿದ್ಧಿಸಿತು ಗಡಾ ॥೧॥ ಸತ್ ಶಿಷ್ಯನೆಂದೆನಿಸಿ ಕೊಂಡಪಕೆ ಎನ್ನ । ಮನೋತ್ಸಹಾ ಮಾತ್ರ ಮಂದಾಗಲಿಲ್ಲಾ ವಸ್ತ್ರ ಕೇಳುಪಸ್ಥರ್ಗ ಕೂಡಿದ ನಾಭಿ । ತಕ್ಸಮಾನವಾಯಿತೊ ಇಂದಿನಾರಭ್ಯವೂ ॥೨॥ ಮಂದೇ ಪ್ರವಹಾದೊಳು ಈಸು ಬೀಳಲ್ಕು ಸುಳಿ । ಇಂದ ಹಿಂದಕೆ ಒಬ್ಬನಿಂದಂತೇವೆ ॥ ಇಂದು ಎನಗಾಯಿತೊ ಭೂಮಿಯೊಳಗೆ ಖಣಾನು । ಬಂಧ ಇಂತಿರಲಿಕ್ಕೆ ಯತ್ನವಬ್ಬರದಿಲ್ಲಾ ॥೩॥ ಫರಿಣಾಮಕೆ ನಿನಗೆ ಸಾನುಕೂಲವಾಗಿ । ಅನಿಲ ದೇವನು ಒಲಿದು ಹರಿಯ ಕೂಡ । ಪ್ರಣವ ಪೂರ್ವಕದಿಂದ ಪಂಚತ್ವ ಐದಿದೆ ಸಾ । ಧನ ಪೂರ್ತಿಕಾಲ ಎಳ್ಳನಿತು ಉಳದಿಪ್ಪುದೊ ॥೪॥ ವಿಧಿ ಸಂವತ್ಸರ ಭಾದ್ರಪದ

ಶುಕ್ಲದ ಭಾನು ! ಬಿದಿಗಿಯಲಿ ಪ್ರವರ ಗೌತುಮ ಸಂಗಮಾ ॥ ನಿಧಿಯಲಿ ವಿಜಯ ವಿಠ್ಠಲನಂಘ್ರಿಯುಗಳವನು । ಹೃದಯವಲಿ ಇಟ್ಟು । ದೇಹವ ತ್ಯಾಗಮಾಡ್ದೆ ॥೫॥

ಪದ ೬೯ ರಾಗ ಕಾಂಬೋದಿ, ಝಂಪಿತಾಳ

ಶೋಕಯಾತಕೆ ಮನವೆ ನಿನಗೆ ಇಂದೂ । ಈ ಕುಮಾರನು ನಿಜ ಗತಿಯ ಕೊಡಿಸುವನೇ ॥ಪಲ್ಲ॥ ಮೊದಲು ಜನುಮದಲಿ ಇವನಲ್ಲಿ ಋಣ ವನು ತಂದು । ಬದುಕಿದಾ ಕಾರಣದಿಂದ ನಿನ್ನಾ ॥ ಉದರದೊಳು ಉದು ಭವಿಸಿ ಋಣವ ತಿದ್ದಿಸಿಕೊಂಡ । ಇದಕ ಖೇದವಯಾಕೆ ಯದುಕುಲೇಶನ ನೆನಸು ॥೧॥ ಕಾಲಕ್ಕೆ ತಕ್ಕಷ್ಟು ಮಾಡಿಸುವ ಹರಿತಾನು। ಮೇಲುಕೀಳಾಗ ಗೊಡದಲೆ ನಿತ್ಯದೀ ॥ ಆಲೋಚನೆ ಸಲ್ಲ ಅವನಾರು ನೀನಾರು । ಕಾಲ ಮೃತ್ಯು ಒದಗೆ ನಿಲಿಸ ಬಲ್ಲವರಾರೂ ॥ ೨ ॥ ತೂಗುವ ತಕ್ಕಡಿ ನೋಡು ಎರಡು ಭಾಗವೆ ಸಮಾ । ಮಾಗವಲೆ ಪದಾರ್ಥ ಬಪ್ಪದೇನೊ ॥ ಯೋಗಿಗ ಳಿಗಾದರೂ ಇದು ತಪ್ಪ ಲರಿಯದೂ । ಶ್ರೀಗುರು ವಿಜಯ ವಿಠ್ಠಲನ ಭಕ್ತಿ ಯೊಳಿರೂ ॥೩॥

ಪದ ೭೦ ರಾಗ ಕಾಂಬೋದಿ, ಝಂಪಿತಾಳ

ಕ್ಲೇಶ ಮಾಡಲಿಬೇಡ ಮನವೆ ನೀನೂ । ದೇಶದೊಳಗೆ ಕೇಳು ಜ್ಞಾನಿಗಳ ಸಮ್ಮತಾ ॥ ಪಲ್ಲ ॥ ವಶಿಷ್ಠ ಮಹ ಋಷಿಗೆ ನೂರು ಮಂದ್ದಿ ಸುತರು । ಅಸಮ ಸಾಹಸರು ಬಲು ಶೀಲಜ್ಞರೂ। ಕುಶಲದಲಿ ಇರುತಿದು ಕಾಲ ಮೃತ್ಯುವಿನ ಕೈ । ವಶವಾಗಿ ಹೋದರದು ನೋಡು ದುಃಖವಬಿಡು ॥೧॥ ಕೃಷ್ಣ ಸೋದರ ಮಾವ ಮತ್ತೆ ಭೀಮಸೇನ। ಜೇಷ್ಠಪಿತನು ಪಾರ್ಥ ಪಡದ ಶೂರ ॥ ಇಷ್ಟು ಜನ ಇರಲಾಗಿ ಅಭಿಮನ್ಯು ದೇಹವನು । ಬಿಟ್ಟು ಪೋಗಲು ಒಬ್ಬರಾದರು ಉಳಹಿದರೆ॥೨॥ ಇಂಥವರಿಗೀತ್ಯರನು ನಿನಗಾವ ಸ್ವಾತಂತ್ರ ಸಂತೋಷವೆ ಬಡು ಧೈರ್ಯದಲ್ಲೀ ॥ ಕಂತುಜನಕಾ ನಮ್ಮ ವಿಜಯ ವಿಠ್ಠಲನಂಘ್ರಿ ಅಂತರಂಗದಲಿಡು ಮುಂದಿನಗತಿಯ ಬೇಡೂ॥೩॥

ಪದ ೭೧ ರಾಗ ಮಾರವ, ತ್ರಿವಿಡಿತಾಳ

ಚಿಂತೆ ಮಾಡುವದ್ಯಾಕೆ ಮನವೆ ನೀನೂ । ಪಿಂತೆ ನೆಸಗಿದ ಕರ್ಮ ಎಂದಿಗಾದರು ಬಿಡನು ॥ಪಲ್ಲ॥ ಮಗನಾರು ನೀನಾರು ಪೇಳೊ ಸಿದ್ಧಾ

ನಿಗಮಾರ್ಥಗಳಿಂದ ಸಜ್ಜನರ ಕೇಳೊ|ಉಗಿದು ಕಳಿ ಶೋಕವಗೋಳು |
ನಿತ್ಯ ನಗಧರನ ಭಕ್ತಿಲಿ ಸುಖವಲ್ಲಿ ಬಾಳೂ ।। ೧ || ಸಹನ ಶಕ್ತಿಯನ್ನು
ಮಾಡೂ ಬಿರಿದೆ ಸ್ನೇಹ ಮಾಡಿದರಿಂದ ಜ್ಞಾನಕ್ಕೆ ಕೇಡು| ತಾಹಾಃದುಸ್ಥಿ
ರವೆಂದು ನೋಡೊ ನೀನೂ ಮುಹಾ ಪದವಿಗೆ ವಂದೆ ಸುನ್ನಥನೆ ಬೇಡು ||
||೨|| ವಿರಕ್ತಿ ತೊಡು ತೊಡು ಬಿಡದೆ | ಎಂದು ಸಾರಿದೆ ಪೇಳಿ ಧರ್ಮವಲ್ಲಿ
ನುಡಿದೆ || ವಾರ ವಾರಂಕೆ ಹೀಗೆ ಕೆಡದೆ ಶ್ರೀ|ಗಾರ ಶ್ರಿವಿಜಯ ವಿಠ್ಠಲೆನ್ನು
ದುಃಖ ಬಡದೇ ||೩||

ಪದ ೭೨ ರಾಗ ಕಾಂಬೋದಿ ತಾಳ ಝಂಪೆ

ಶೋಕವಾಗುವದು ಯಾತಕೆ ಎಲಾ ಕಾಕುಲಾತಿ ಸಲ್ಲ ಕರುಣಾ
ಶುದ್ಧನಾಗು ||ಪಲ್ಲ|| ಜೀವಕ್ಕೆ ಏನಂಬೆ ಅನಂತ ಕಲ್ಪಕ್ಕೆ | ಜೀವ ನಿತ್ಯಾ
ಸುಖಿ ಎಲ್ಲಿದ್ದರೂ || ಸಾವೆ ಹುಟ್ಟೀ ಇಲ್ಲ ಸತತದಲಿ ಚರಿಸಿದರು | ಜೀವ
ಉಂಬುವದೆತ್ತ ಪ್ರಾಪ್ತವಾದಾ ಕ್ಲೇಶಾ ||೧|| ಶರೀರ ಕೆಂಬೆನೆ ಚೇತನಾ
ತಪ್ಪಿದರೆ ಇರುವದು ಜಡವಾಗಿ ಬಿದ್ದುಕೊಂಡು || ಹಿರಿದಾಗಿ ತಿಳಿವುದು
ಜಡಕೆ ಲೇಪನ ಉಂಟೆ | ಚರಾ ಚರದಲಿ ಇದೆ ಶಿದ್ಧವಾಗಿಪ್ಪದೂ ||೨||
ಪಾರ ನೋಡುವದು ಈ ಪರಿ ಜ್ಞಾನದಲಿನಲಿದು | ಸಾರಕಾಣಿಸದು
ಸಂಸಾರದೊಳಗೇ | ಮಾರಜನಕಾ ನಮ್ಮ ವಿಜಯ ವಿಠ್ಠಲ ಹರಿಯ |
ಸಾರದಲೆ ಅಭಿಮಾನ ಬಿಡದವಗೆ ಇದೆ ಉಂಟು ||೩||

ಪದ ೭೩ ರಾಗ ಕಾಂಬೋದಿ ಝಂಪಿತಾಳ

ನೀನೆ ಮಾಡಿದ ಲೀಲೆ ಬಲು ಸುಖಾವ್ರೊ | ಆನೇನು ದುಃಖವನು
ಬಡುವದಿಲ್ಲಾ ಜೀಯಾ || ಪಲ್ಲ || ತೋಟವನು ಮಾಡಿಸಿ ಅದರೊಳಗೆ
ವಂದು ಫಲ । ನಾಟಿಸಲು ಬೆಳದು ಫಲಪಕ್ವಾವಾಗೇ | ನೀಟಾದ ಫಲ
ವೆಂದು ಅರಸುಕ್ಕೋಯುತರಿಸಲು | ತೋಟಿನಗೇನು ದು:ಖ ಅರಸಿಗೇ
ನಯ್ಯಾ ||೧|| ನಿನ್ನ ಸಂಕಲ್ಪವೇ ಸಿದ್ಧವಾಗಿದೆ ಇದೆ | ಅನಂತ ವೇದ
ಗಳು ಪೊಗಳುತಿವಕೊ| ಪನ್ನಗಾಶಯನನೆ ನೀನು ಮಾಡಿದ ಕ್ಲಪ್ತ ಅನ್ನ್ಯ
ಥಾವಾಗುವದೆ ಅಜ ಭವಾದಿಗಳಿಗೆ||೨|| ಸುಖದು:ಖವೇ ಎರಡು ನಿನ್ನ ವಶ
ವಾಗಿದೆ। ಸಖನಾಗಿ ಸುಖ ಉಣಿಸಲು ಹಿಗ್ಗುವೇ || ದು:ಖ ತಂದಿತ್ತರೆ
ಅಳಲಿ ಬಳಲುವದ್ಯಾಕೆ। ಅಖಿಳೇಶ ನೀನಾವ ದಿತ್ತುದೆ ಬಲು ಲೇಸು||೩||

ನೀನೆ ಕಲ್ಪಿಸಿದದಕೆ ಸ್ಥಿರಿಸಲಾರದೆ ವೇಗ । ನಾನು ವೇಧಿರ್ಸಣ ಪೇಳಿದರಾ ಯಿತೆ ।। ಆನಂತಕೆ ಹಸ್ತು ಬರುವದೇ ಶಾಶ್ವಿತಃ। ಏನಾವರೇನು ನೀನಾಡಿದಾಟವೆ ಪಸ್ಮೃತ ।।೪।। ಪಶ್ಪಾತ್ರರಾ ನೋಡಿ ದಾನವಿತ್ತರೆ ಅವಗೆ । ಉತ್ತುಮಾ ಪದ ಉಂಟು ಪುಶಿಯುಲ್ಲವೂ ।। ಪಶ್ಪಾತ್ರವಿಂದಂದ ಪಾತಾಲ್ಯ ಧನವಿತ್ತೆ । ಉತ್ತುಮಾ ಗತಿ ನೀಯೊ ವಿಜಯ ವಿಠ್ಠಲ ಕರುಣಿ ।।೫।।

ಪದ ೭೪ ರಾಗ ಕಾಂಬೋದಿ ಝಂಪೆತಾಳ

ತಿಳಿದು ವಿಚಾರಿಸು ವಿಶ್ವದಲ್ಲಿ । ಹಲವು ಜೀವಿಗಳೊಂದೆ ಪ್ರಕಾರ ಚರಿಸುವದು।।ಪ।। ಇರುವು ನೊಣ ಪೋವರೆ ಏನಾವರು ಕ್ಲೇಶ । ಬರುವದೇ ಪ್ರತ್ಯಕ್ಷ ನೋಡಿದರೂ ।। ಭರದಿಂದ ಆಲಿಸು ದೇಹ ಮಾತುರಬ್ಯಾರೆ ಇರವದಲ್ಲದೆ ಒಳಗೆ ಚೇತನಾಡುವದೊಂದೆ ।।೧।। ಕೂಡಿಕೊಂಡವು ತನ್ನ ತಮ್ಮೊಳಗೆ ಭೂತಗಳು । ಆಡಲೇನದು ಪೂರ್ವದ ನಿರ್ಮಾಣಾ । ನಾಡೊಳಾಗಿದ್ದನಿತೆ ಸಮ್ಮಂಧವಲ್ಲವಲೆ। ಬೀಡು ತೋರದಾ ವ್ಯಾಲೆ ಬಿಂಕವೆತ್ತಣಡೊ ।।೨।। ಹರಿಮಾಯದಿಂದಲಿ ನಾನು ನನ್ನದು ಎಂಬ । ಗುರುವಿಕೆ ಪುಟ್ಟುವದು ಮೋಹ ಪೆಚ್ಚಿ । ನಿರಯದೋಳಿಳಿಯದೆ ವಿಜಯ ವಿಠ್ಠಲನ್ನ ಸ್ಮರಣೆಯಲಿ ಕುಣಿದಾಡು ಎಲ್ಲ ಸಮನಾ ನೋಡು ।।೩।।

ಪದ ೭೫ ರಾಗ ಕಾಂಬೋದಿ ಝಂಪೆತಾಳ

ನೀನೇನು ಮಾಡಲಾಪಿಯೋ ಲಕುಮೇಶಾ । ನಾನೀಗ ಪಡೆದದ್ದು ಉಣದಲೆ ಪೋಗುವದೆ।।ಪ।। ಲೋಕದೊಳಗೆ ನಿನ್ನ ಕೊಂಡಾಡಿಪ್ರತಿದಿನ ಏಕ ಭಕುತಿಲಿ ಸರ್ವೋತ್ತಮನಾವೆಂನು । ಏಕಾಂತ ಭಜಿಪ ಮನುಜಗಾದರು ಬರೆದ । ವಾಕುತಪ್ಪುವದೇನು ಅಜನು ನಿರ್ಮಿಸಿದಾ।।೧।। ಮುಂದೆ ಕೊಡುವಾ ಫಲಕೆ ಕರ್ತ ನೀ ನಲ್ಲದೆ।ಹಿಂದಣಿಂದಲಿ ಬರುವ ಕಾಲಾಖ್ಯಕೆ ವಂದು ಬಿಂದೂ ಮಾತ್ರ ತೊಲಗಿಪ ನಡತಿ ಕಾಣೆ। ಅಂದಲ್ಲಿ ಏನು ಫಲ ಎನ್ನ ಕರ್ಮಾವಷ್ಟೆ ।।೨।। ಇದ್ದದೊಂದೂ ಮರಿ ಅಡಗಾಣಿಸಿ ಬಂದು । ಹದ್ದು ತಾ ವೈಯ್ಯಲು ಆ ಕರುಬಿಯಲ್ಲೀ । ಇದ್ದರೇನೂ ಭಯಾ ವಿಜಯ ವಿಠಲ ನಿನ್ನ ಪೊದ್ದಿದವಗಾದರೂ ಅನುಭವಿಸದೇ ಬಿಡದು ।।೩।।

ಪದ ೭೬ ರಾಗ ಕಾಂಬೋದಿ ಝಂಪೆ ತಾಳ

ನಿನ್ನ ಮನಸಿಗೆ ಬಂತೆ ಪ್ರಾಣನಾಥಾ । ಚಿಣ್ಣನೆಂದು ನೋಡದಲೆ

ಕರಿಯಲಟ್ಟಿದೆ ವೇಗ ||ಪ|| ಸಾಕಿದೆನು ನಿನ್ನ ದಾಸನೆಂದು ತಿಳಿದು| ವಿವೇಕದಿಂದಲಿ ಉಪನಯನ ಮಾಡಿ || ಲೋಕದೊಳಗೆ ಬೆಳಸಿ ಮದುವೆ ಯು ಮಾಡಿ | ಅನೇಕ ತೀರ್ಥ ಯಾತ್ರೆ ತಿರುಗಿದವನಾ ಇಂದೆ ||೧|| ಉದ್ಧಾರ ನಾಗುವೆನು ಕುಲಕೋಟಿ ಸಹಿತೆಂದು | ಪದ್ದಿಟ್ಟುಕೊಂಡಿದ್ದೆ ಈತರುಣನಾ | ಸುದ್ದಿ ತಿಳಿಯಗೊಡದೆ ವಿಯೋಗ ಮಾಡಿಸಿದೆ | ಸಿದ್ಧಮಾ ಡಿದೆ ನಿನ್ನ ಸಂಕಲ್ಪವೇ ಇಂದು ||೨|| ನೆಚ್ಚಿ ನಿನ್ನ ಪಾದ ಭಜಿಸುವರಿಗೆ ಭಾಗ್ಯ ಹೆಚ್ಚು ಗೊಡದಿಪ್ಪನೆಂಬಬಿರಿದು ಧರಿಸಿ|ನಿಚ್ಚ ಮೆರೆವಾ ಮಹಿಮೆ ವಿಜಯ ವಿಠಲರೇಯ ಅಚ್ಚ ಭಕುತರ ಪ್ರಿಯ ವೈಕುಂಠಕ್ಕೆ ಇಂದೇ||೩||

ಪದ ೭೭ ರಾಗ ಕಾಂಬೋದಿ ಝಂಪೆ ತಾಳ

ಮಗನೆಂದೆಂಬವ ಇನ್ನು ಮತ್ತಾವನೊ| ಜಗದೊಳಗೆ ನಿನ್ನ ವಿನಹಾ ಕಾಣೆ ಎಲ್ಲಿ ||ಪ|| ರಕ್ತಶುಕ್ಲಾ ಮಿಶ್ರವಾದ ಸಮ್ಮಂಧ ವಿಷ | ಭುಕ್ತನಾ ಗಿದ್ದು ಸಂಸಾರದೊಳಗಾ || ಸಕ್ತತನವಲಿ ಇಪ್ಪ ಎಂದಿಗೆಂದಿಗೆ ಇವನು ಮುಕ್ತಿ ಕೊಡುವಾನೇನೊ ಮುಂದೊಲಿದು ಕೊಂಡಾಡೆ ||೧|| ಪ್ರಕೃತಿ ಬದ್ಧನಾಗಿ ನಾನಾ ಜನುಮಗಳಲ್ಲಿ | ವಿಕೃತಿಯನು ಮಾಡುವಾ ಮದ ದಿಂದಲೀ | ಸುಕೃತವನನುರದು ದೂರಾಗಿ ಸಂಚರಿಸುವನು ಕೃಕಲ ವಂದು ಮಾಸ ಜನಕನೆರೆ ಇರವವಾ||೨| ಪುತ್ರ ಉಳ್ಳರೆ ಅವಗೆ ಕಂಡ ಕಡೆ ತಿರುಗಿ ಉ | ನ್ಮತ್ತನಾಗಿ ಕೆಟ್ಟು ಗ್ರಾಸವನ್ನು || ಹೊತ್ತು ಹೊತ್ತಿಗೆ ತಂದು ಹಾಕಬೇಕು ಸಾಕಿ | ನಿತ್ಯವಲಿ ಅವಗಾಗಿ ಕ್ಲೇಶಬಡಲೀ ಬೇಕು || ೩ || ನಾಡೊಳಗೆ ನೀನೆಮಗನೆಂದವನ ಭಾಗ್ಯಕ್ಕೆ | ಈಡುಗಾಣೆನು ಎಲ್ಲ ವಿಚಾ ರಿಸೆ || ಕಾಡಿ ಬೇಡುವೆ ಮುನ್ನೆಪರಿ ಬಾಧೆಬಡಿಸಿ | ಕೂಡರುವಿ ಮುಕ್ತರ ರೊಳು | ಮುಕ್ತಿಗಳ ಒಲಿದೂ || ೪ || ಸನ್ಮಂಥಮಗನ ಪಡದ ವ್ಯಾಲಿ ಎನಗೆ | ಅನ್ಯ ಚಿಂತೆಗಳಿಲ್ಲ ಚಿಂತಾಮಣೀ | ಘನ್ನ ಮೂರುತಿ ನಮ್ಮ ವಿಜಯ ವಿಠ್ಠಲರೇಯ | ಅನಂತ ಕಾಲಕ್ಕೆ ಪೈಹಿಸುವದೇವಾ ||೫||

ಪದ ೭೮ ರಾಗ, ಕಾಂಬೋದಿ ತಾಳ ಝಂಪಿ

ಚಿಂತೆ ಯಾತಕೆ ನಿನಗೆ ಎಲೆ ಪ್ರೀಯಳೇ ಸಂತತಾ ತಿಳುಪುವೆನು ಭಕುತಿಯಿಂದಲಿ ಕೇಳು || ಪಲ್ಲ || ಈ ಭೋಗ ನಮಗೆ ಯಾಕೆಂದು ನೀ ಕೇಳುವಿಯಾ | ಲಾಭವಲ್ಲವೆ ಇದು ನೋಡುವದಕೆ || ಶ್ರೀ ಭೂ

ರಮಣಿ ತಾನೆ ಕಂದಿತ್ತ ವಿಚಿತ್ರ । ವೈಭೋಗ ವಲ್ಲೆನೆಂಬರೆ ಬಿಡನು ರಮಣೀ ||೧|| ಹಿರಿಯರು ಈರ್ವರಗೆ ಮಾಡಿದ ನಿಷ್ಟ । ವಿ । ಸ್ತರ ಪುಣ್ಯ ಬಂದು ಈ ಪರಿ ಸೌಖ್ಯವಾ || ಹಿರಿದಾಗಿ ಕೊಟ್ಟು ನಮ್ಮನ ಪಾಲಿಸು ವದು ಬಲು । ನೊರೆ ಇಟ್ಟರೆ ಕೇಳು ಹರಿಯ ಮಹಿಮೆಗೆ ನಮೋ ||೨|| ಕ್ಷೀರಸಾಗರದೊಳಗೆ ಓಲ್ಯಾಡುವವನ ವಿ । ಚಾರ ಮಾಡದೆ ತಂದು ಹುವಲಮಧ್ಯಾ || ಸೇರಿಸು ನಂದವಿ ಎನಗೆ ಇಲ್ಲಿಪ್ಪುದು । ಸಂ । ಸಾರ ದೊಳಗಿದ್ದ ಸುಖ ವಿನಿತುಂಟು ರಮಣಿ ||೩|| ಸಂತಾನ ವಿಲ್ಲೆಂದು ಈರ್ವರು ಚಿಂತಿಪದ್ಯಾಕೆ । ಪಿಂತೆಕಾಂತಾರದಲಿ ಬಾಲ ವೃಗನಾ । ಅಂತಕನ ಪುರಿಗೆ ಅಟ್ಟಿದ ದೋಷದಿಂದ ನಮು । ಗಿಂತು ತೋರಿತುಗುಟ್ಟು ಪೇಳಬಾರದು ರಮಣಿ ||೪|| ಈ ಜನ್ಮ ಬಂದವಕೆ । ಇನ್ನಾದರೆಚ್ಚತ್ತು । ಮಾಜಿಕೊಂಡಿದ್ದ ಜನರಂತೆ ನಡವೂ। ಮೂಜಗಪ್ಪತಿ ಸಿರಿವಿಜಯ ವಿಠಲನ ಸ । ರೋಜ ಚರಣವನು । ಪೂಜಿಸುವನೊ ರಮಣಿ ||೫||

ಈ ೧೨ ಪದಗಳಿಂದ ಶ್ರೀ ಹರಿಯ ವಿಚಿತ್ರ ವ್ಯಾಪಾರ. ಮಗನು ಸನ್ನವನಲ್ಲ ಭಿನ್ನಜೀವ ಭಿನ್ನಕರ್ಮ ಉತ್ತಮನಾದ ಜೀವಿಯಲ್ಲಿ ಶ್ರೀ ಹರಿನಿಂತು ವ್ಯಾಪಾರ ಮಾಡಿಸುವ ಕ್ರಮ ಪುತ್ರಶಬ್ದವಾಚ್ಯ ಪುತ್ರಾಂತ ರ್ಯಾಮಿ ಶ್ರೀ ಹರಿಯೆ ಸುಖದುಃಖಕ್ಕೆ ಕಾರಣ. ಅಭಿಮಾನ ನಿಮಿತ್ತ ಸುಖದುಃಖ ಅಭಿಮಾನ ಬಿಡಿಸುವನು ಶ್ರೀಹರಿ ಎಂದು ಪ್ರಾರ್ಥನ ಮಾಡಿ ಲೋಕಕ್ಕೆ ಅನುಗ್ರಹಿಸಿದ್ದು.

## ಐತಿಹಾಸಿಕ ವಿಜಯದಾಸರ ಆತ್ಮಕಥನ

೧. ಶ್ರೀ ವಿಜಯದಾಸರು ಚಾಗಿ ಕೇಶವರಾಯಗೆ ಬಂದ ಅಪಮೃತ್ಯು. ಪರಿಹರಿಸಿದ್ದು ಉಗಾಭೋಗಗಳು (೧೩) ಸ್ತೋತ್ರಭಾಗ ಸುಳಾದಿಯಲ್ಲಿ.

## ಪ್ರಾರ್ಥನಾಭಾಗ ಸುಳಾದಿಯಲ್ಲಿ ಅಚ್ಚಾದವು

(೯) ಸುಳಾದಿಗಳು ಐತಿಹಾಸಿಕ

೨. ಚಾಗಿ ಕೇಶವರಾಯನ ವಿ|| ಪ್ರಾರ್ಥನೆ ರುದ್ರಾಂತರ್ಗತ ನರಸಿಂಹ ಮೃತ್ಯುನಿವಾರಿ ಭದ್ರಫಲದಾಯಕ ದೋಷ ದೂರ.

೩. ಅರಳಮ್ಮನವರಿಗೆ ಚಾತುರ್ಥಿಕ ಜ್ವರ ಪರಿಹಾರಗೋಸುಗ ಪ್ರಾರ್ಥನಾ. "ದಯಮಾಡೊ ಎನ್ನೊಡೆಯ ದಾಸಿಗೊಲಿದು".

೪. ಗುರುರಾಯರ ನಿಮಿತ್ತ ಪ್ರಾರ್ಥನೆ. "ಬಿನ್ನಪ ಲಾಲಿಸಯ್ಯಾ ಭಕ್ತರ ವತ್ಸಲ ದೇವ। ನಿನ್ನ ಸುರತರು ಪಾವನ್ನ ನೆಳಲು।

೫. ಉಡುಪಿ ಯಾತ್ರೆಗೆ ಹೋಗುವಾಗ ಮಾರ್ಗದಲ್ಲಿ ತಮ್ಮ ಭಕ್ತ ವೃಂದಯಲ್ಲಿ ಲಘು ತಪ್ಪಿರಲಿಕ್ಕೆ ಮಾಳೀನ ಹಳ್ಳಿಯಲ್ಲಿ ಪ್ರಾರ್ಥನೆ ಮಾಡಿದ್ದು "ತಡೆಯಾ ಕೊಡುವದಿಂದು ಒಡೆಯ ಕರುಣದಿ

೬. ತಮ್ಮ ಪುತ್ರರಾದ ಶೇಷಗಿರಿ ದಾಸರ ದೇಹಕ್ಕೆ ಸ್ವಸ್ಥವಿಲ್ಲದಾಗ ದೇವರ ಪ್ರಾರ್ಥನೆ "ಹಗರಣ ಮಾಡದಿರು ಹರಿಯೆ ನಿನಗೆ ಕರವ ಮುಗಿದು ಬೇಡಿಕೊಂಬೆ ಭಕ್ತಜನರ.

೭. ಅಕಾಲಮೃತ್ಯು ಪರಿಹಾರ ವಿಷಯ ಪ್ರಾರ್ಥನೆ. ನಂಬಿದೆ ಎಲೊ ಹರಿ ಅಂಬರರೂಪಕಾರಿ ಬೆಂಬಲವಾಗು ಭವರೋಗ ನೀಗು.

೮. ಸಕಲ ಆಪತ್ತು ನಿವಾರಣೆಗೋಸುಗ ಪ್ರಾರ್ಥನಾ. "ದುರುಳರನು ಪರಿಹರಿಸೊ ದುರ್ಗಾರಮಣ ಹರಿ। ಉರಗಾಭರಣ ರುದ್ರನಾಮಕ ನಾರಾಯಣ।

೯. ಆಪತ್ತು ಪರಿಹಾರ ವಿಷ ನಿವಾರಣ ವಿ॥ ಪ್ರಾರ್ಥನೆ. ಸೇರಿದೆನೊ ಬಂದು ಸಂಕಟದಲ್ಲಿ ನೊಂದು। ತಾರಿತುಟಿಯಾರಿ ದಾನವಾರಿ ॥

೧೦. ಯಮಭಟರಕಾಟ ತಪ್ಪಿಸಲು ಪ್ರಾರ್ಥನೆ. "ಚಿಂತೆ ವೆಗ್ಗಳಿಸಿತು ಚಿನ್ಮಯಾತುರ ಸಿರಿ। ಕಾಂತ ನಿನ್ನಯ ಪಾದಕ್ಕೆ ನಮೊ ನಮೊ।

೧೧. ಬಾರಯ್ಯಾ ತಿಮ್ಮಯ್ಯಾ ತೋರಯ್ಯಾ ಮುಖವನು (೧೧ನೇಪದ) ಭಕ್ತನ ನುಡಿಕೇಳಿ ಚಕ್ಕನೆ ಬಿಗಿದಪ್ಪಿ। ತಕ್ಕೈಸಿದ ವಿಜಯವಿಠಲ ಎನ್ನ ಅಕ್ಕರವೆಲ್ಲ ತೀರಿಸಿದ ॥೯॥

## ಉಪಾಸನಾಭಾಗ ಸುಳಾದಿಯು

೧೨. ಪಂಡರಪುರದಲ್ಲಿ ಶ್ರೀವಿಠ್ಠಲನು ಪದಜ ರೂಪ ತೋರಿದ್ದು. (ಅಂದು ನಿನ್ನ ದರುಶನಕ್ಕೆ ಆರ್ತನಾಗಿ ಬಂದೆ ಎಂಬ ಸುಳಾದಿ ವಿಶದ ಮಾಡಿದೆ.

೧೩. ಮನ್ನಾರಿ ಕೃಷ್ಣದೇವರಲ್ಲಿ ನದಿಯ ಸ್ನಾನ ಮಾಡುವಾಗ ದೇವರು ಬಾಲರೂಪದಿಂದ ಬಂದು ನೀರು ಸಿಡಿಸಿ ಮೈಲಿಗೆ ಮಾಡಿದ್ದು.

(ಮಾತನ್ನಾಡ ಮನ್ನಾರಿ ಕೃಷ್ಣ ಎಂಬೋ ಪದ ಇತ್ಯಾದಿ)

**ಶ್ರೀಗುರು ಮಧ್ವೇಶ ಶ್ರೀಕೃಷ್ಣಾರ್ಪಣಮಸ್ತು**



ಶಕ್ತಿ ಮುದ್ರಣ, ಗದಗ.

॥ ಶ್ರೀ ಗುರುರಾಜೋ ವಿಜಯತೇ ॥

# ಶ್ರೀ ವಿಜಯದಾಸರ

## ಸಂಕ್ಷಿಪ್ತ ಜೀವನ ಚರಿತ್ರೆ



೧ ಶ್ರೀ ವಿಜಯದಾಸರ ಅವತಾರ ಕಾಲ, ಶಕೆ ೧೬೦೪ ರುಧಿರೋದ್ಗಾರಿ ಸಂವತ್ಸರ.

೨ ಯಾತ್ರಾ ಮಾಡಿದ್ದು ಶಾ.ಶಕೆ ೧೬೭೭ ಯುವ ಸಂವತ್ಸರ ಕಾರ್ತೀಕ ಶು. ೧೦ ಗುರುವಾರ ಪ್ರಹರದಿ– ಚಿಪ್ಪಗಿರಿಯಲ್ಲಿ.

೩ ಒಟ್ಟಿಗೆ ೭೩ ವರುಷ ಭೂಮಿ ಮೇಲೆ ಇದ್ದು ಲೋಕದಲ್ಲಿದ್ದ ಸಜ್ಜನರನ್ನು ಉದ್ಧರಿಸಿದ್ದು.

### ಇದರ ವಿವರಣೆ

೧ ರಿಂದ ೧೬ ವರುಷ– ಬಾಲ್ಯತನ, ವಿದ್ಯಾಭ್ಯಾಸ, ಮುಂಜಿ-ಮದುವೆ ಅನೇಕ ಸಂಸಾರತಾಪ ಅನುಭವಿಸಿದ್ದು. ಈ ಬಾಧೆ ತಾಳದೆ,

೧೬ ರಿಂದ ೨೦ ವರುಷ ವರೆಗೆ ೪ ವರುಷ ಸಂಸಾರ ಸುಖವಿಲ್ಲೆನುತ ಬಾವಾಜಿಗಳ ಸಂಗಡ ಉತ್ತರ ಕ್ಷೇತ್ರ ಕಾಶಿ ಮೊದಲಾದ ಕ್ಷೇತ್ರ ಸಂಚಾರ.

### ಪುನರಾಗಮನ

೨೧ ರಿಂದ ೩೨ ವರುಷ ಪರಿಯಂತರ ಸಂಸಾರದಲ್ಲಿದ್ದು, ೧೪ ಗ್ರಾಮ ಕುಲಕರ್ಣಿಕಿ ಕೆಲಸ ಗುತ್ತಿಗಿಯಿಂದ ಮಾಡುತ್ತ ಸಂಸಾರ ಅನೇಕ ಕಷ್ಟಗಳು ಅನುಭವಿಸಿ ಗುತ್ತಿಗಿ ರೊಕ್ಕ ಮೈ ಮೇಲೆ ಬಿದ್ದು ಸರಕಾರಕ್ಕೆ ಮೋರೆದೋರದೆ ಹೊರಡಲು ಹಾಯದಲ್ಲಿ ಕಳ್ಳರು ಬಡೆದು ಬಹು ತಾಪಬಟ್ಟು ಎರಡನೇ ಆವರ್ತಿ ಕಾಸಿಗೆ ಪೊರಟದ್ದು.

೩೨ ರಿಂದ ೩೪ ವರುಷ ಪರಿಯಂತ ೨ ವರುಷ ಕಾಶಿಯಲ್ಲಿದ್ದುದು. ಆಗ ಮಣಿಕರ್ಣಿಕೆ ಘಾಟಿನಲ್ಲಿ ಮಲಗಿರಲು ಸ್ವಪ್ನದಲ್ಲಿ ನಾರದಾಂಶರಾದ ಶ್ರೀ ಪುರಂದರದಾಸರು ಬಂದು ಗಂಗಾ ಆಚೀಲಿ ಇರುವ ಶ್ರೀವ್ಯಾಸ ಕಾಸಿಗೆ ಕರದೊಯ್ದು ಶ್ರೀ ವ್ಯಾಸದೇವರ ದರ್ಶನ ಮಾಡಿಸಿ, ಪರಮಾನುಗ್ರಹಿಸಿ ತೈತ್ತರೇಯ ಉಪನಿಷತ್ತಿನಲ್ಲಿ ಹೇಳಿದ ಶಾಂತಿಪೂರ್ವಕ ಸಕಲ ಮಂತ್ರೋಪದೇಶಗಳನ್ನು ಕೊಟ್ಟು ದಾಸಪ್ಪದಾಸರಿಗೆ ಶ್ರೀ ವಿಜಯ ವಿಠ್ಠಲನೆಂಬೊ ಅಂಕಿತವಿತ್ತು ಸಪ್ತತಾರಾ ಚಿಕ್ಕ ತಂಬೂರಿ ಇತ್ತುದು.

೩೪ ರಿಂದ ೫೨ ವರುಷ ವರೆಗೆ ೧೮ ವರುಷ ಲೋಕೋಪಕಾರಾರ್ಥವಾಗಿ ಸಕಲ ಕ್ಷೇತ್ರಗಳನ್ನು ಸಂಚರಿಸಿ ಅನೇಕ ಸಜ್ಜನರನ್ನು ಉದ್ಧರಿಸುತ್ತ ಮಹಾಮಹಿಮಗಳನ್ನು ತೋರ್ದರು– ಶಿಷ್ಯ ಸಂಗ್ರಹವಲ್ಲಿ.

೫೩ ರಿಂದ ೭೩ ವರುಷ ಅಂದರೆ ೨೧ ವರುಷ ಶ್ರೀ ಮಹಾ ಕಾಶಿಯಾತ್ರೆ ಮಾಡಿದ್ದು, ಬಂದ ನಂತರ ಪ್ರತಿ ವರುಷ ಶ್ರೀ ವೆಂಕಟ ಗಿರಿಯ ಯಾತ್ರೆ ಚರಿಸುತ್ತ ಭಾಸ್ಕರ ಕ್ಷೇತ್ರವಾದ ಚಿಪ್ಪಗಿರಿಯಲ್ಲಿ ಶ್ರೀ ಭೋಗೇಶ್ವರ ದೇವಾಲಯದಲ್ಲಿ ತಪಸ್ಸುಗೈದು, ಚಂದಪ್ಪನೆಂಬೊ ಕುರುಬನ ಭಾವಿಯಲ್ಲಿ ಪ್ರತ್ಯಕ್ಷನಾದ ಶ್ರೀ ಗೋಪಾಲಕೃಷ್ಣನನ್ನು ಪ್ರತಿಷ್ಠ ಮಾಡಿ ಕೆಲವ ವರುಷ ನಂತರ ೭೩ನೇ ವಯುಸ್ಸಿನಲ್ಲಿ ವೈಕುಂಠ ಯಾತ್ರೆಗೆ ತೆರಳಿದರು.

ಶ್ರೀ ಹರಿ, ಹರಿದಾಸರ ಚರಿತ್ರೆ ಮಹಾಮಹಿಮೆಗಳು ಅನಂತ ವಾದವು. ಮಂದಮತಿಯಿಂದ ವಿವರಿಸಲು ಅಸಾಧ್ಯವಾದರೂ ಪುಣ್ಯ ಶ್ಲೋಕ ಅಪರೋಕ್ಷ ಜ್ಞಾನಿಗಳಾದ, ದಾಸರಾಯರು ಶ್ರೀ ವಿಜಯದಾಸರ ಮಹಾ ಮಹಿಮೆಗಳನ್ನು ಪದ ಪದ್ಯರೂಪದಿಂದ ಕೊಂಡಾಡಿರುವರು. ಅವುಗಳ ಆಧಾರಮೇಲಿಂದಲೇ ಸಜ್ಜನರಿಗೆ ಬೋಧವಾಗುವಂತೆ ದೇಶ ಕಾಲಾನುಸರಿಸಿ, ಎನ್ನ ಆತ್ಮೋದ್ಧಾರಕ್ಕಾಗಿ **"ಮನೋವಿಶುದ್ಧ್ಯೈ ಚರಿತಾನುವಾದ"** ಎಂಬ ಪಂಡಿತಾಚಾರ್ಯರ ಉಕ್ತಿಯಂತೆ ಅನಂತ ಮಹಿಮಾಗಳಲ್ಲಿ ಅವರೇ ಪ್ರೇರಿಸಿ ಬರೆಯಿಸಿದಂತೆ ಕಿಂಚಿತು ಬಿನ್ನೈಸು ತ್ತದೆ. ಶ್ರೀಹರಿ ಗುರುಗಳು ಪ್ರೀತರಾಗಲಿ.

**ಮುಖ್ಯಾಂಶಗಳು :—** ೧ ಶ್ರೀ ವಿಜಯದಾಸಾರ್ಯರ ಮೂಲ ಸ್ವರೂಪ. ೨ ಅವರ ಜ್ಞಾನ ವೈರಾಗ್ಯ ಭಕ್ತಿ ಅವರ ಮೂಲ ಮಹತ್ಮೆ. ೩ ಅವರ ಹಿಂದಿನ, ಅಂಶ ಅವತಾರಾದಿಗಳ ಕಥನ. ೪ ಈ ಜನ್ಮದಿಂದ ಭುವಿಯಲಿ ಅವತರಿಸಲು ಕಾರಣ. ೫ ಆಗಿನ ದೇಶಕಾಲ ಪರಿಸ್ಥಿತಿ. ೬ ಅವತಾರ ಕಾಲ–ದೇಶ–ಮಾತಾ ಪಿತೃಗಳ ವಿಚಾರ. ೭ ಸಹೋದರರ ವಿಚಾರ. ೮ ಬಾಲ್ಯಾವಸ್ಥಾ ಕಥನ. ೯ ವಿದ್ಯಾಭ್ಯಾಸದಲ್ಲಿ ವರ ಸ್ಫೂರ್ತಿ. ೧೦ ಮುಂಜಿ–ಮದುವೆಯಾದ ವಿವರಣೆ. ೧೧ ಹದಿನಾರು ವರ್ಷ ಪರಿಯಂತರ ಸಂಸಾರದಲ್ಲಿ ಬಡತನ ಪರಿಪರಿ ಕಷ್ಟ ಅನುಭೋಗಿಸೋಣ. ೧೨ ಬಾವಾಜಿಗಳ ಸಂಗಡ ೪ ವರ್ಷ ಉತ್ತರದೇಶ ಯಾತ್ರಾ. ೧೩ ಪುನರಾಗಮನ. ೧೪ ಸಂಸಾರ ವೃತ್ತಿಯಲ್ಲಿರುವಿಕೆ, ಅನೇಕ ಸಂಸಾರ ಕಷ್ಟ ಅನುಭವ ಕಾರಣ. ೧೫ ಸಂಸಾರ ಅಸಾರವೆಂದು ಪುನಃ ಕಾಶಿ ಯಾತ್ರೆಗೆ ಗಮನ. ೧೬ ಅಲ್ಲಿ ಶ್ರೀ ಪುರಂದರದಾಸರಿಂದ ಸ್ವಪ್ನದಿ ಶ್ರೀವ್ಯಾಸ ಕಾಶಿ ಹರಿಯು ಸಂದರುಶನದಿಂದ ಉಪದೇಶ, ವಿಜಯ ವಿಠ್ಠಲನೆಂಬ ಅಂಕಿತಾನುಗ್ರಹ. ೧೭ ಶ್ರೀ ಅನುಗ್ರಹವಾದಮೇಲೆ ಕಾವ್ಯ ರೂಪವಾದ ಪದ ಸುಳಾದಿ ರಚನಾ ಪ್ರಾರಂಭ. ೧೮ ಲೋಕದಲ್ಲಿ ಪ್ರಸಿದ್ಧ ಜನಪ್ರಿಯತ್ವ ರಾಜಾಧಿರಾಜರಿಂದ ಮಾನ್ಯತ್ವ. ೧೯ ಮರಳಿ ಆದವಾನಿಗೆ ಬರುವಿಕೆ, ಶಿಷ್ಯರಿಗೆ ಉಪದೇಶ. ೨೦ ಶಿಷ್ಯರೆಷ್ಟೆಂಬ ವಿವರಣೆ ಮತ್ತು ಶಿಷ್ಯರಿಗೆಲ್ಲ ತತ್ವೋಪದೇಶಗೈದ ವಿವರಣೆ. ೨೧ ಶ್ರೀ

ಹರಿಯು ವಾಯುಗಳು ಇವರಲ್ಲಿ ನಿಂತು ಮಹಾಮಹಿಮೆಗಳು ತೋರಿದವು ಅನಂತವಾಗಿವೆ ಕಿಂಚಿತು ವರ್ಣನೆ. ೨೨ ಮೂರನೇ ಸಲ ಕಾಶಿಯಾತ್ರಾ ಪ್ರಯಾಣ, ಅಲ್ಲಿ ಸಾಕ್ಷಾತ್ತಾಗಿ ಶ್ರೀ ಗಂಗಾದೇವಿಯ ದರ್ಶನ. ೨೩ ಶ್ರೀ ಹರಿಯೊಲಿದು ಅನೇಕಭಾರಿ ತನ್ನ ರೂಪವನ್ನು ನಾನಾವಿಧವಾಗಿ ತೋರಿಸ್ಸು. ೨೪ ದಾಸರಲ್ಲಿರುವ ನೈಜವಾದ ಜ್ಞಾನ ಭಕುತಿ ವೈರಾಗ್ಯ ವಿವರಣೆ. ೨೫ ಶ್ರಿ ದಾಸರು ರಚಿಸಿದ ಪದ ಸುಳಾದಿ ಕಾವ್ಯ ಸಂಖ್ಯಾ ಅದ ರಲ್ಲಿರುವ ಭಾಷಾ ಪದಲಾಲಿತ್ಯ ಭಾಷಾ ವೈಖರಿ ಶಬ್ದಾಲಂಕಾರ ಅರ್ಥಾ ಲಂಕಾರ ಛಂದಸ್ಸು ವ್ಯಾಕರಣ ಕನ್ನಡ ಭಾಷಾ ವಿವರಣೆ. ೨೬ ಶ್ರೀ ದಾಸರಿಂದ ಲೋಕೋಪಕಾರವಾದುದೇನು? ಅವರ ಭೋದಗಳನ್ನು ಗ್ರಹಿಸಿ ಆಚರಣೆಯಲ್ಲಿ ತರುವ ವಿಚಾರ ಅನೇಕಾಂಶಗಳಿರುವವು. ಅತಿ ಗೌಪ್ಯಗಹನವಾದ ಮಹಾ ಮಹಿಮೆಗಳಿವೆ. ನನ್ನಂಥ ಪಾಮರನಿಂದ ವರ್ಣಿಸಲು ಶಕ್ಯವಿಲ್ಲವಾದರೂ ಅವರೇ ಅನುಗ್ರಹಿಸಿ ಸೇವಾ ಮಾಡಿಸಿ ಕೊಳ್ಳಲುದ್ಯುಕ್ತನನ್ನಾಗಿ ಮಾಡಿರುವದು ಸಜ ಇದು ಎನ್ನ ಅನುಭವ.

**ಸಾಮಾನ್ಯವಾಗಿ** ಯಾವ ಯಾವ ಕಾಲದಲ್ಲಿ ಧರ್ಮಜ್ಞಾನ ಚ್ಯುತಿಯಾಗುವದೋ ಆಗ್ಗೆ ಕೃತ ತ್ರೈತಾ ದ್ವಾಪರಾದಿ ಮೂರುಯುಗಗಳಲ್ಲಿ ಶ್ರೀ ಭಗವಂತನು ಅವತರಿಸಿ ಧರ್ಮವನ್ನು ಸ್ಥಾಪಿಸುವ ತನ್ನ ಸಂಕಲ್ಪದಂತೆ ಅನೇಕ ರೂಪದಿಂದ ಸದ್ಧರ್ಮ ಸ್ಥಾಪನೆಮಾಡಿ ಸಜ್ಜನರನ್ನು ಕಾಪಾಡುವನು.

ಕಲಿಯುಗದೊಳಗೆ ಶ್ರೀಹರಿಗೆ ಸಾಕ್ಷಾದವತಾರವಿಲ್ಲದ ಕಾರಣ ಶ್ರೀಯಾಜ್ಞೆಯಿಂದ ಶ್ರೀವಾಯು, ರುದ್ರ ಇಂದ್ರಾದಿ ದೇವತೆಗಳು ನಾರದಾದಿ ಋಷಿಗಳು ಅವತರಿಸಿ ಆಗಾಗ್ಗೆ ಕಲಿ ಪ್ರಾಬಲ್ಯದಿಂದ ಬಂದೊದಗಿದ ಅಜ್ಞಾನ ತಿಮಿರವನ್ನೋಡಿಸಿ, ಸಜ್ಜನರಿಗೆ ಸುಜ್ಞಾನಪ್ರದ ರಾಗಿರುವರು. ಇದು ಶ್ರುತಿ ಪುರಾಣಾದಿಗಳಲ್ಲಿ ಸುಪ್ರಸಿದ್ಧವಾದುದು.

ಶ್ರೀ ವಾಯುದೇವರೆ ಶ್ರೀ ಹರಿಯಾಜ್ಞೆಯಿಂದ ಶ್ರೀ ಮಧ್ವರೂಪ ದಿಂದವತರಿಸಿ, ಅಜ್ಞಾನದಿಂದ ಪಸರಿಸಿದೆ. ಅನೇಕ ಕುಮತಗಳನ್ನು ನಿರಾಕರಸಿ, ಶ್ರೀಹರಿ ಸರ್ವೋತ್ತಮ ರಮಾ ಬ್ರಹ್ಮಾದಿಗಳು ದಾಸರು.

ಪಂಚಭೇದ ತರತಮ ನಿಜವಾದುದು, ಜಗತ್ ಸತ್ಯ. ಇತ್ಯಾದಿ ಜೀವೇಶಗೆ ಭೇದವೆಂದು ಡಂಗುರ ಸಾರಿ, ಸಕಲ ವೇದ ಸಕಲ ಪುರಾಣಗಳ ಸಾರವನ್ನು ತೆಗೆದು ಸರ್ವಜ್ಞರಾದ ಕಾರಣ ಅವುಗಳ ಪ್ರಮಾಣವನ್ನೇ ಕೊಟ್ಟು ೩೭ ಗ್ರಂಥಗಳನ್ನು ನಿರ್ಮಾಣ ಮಾಡಿದ ಕಾರಣ ಈ ಗ್ರಂಥಗಳಿಗೆ ಮೂಲ ಮುವ್ವತ್ತೇಳು ಗ್ರಂಥವೆಂದು ಶ್ರೀ ವೇದವ್ಯಾಸರ ಮತ. ಈ ಕಲಿಯುಗದಲ್ಲಿ ಹರಿದಾಸ್ಯತತ್ವವನ್ನು ಬೋಧಿಸಿ, ಪುನರುಜ್ಜೀವನಗೈದರು. ಈ ವಾಯ್ವಂಶ ಸಂಭೂತರಾದ ಮಧ್ವಾಚಾರ್ಯರೆ ಶ್ರೀಹರಿಯ ನಿತ್ಯರಾದ ನಿಜದಾಸರು. ದಾಸ ಶಬ್ದವು ಪಲ್ಲಟವಾಗಿ ಓದಿದರೆ "ಸದಾ" ಎಂದರೆ ಈಶನು ಸದಾ ಹೇಗೆ ನಿತ್ಯನೊ ದಾಸರೆಲ್ಲರು ಸದಾ ಯಾವಾಗಲೂ ದಾಸರೆ. ಮತ್ತು ಈ ದಾಸ ಶಬ್ದ ಅನ್ವರ್ಥಕವಾಗಿಯದೆ. ದ ತ ವರ್ಗದಲ್ಲಿ ೩ನೇ ಅಕ್ಷರ, ಸ ೭ನೇ ಅಕ್ಷರ, ಹೀಗೆ ೩೭ ಎಂದು ದಾಸ ಶಬ್ದದಲ್ಲಿ ಬೋಧವಾಗಿರುವದು.

ಇಂತು ಸಂಸ್ಕೃತದಲ್ಲಿಯೇ ಹರಿಪರನು, ಜೀವರು ದಾಸರೆಂದು ಗೀತಾರೂಪವಾಗಿ ಶ್ರೀ ದ್ವಾದಶ ಸ್ತೋತ್ರವನ್ನು ರಚಿಸಿ ಆನಂದತೀರ್ಥರೆಂಬ ಅಂಕಿತವೆ ಸಾಕ್ಷಿ. ಇವರೇ ದಾಸ ಕೂಟಕ್ಕೆ ಮೂಲ ಗುರುಗಳು.

ನಂತರ ಶ್ರೀ ನರಹರಿ ತೀರ್ಥರು, ಶ್ರೀ ಟೀಕಾರಾಯರು ಶ್ರೀಪಾದರಾಜರು ಸಂಸ್ಕೃತ ಟೀಕಾ ರಚಿಸಿರುವರಲ್ಲದೆ, ಮುಂದಜನರ ಉದ್ಧಾರಾರ್ಥವಾಗಿ ಕನ್ನಡ ಪದ ಸುಳಾದಿಗಳಲ್ಲಿ ಶ್ರೀ ನರಹರಿತೀರ್ಥರು ಶ್ರೀಪಾದರಾಜರು ಶ್ರೀ ವ್ಯಾಸರಾಜರು ಶ್ರೀ ಸ್ವಾದಿರಾಜರು ಶ್ರೀ ಹರಿಯಾಜ್ಞೆಯಿಂದ ತಮ್ಮ ಉಪಾಸ್ಯ ಭಗವಂತನ ಅಂಕಿತದಿಂದಲೇ ಕನ್ನಡದಲ್ಲಿ ಪದ ಸುಳಾದಿಗಳನ್ನು ರಚಿಸಿ ಸಕಲರಿಗೆ ಶ್ರೀ ಮಧ್ವಾಚಾರ್ಯರ ಗ್ರಂಥಗಳ ತಿರುಳನ್ನು ತಿಳುಹಿದರು.

ಆ ಕಾಲದಿ ನಾರದಾಂಶ ಸಂಭೂತರಾದ ಶ್ರೀ ಪುರಂದರದಾಸರು ವಾಯು ಅಂಶದಿಂದ ಆವತರಿಸಿ ಶ್ರೀ ವ್ಯಾಸರಾಜರಲ್ಲಿ ಮುದ್ರಾ ಮಂತ್ರೋಪದೇಶ ಅಂಕಿತ ತೆಗೆದುಕೊಂಡು ಸಕಲ ಶ್ರುತಿ ಉಪನಿಷತ್ ಸಾರವನ್ನು ತೆಗೆದು ೪ ಲಕ್ಷ ೭೫ ಸಾವಿರ ಪದಗಳನ್ನು ಕನ್ನಡದಲ್ಲಿ ರಚಿಸಿ ದಾಸ ಕೂಟಕ್ಕೆ ಮೂಲಪುರುಷರೆನಿಸಿದರು. ಇವರಕಿಂತಲೂ ಪೂರ್ವದಲ್ಲಿ

ಅಚಲಾನಂದಾದಿ ೬೦ ಜನ, ಆದ್ಯರು ೯ ಜನ ಆರಾಧ್ಯರೂ ಜ್ಞಾನ ಪ್ರಚಾರಗೊಳಿಸಿದ್ದಾರೆ.

## ಶ್ರೀ ವಿಜಯದಾಸರು ಅವತಾರ ಮಾಡಲಿಕ್ಕೆ ಕಾರಣ

ಶ್ರೀ ಪುರಂದರದಾಸರು ೧೫೬೪ನೇ ಇಸವಿಯಲ್ಲಿ ತಮ್ಮ ಅವತಾರ ಮುಗಿಸಿ ವೈಕುಂಠಯಾತ್ರೆ ಮಾಡಿದನಂತರ ವಿಜಯನಗರದ ರಾಜ್ಯ ಆಡ ಳಿತೆ ಖಿಲವಾಗಿ ಅಲ್ಲಲ್ಲೆ ಜನರು ಅಧರ್ಮ ಪ್ರವರ್ತರಾದರು. ಧರ್ಮ ಜ್ಞಾನಕ್ಕೆ ಚ್ಯುತಿಯಾಯಿತು.

ಶ್ರೀ ವಿಜಯದಾಸರ ಈ ಮಹೋದ್ಯಮವನ್ನು ಅವರ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಒಳ್ಳೇ ವಿಮರ್ಶಾತ್ಮಕ ದೃಷ್ಟಿಯಿಂದ ನೋಡಬೇಕಾದುದು. ಒಂದುಕಡೆ ಶೈವಮತವು ಭಕ್ತಿ ಪಂಥವಾಗಿ, ಜನತೆಯಲ್ಲಿ ನುಗ್ಗಿ ನುಸಿಯಲು ಪ್ರಾರಂಭಿಸಿತ್ತು. ಮಹಾ ರಾಷ್ಟ್ರದ ಭಕ್ತಿಪಂಥಾನುಗಾಮಿಗಳಾದ ಇತರ ಹಲಕೆಲವರು ಜ್ಞಾನಿಗಳಂತೆ ತೋರಿ ವಿಠ್ಠಲನ ಅವತಾರಾಪರೋಕ್ಷದಿಂದ ಆತ್ಮವಿದ್ಯಾ ಪರಿಣತರಲ್ಲಿ, ಬಲವಾದ ಕ್ರಾಂತಿಯನ್ನೆಬ್ಬಿಸಿದ್ದರು. ತಮಿಳ ನಾಡಿನಲ್ಲಿ ಒಳಹೊರಗೆ ರಾಮಾನುಜಯರೂ ಶೈವರೂ ತಮ್ಮ ತಮ್ಮ ಪಂಥಗಳನ್ನು ಬಲಪಡಿಸಿ ಕೊಂಡು ಉತ್ತರದಲ್ಲಿ ದಾಳಿ ನಡೆಸಲು ಪ್ರಾರಂಭಿಸಿದ್ದರು. ಆದಿಲ್‌ಷಾಹಿ ರಾಜ್ಯಕ್ಕೊಳಗಾದ ಅವನ ಅನುಯಾಯಿಗಳಾದ ಮುಸಲ್ಮಾನರು ಉತ್ತರ ಆರಂಭಿಸಿ " ಯಾದವಗಿರಿ '' ಆದವಾನಿ ನವಾಬನ ಬಲದಿಂದ ಎಲ್ಲರನ್ನೂ ಹಿಂದೊತ್ತಿ ತಮ್ಮ ಪೈಗಂಬರ ಮತ ಪ್ರಬಲ ಮಾಡಹತ್ತಿದ್ದರು. ಹೀಗೆ ದಿಕ್ಕುದಿಕ್ಕುಗಳಲ್ಲಿಯೂ, ತಮ್ಮತಮ್ಮ ಮತ ಪ್ರಸಾದರದ ಪುರವಣಿಗೆಯು ನಡೆಯುತ್ತಿರುವಾಗ, ಕನ್ನಡಿಗರು ಅದರಲ್ಲಿ ವಿಶೇಷವಾಗಿ ಬ್ರಾಹ್ಮಣ ಪಂಗಡದವರು, ತಮ್ಮ ಮಾತೃಭಾಷೆಯಾದ ಕನ್ನಡಕ್ಕೆ ವಿಮುಖರಾಗಿ, ಸಮಾಜದಲ್ಲಿ ದುರ್ಬಲವಾದ ಪಂಗಡವಾಗಿ ಬಹು ಖಿನ್ನಮನಸ್ಕರಾಗಿದ್ದರು. ವಿಜಯನಗರದ ಸಾಮ್ರಾಜ್ಯವು ಮಣ್ಣುಪಾಲಾಗಿ ಕರ್ನಾಟಕವು ಹರಿದು ಹಂಚಿಹೋಗಿ, ಮಾಧ್ವ ಇತರ ಬ್ರಾಹ್ಮಣ ಪೀಠಪತಿಗಳಲ್ಲಿ ಒಡಕುಗಳಾಗಿ ಪಂಡಿತರ ಶಾಠ್ಯವು ಅಸಹನೀಯವಾಗಿ ನಿಜವಾದ ತತ್ವಜ್ಞಾನವುಳ್ಳವರ

ಸಂಖ್ಯೆಯು ಕ್ಷಯಿಸುತ್ತಾ ಬ್ರಾಹ್ಮಣಕುಲಕ್ಕೆ ಬಹು ಕಷ್ಟ ಬಂದಿತು. ಆದರಲ್ಲಿ ವೈಷ್ಣವಸಮಾಜ ದುರ್ಬಲತೆಯನ್ನು ಕೇಳುವರಾರು ?

ಸತ್ಯವು ಸಮಾಜದ ಉಸಿರಾದರೂ ಸಮಾಜ ಶಕ್ತಿ, ರಾಜಾಶ್ರಯ ವೆಂಬ ದೇಹವಿಲ್ಲದೆ ಅದು ಪೋಷಿತವಾಗಿ ವೃದ್ಧಿ ಹೊಂದಲಾರದೆಂಬ ಅಂಶವನ್ನು ನಮ್ಮವರು ಮರೆತಿದ್ದರು. ಹಿಂದೆ ಆಗಲೇ ಶ್ರೀ ಪುರಂದರ ದಾಸರ ಕಾಲದ ಕನ್ನಡಾಂಬೆಯ ಭಾಷೆಯು ಕೆಲಮಟ್ಟಿಗೆ ಊರ್ಜಿತ ಹೊಂದುತ್ತ ಶ್ರೀ ವ್ಯಾಸಾರ್ಯರ ನ್ಯಾಯವಾಣಿಗೂ, ಶ್ರದ್ಧೆಗೂ, ವ್ಯಕ್ತಿ ತ್ವಕ್ಕೂ, ಸತ್ಯಾನುಭವಕ್ಕೂ ಸಂಘ ಘಟನಾ ಚಾತುರ್ಯಕ್ಕೂ, ಎಲ್ಲಕ್ಕೂ ಮೇಲಾಗಿ ಅದರ ನೈಸರ್ಗಿಕ ಕವಿತಾ ವೈಭವಕ್ಕೂ, ಮೆಚ್ಚಿದ ಶ್ರೀ ವ್ಯಾಸ ರಾಜರು, ಶ್ರೀ ವಾದಿರಾಜರೆ ಮುಂತಾದ ಯತಿಶ್ರೇಷ್ಠರು ತಾವೆ ಸ್ವತಃ ಕನ್ನಡಕ್ಕೆ ಪುರಸ್ಕಾರವನ್ನು ಕೊಟ್ಟು, ಅರಸಿಕರಾದ ದುಸ್ತಾರ್ಕಿಕರ ಮುಖ ಭಂಗವನ್ನು ಮಾಡಿ, ಜನರ ಮೌಢ್ಯವನ್ನು ಪರಿಹರಿಸಿ, ಜ್ಞಾನಾರ್ಜನೆಗೆ ಉನ್ನತಕಾಲವಾಗಿತ್ತು.

ಆದರೆ ಆ ಮಾತಿಗೆ ಗತ ೧೫೬೪ನೇ ಇಸವಿ ಶ್ರೀ ಪುರಂದರದಾಸರ ಕಾಲನಂತರ, ಶ್ರೀ ವಿಜಯದಾಸರ ಅವತಾರಕಾಲ ವರೆಗೆ ಅಂದರೆ ಶಾ. ಶಕೆ ೧೬೦೪ (೧೬೮೨) ಇ. ವರೆಗೆ ಸುಮಾರು ೧೧೮–೧೨೦ ವರ್ಷ ವಾಗಿತ್ತು. ಈನಡುವೆ ಕೆಲ ಹರಿದಾಸರಾಗಿದ್ದರೂ, ಕಾಲಹೇಷ್ಯದಿಂದಲೂ ಪರರ ದಬ್ಬಾಳಿಕೆಯಿಂದಲೂ, ಕೇವಲ ದಾಸ ವೇಷಧಾರಿಗಳಾದ ಸ್ವಾರ್ಥ ಪರ ಮಾಲಿನ್ಯ ಜೀವಿಕಾ ವೃತ್ತಿಯವರ, ಕಪಟಾನುಸಂಧಾನಗಳಿಂದಲೂ ದಾಸ ಧರ್ಮವು ಸ್ವಲ್ಪ ಮಟ್ಟಿಗೆ ಖಿಲವಾಗಿ, ದೇಶದಲ್ಲೆಲ್ಲಾ ಅಧರ್ಮ ಪ್ರವೃತ್ತಿ ಹೆಚ್ಚಾಗುತ್ತ, ಬ್ರಾಹ್ಮಣ ಕುಲವೆಲ್ಲ ಮನದಲ್ಲಿ ನೊಂದುತ್ತಿರಲು, ಪುನಃ ಆ ಸದ್ಧರ್ಮ ಜ್ಞಾನದ ಪ್ರತಿಷ್ಠೆ ಪುನರುಜ್ಜೀವನಕ್ಕಾಗಿ ಹಿಂದೆ ವರ ಪಡೆದ ದೇವಾಂಶ ಸಂಭೂತರೂ, ಭೂಸುರರ ಗುರು ದೊರೆಗಳೂ ಬ್ರಾಹ್ಮಣ ಕುಲಾಭಿಮಾನಿಗಳೂ, ಧರ್ಮ ಮೂರ್ತಿಗಳೂ, ಅನುಷ್ಠಾನ ಕರ್ತೃಗಳೂ, ಪರಮತ ಅಜ್ಞಾನ ಧ್ವಂಸಕರೂ, ಕೇವಲ ವೇಷಧಾರಿಗಳಾ ಗದೆ, ದೋಷಾಪಹಾರಕರೂ, ಸಜ್ಜನರಿಗೆ ಜ್ಞಾನಪ್ರದರೂ ಆದ ಶ್ರೀ ವಿಜಯರಾಯ ದಾಸಾರ್ಯರು ಅವತಾರ ಮಾಡಬೇಕಾದಿತು.

## ಮೂಲಸ್ವರೂಪ, ಅವರ ಜ್ಞಾನಾದಿಗಳು

ಇಂಥ ಮೂರ್ತಿಗಳು ಮೂಲದಲ್ಲಿ ಯಾರು. ಅವರ ಸ್ವರೂಪ ಎಂಥದು. ಅವರ ಮಹತ್ಮೆ ಏನು, ಅವರ ಜ್ಞಾನವೇನು, ಅವರ ಸಾಮರ್ಥ್ಯವೇನು ಇತ್ಯಾದಿಗಳು ತಿಳಿಯಲು ಅತ್ಯಾವಶ್ಯವಿದೆ. ಕಾರಣ ಅಪರೋಕ್ಷ ಜ್ಞಾನಿಗಳಾದ ದಾಸಾರ್ಯರ ವಚನಗಳೇ ನಮಗೆ ಶ್ರುತಿ ಸ್ಮೃತಿ ವಾಕ್ಯವೆಂದು ನಂಬಿಕೆ ಇದೆ. ಇರಲಿಕ್ಕೇ ಬೇಕು. ಶ್ರೀ ವಿಜಯ ದಾಸರು **ಭೃಗು ಋಷಿಗಳ** ಅವತಾರ, ಇದಕ್ಕೆ ಪ್ರಮಾಣಗಳು–

ಶ್ರೀ ವಿಜಯದಾಸರ ಸುಳಾದಿ, ಕ್ರಮಾಂಕ ( ) ದಾಸ ಪುರಂದರನ ಪಾದವ ಪೊಂದೆನು ಮತ್ತು ಪದಕ್ರಮಾಂಕ (೬) ಆದಿ ಯಲಿ ಸುರಮುನಿಯು ಪಾದಸೇವಿಯು ಮಾಡಿ, ಮತ್ತು ಪದ ಕ್ರಮಾಂಕ (೨೮) ಮೋಹನದಾಸರ ವಚನ.

''ಮೊದಲು ಋಷಿಗಳು ಕೂಡಿ ಸತ್ರಯಾಗವ ನಾಕನದಿಯ ತೀರದಿ ರಚಿಸಿ ಇರಲು । ಪದುಮ ಸಂಭವನಂಕಭವ ಬಂದು ಮುನಿ ವೃಂದ । ಹೃದಯ ಸಂಶಯ ಹೊಂದಲು । ವಿಧಿ ವಿಷ್ಣು ಶಿವರೊಳಗೆ ಉತ್ತಮರ ತೋರದಲೆ। ಮದಡಭಾವವವ್ಹೊಹಿಸಲು । **ಒದಗಿ ಭೃಗು ಮುನಿಗಳೇ** ಸರ್ವೇಶ ವೈಕುಂಠಸದನನೆಂದರುಹಿದರೋ **ಇವರೋ** ॥''
ಎಂದು ಸಾರಿರುವರು.

ಈ ವಿಜಯದಾಸರೇ **ಆ ಭೃಗುಋಷಿಗಳು.** ಕೃತಯುಗದಿ ಗಂಗಾತೀರದಲ್ಲಿ ಎಲ್ಲ ಋಷಿಗಳು ಕೂಡಿ ಜ್ಞಾನಸತ್ರಯಾಗ ನಡೆಸಿರಲು ಶ್ರೀ ನಾರದ ಋಷಿಗಳು ಬಂದು ನೀವು ಸರ್ವೋತ್ತಮನಾರೆಂದು ತಿಳಿದು ಹವಿಸ್ಸನ್ನು ಕೊಡುವಿರಿ ಇತ್ಯಾದಿ ವಚನಗಳಿಂದ ಸಂಶಯ ಉತ್ಪನ್ನ ಮಾಡಿದರು. ಆಗ್ಗೆ ಎಲ್ಲ ಋಷಿಗಳು ಕೂಡಿ ಋಷಿಶ್ರೇಷ್ಠರಾದ ಭೃಗು ಋಷಿಗಳೇ ಈ ಸಂಶಯ ನಿವಾರಣಕ್ಕೆ ಸಮರ್ಥರೆಂದು ಬೇಡಿಕೊಳಲಾಗಿ ಎದ್ಯಪಿ–ಅಂತರಂಗದಲ್ಲಿ ಶ್ರೀ ವಿಷ್ಣುವೇ ಸರ್ವೋತ್ತಮನೆಂದು ತಿಳಿದಾ ಗ್ಯ್ಯಾದರೂ, ದಾರಢ್ಯವಾಗಿ ಲೋಕದ ಅಜ್ಞಜನರಿಗೆ ತಿಳುಹಲು ಶಿವ ಬ್ರಹ್ಮರಲ್ಲಿ ಹೋಗಿ ಪರೀಕ್ಷಿಸಲು ಇವರಲ್ಲಿ ತಮೋರಜ ಗುಣಗಳ

ಪ್ರಾಚುರ್ಯವಿದೆ. ಸರ್ವೋತ್ತಮರಲ್ಲವೆಂದು ತಿಳಿದು ಶ್ರೀ ವಿಷ್ಣು ಲೋಕವಾದ ವೈಕುಂಠಕ್ಕೆ ಹೋಗಿ ಶ್ರೀ ಲಕ್ಷ್ಮೀಸಹಿತನಾದ ಕ್ರೀಡಾದಿ ಗುಣವಿಶಿಷ್ಠನಾದ ಶ್ರೀ ಹರಿಯ ವಕ್ಷಸ್ಥಳದಲ್ಲಿ (ಶ್ರೀಹರಿಯ ಸಂಕಲ್ಪ ದಂತೆ) ಒದೆಯಲು: ಭೃಗುಋಷಿಗಳ ಈ ನೀಚ ಕೃತ್ಯ ಮನಸಿಗೆ ತಾರದೇ, ಅಹೋ ಭೃಗುಋಷಿಗಳೇ ತಮ್ಮವು ಎಂಥ ಮೃದುವಾದ ಪಾದಗಳಿವು. ವಜ್ರಸದೃಶವಾದ ನನ್ನ ಕಠಿಣ ದೇಹಸ್ಪರ್ಶದಿಂದ ತಮ್ಮ ಪಾದಕ್ಕೆ ಬಹು ನೋವಾಗಿದೆ, ಎಂದು ಬ್ರಾಹ್ಮಣ ಕುಲಕ್ಕೆ ಗುರುದೊರೆ ಯಾದ ಭೃಗುಋಷಿಗಳ ಕಾಲು ಒತ್ತಿ ಅವರ ಪಾದದಲ್ಲಿರತಕ್ಕ ದೈತ್ಯನನ್ನು ಸಂಹರಿಸಿ ಭೃಗುಋಷಿಗಳ ಪೂಜೆಯನ್ನು ಮಾಡಿದನು. ಅಹೋ ಪರಮಾತ್ಮನ ವಿಚಿತ್ರವಾದ ಶಕ್ತಿ, ಎಂಥ ಕರುಣಾಶಾಲಿಯು ಪಾದ ತಾಡನ ನೀಚಕೃತ್ಯವಾದರೂ ಅದನ್ನು ಸಹಿಸಿ ಬ್ರಾಹ್ಮಣರಿಗೆ ಮನ್ನಿಸಿ ಅವರ ಅವಗುಣಗಳನ್ನೆಣಿಸದೇ, ಸನ್ಮಾನಿಸಿದನು. ಮತ್ತು ಅವರ ಪಾದದಲ್ಲಿದ್ದ ದೈತ್ಯನ ಸಂಹಾರವು. ಸಜ್ಜನ ರಕ್ಷಕ, ದುರ್ಜನ ಶಿಕ್ಷಕ ನೆಂಬೋ ಬಿರುದನ್ನು ವ್ಯಕ್ತಗೊಳಿಸಿದ. ಶ್ರೀ ಹರಿಯು ಸರ್ವೋತ್ತಮ ನೆಂದು ಡಂಗುರ ಹೊಯಿಸಿ ಸತ್ರಯಾಗವನ್ನು ಪೂರೈಸಿದರು. ಇದು ಶ್ವೇತವರಾಹಕಲ್ಪದಲ್ಲಿ– ನಡೆದ ಹರಿಯ ಲೀಲೆ.

## ಈ ಭೃಗುಋಷಿಗಳ ಮಹಿಮಾ ಏನು

ಮೂಲದಲ್ಲಿ ಇವರ ಉತ್ಪತ್ತಿ ಇವರ ಜ್ಞಾನ ಭಕ್ತ್ಯಾದಿಗಳ ಸ್ವರೂಪ ವೇನೆಂಬುದರ ವಿಚಾರ ಅತ್ಯಾವಶ್ಯವಾದುದು. ಈ ಭೃಗುಋಷಿಗಳು ತಾರತಮ್ಯದಲ್ಲಿ ನಾರದ ಋಷಿಗಳ ತರುವಾಯ ೧೫ನೇ ಕಕ್ಷದಲ್ಲಿರುವರು. ಅಗ್ನಿದೇವರು ದಕ್ಷಪ್ರಜೇಶ್ವರನ ಭಾರ್ಯಳಾದ ಪ್ರಸೂತಿದೇವಿಗೆ ಸಮಾನರು. ಈ ಮಹಾಋಷಿಗಳು ತತ್ವಾಭಿಮಾನಿ ದೇವತೆಗಳಲ್ಲಿರುವರು. ಮೂಲತಃ ಅಸೃಜ್ಯಾವಸ್ಥೆಯಲ್ಲಿ ಸಹ ಸಾಮಾನ್ಯಾಪರೋಕ್ಷಿಗಳು ಅಂದರೆ ತಮ್ಮ ಬಿಂಬರೂಪಿ ಹರಿಯನ್ನು ಸಾಮಾನ್ಯವಾಗಿ ಸದಾ ಕಂಡವರೇ ಆದರೂ ಸಾಧನದಿಂದ ವಿಶೇಷವಾಗಿ ತಮ್ಮ ಸ್ವರೂಪಾಭಿವ್ಯಕ್ತಿಯಂತೆ ಹರಿಯ ಸಂದರುಶನಾನಂದ ಹೊಂದುವರು. ಇವರಿಗೆ ೧೮ ಬ್ರಹ್ಮಕಲ್ಪ ಸಾಧನ.

" ಈ ಭೃಗುಋಷಿಗಳು ಸೂಕ್ಷ್ಮ ಸೃಷ್ಟಿಯಾದ ಬಹಿಬ್ರಹ್ಮಾಂಡದಲ್ಲಿ ಇವರ ಉತ್ಪತ್ತಿ ತೈಜಸ ರುದ್ರದೇವರು ಉಮೆಯಃ ದ್ವಾರ, ಇಂದ್ರ ದಕ್ಷ ಪ್ರಜೇಶ್ವರರ ದ್ವಾರ, ಸೋಮ ವರುಣನ ದ್ವಾರ ಶರೀರ ಉಳ್ಳಂಥ ಭೃಗು ಮುನೇಶ್ವರರು ಅಗ್ನಿಪ್ರಸೂತಿಗೆ ಸಮರು. ಇವರು ಪರಮಾತ್ಮನ ಆರಾಧನಿಗೆ ಒಮ್ಮಿಂದೊಮ್ಮೆ ಮನಸ್ಸು ಇಟ್ಟ ಕಾಲದಲ್ಲಿ ಹತ್ತದೆ ನೀತ ಗುರುವಾದ ದಕ್ಷಪ್ರಜೇಶ್ವರನ ಕರುಣಾ ಕೇಳಲು ನಿಮಗೆ ತಿಳಿದ ವೇದೋಕ್ತ ಗುಣಗಳನ್ನು ಉಪಸಂಹಾರ ಮಾಡುತ್ತ ಜ್ಞಾನನಿಷ್ಟರಾಗಿದ್ದರೆ ದೇವರು ಒಲಿದಾನೆನಲು, ಹೀಗೆ ಉಪದೇಶ ಮಾಡಿದಪ್ರಕಾರ ಆಚರಿಸಲು ಅನ್ನಮಯಾದಿ ಅಷ್ಟರೂಪಗಳು ಕ್ರಮಾತ್ ಉಪದೇಶದಂತೆ ಪರಮಾತ್ಮನ ಪ್ರತ್ಯಕ್ಷ ಕರಿಸಲು ಪರಮಾತ್ಮ ಪ್ರತ್ಯಕ್ಷನಾಗಿ, ನೀನು ಧನ್ಯನೆಂದು ಆ ಭೃಗುಋಷಿಯನ್ನು ವೇದದೃಷ್ಟನ್ನಮಾಡಿ, ಅಧಿಕ ವೇದೋಕ್ತ ಸ್ತುತ್ಯನಾಗಿ ನೀನು ದಾವ ವರ ಬೇಡುತ್ತಿದ್ದಿ, ವರವನ್ನು ಬೇಡು ಎನಲು, ಶ್ರೀಹರಿಯೆ **ನಿನ್ನ ಜ್ಞಾನದ ವಿನಹಾ ಸರ್ವಥಾ** ಇನ್ನೊಂದು ಒಲ್ಲೆನಲು, ಹಾಗೆ ಪರಮಾತ್ಮ ಒಡಂಬಟ್ಟು ಮಹಾ ಋಷಿಯನ್ನಾಗಿ ಮಾಡಿದ. ( ಮಹಾ ಜ್ಞಾನಿಯಾಗಿ ಮಾಡಿದ ) ಲೋಕಕ್ಕೆ ಜ್ಞಾನೋಪದೇಷ್ಟನಾಗು, ೧- ಲೋಕರಿಗೆ ಸಂದೇಹನಿವೃತ್ತ್ಯರ್ಥವಾಗಿ ಬ್ರಹ್ಮ ರುದ್ರರ ಅವಮಾನ ನೀನು ಮಾಡಿದರು ಪಾಪ ಬರಬ್ಯಾಡ. ೨- ಮುಂದೆ ನನ್ನ ವಕ್ಷಸ್ಥಳ ತಾಡನ ಮಾಡಿದ ಪಾಪಕ್ಕೆ ಜರಾನಾಮಕ ವ್ಯಾಧನಾಗಿ ನನ್ನಲ್ಲಿ ಬಾಣ ಹಾಕಿದರೆ ನಿನಗೆ ಸದ್ಗತಿ ಕೊಡುತ್ತೇನೆ. ಇಂಥಾ ಜ್ಞಾನ ನಿನಗೆ ಕೊಟ್ಟಿದ್ದೇನೆಂದನು. ೩- ದಾರು ನಿನ್ನ ಅನುಸರಿಸಿದರೆ ಅವರು ಪ್ರಾಜ್ಞರಾಗುವರು ಎಂದು, ಪರಮಾತ್ಮ ವರಕೊಟ್ಟ ಪ್ರಯುಕ್ತ **ಜ್ಞಾನಾರ್ಥವಾಗಿ ಇವರ ಪಾದಸ್ಮೃತಿ ಮಾಡಿದರೆ ನಿರ್ಮಲ ಜ್ಞಾನ** ಪ್ರಾಪ್ತಿಯಾಗುವದು.

ಭೃಗುಋಷಿಗಳ ಜ್ಞಾನ ಎಂಥದು ಎಂದರೆ, ೧- ಪರಮಾತ್ಮನ ವದ್ದು ಆತನ ಸಂಗಾತ ಪೂಜೆಗೊಂಬುವ ಜ್ಞಾನ ಎಂಥಾದ್ದೋ, ೨- ಕುಚ್ಛಿತ ಯೋನಿಯಲ್ಲಿ ವ್ಯಾಧನಾಗಿ ಬಾಣದಿಂದ ಗ್ರಾಸಾರ್ಥವಾಗಿ ಪರಮಾತ್ಮನಿಗೆ ಪ್ರಯೋಗ ಮಾಡಿ ಸದ್ಗತಿ ಐದಿದ ಜ್ಞಾನ ಎಂಥದೋ,

೩– ಸತ್ರ ಯಾಗದಲ್ಲಿ ಋಷಿಗಳಿಗೆ ನಾರದರು ಪರಮಾತ್ಮನ ನಿರ್ಧಾರಾರ್ಥವಾಗಿ ಭೃಗುಮುನೀಶ್ವರರಿಗೆ ಮೊರೆ ಹೊಕ್ಕರೆ ತಿಳಿಸ್ಯಾನು ಎಂಬೊ ಜ್ಞಾನ ಎಂಥಾದೋ, ೪– ದಕ್ಷಪ್ರಜೇಶ್ವರನ ಯಜ್ಞದಲ್ಲಿ ರುದ್ರದೇವರ ನಿಮಿತ್ಯ ಮಹಾ ದ್ರೋಹದಿಂದ ಯಜ್ಞವಾಟ ಹತವಾದವ್ಯಾಲೆ, ಸಾಕ್ಷಾತ ಬ್ರಹ್ಮದೇವರು ಬಂದು, ರುದ್ರದೇವರನ ಶಾಂತಮಾಡಿ ಯಜ್ಞ ರಕ್ಷಿಸಿ ಪುನಹಾ ಪರಮಾತ್ಮನನ್ನು ದಕ್ಷಪ್ರಜೇಶ್ವರನಿಗೆ ದರ್ಶನ ಮಾಡಿಸುವ ಜ್ಞಾನ ಎಂಥಾದೋ, ೫– ಪರಮಾತ್ಮನ ನಿರ್ಧಾರ ಮಾಡುವ ನಿಮಿತ್ಯ ನಿನ್ನಕಿಂತ ಸೋತ್ತಮರಾದ ಬ್ರಹ್ಮದೇವರಿಗೆ ವಂದಿಸದೇ ತುಚ್ಛೀಕರಿಸಿದ ಜ್ಞಾನ ಎಂಥಾದೋ, ೬– ತತ್ವಾಭಿಮಾನಿಗಳಿಗೆ ಇಹೊ ಜ್ಞಾನ ಎಂಥಾದೋ ? ಇಂಥಾ ಸುಜ್ಞಾನವುಳ್ಳ ಭೃಗುಮುನೀಶ್ವರರ ಮಹತ್ಮೆ ಆರಿಂದ ವರ್ಣಿಸಲಿಕ್ಕೆ ಶಕ್ಯ. ಇವರಿಗೆ ವೈಕುಂಠಲೋಕದಲ್ಲಿರುವ ಸಮಗ್ರ ಭೂಭಾಗದಲ್ಲಿ ಹೋಗಲಿಕ್ಕೆ ತಡೆಯಿಲ್ಲ. ಇಂಥಾ ಭೃಗು ಮುನೀಶ್ವರರು ಎನ್ನಮೇಲೆ ಪೂರ್ಣಾನುಗ್ರಹಮಾಡಿ ಸುಜ್ಞಾನಾಬ್ಧಿಯೊಳಗೆ ಮುಳುಗಿಸಲಿ " ಎಂದು ಅಪರೋಕ್ಷ ಜ್ಞಾನಿಗಳಾದ ರಘುಪತಿ ವಿಠ್ಠಲರು ಆಧ್ಯಾತ್ಮ ಮಾಲೆಯಲ್ಲಿ ನಿರೂಪಿಸಿರುವರು. ಆಧ್ಯಾತ್ಮಮಾಲಾ ಭಾಗ (೧) ಪುಟ (೮೭–೮೮–೮೯).

ಹೀಗೆ ಜ್ಞಾನಿಗಳಾದ ಭೃಗುಋಷಿಗಳ ಮಹತ್ಮೆ. ಇಂಥ ಜ್ಞಾನಿ ಶ್ರೇಷ್ಠರೂ, ತತ್ವಾಭಿಮಾನಿಗಳಲ್ಲಿರುವರು. ಸದಾ ಸರ್ವದಾ ಸಜ್ಜೀವಿಗಳ ಹೃದಯದಲ್ಲಿ ನಿಂತು ಜ್ಞಾನವನ್ನೀಯುತ್ತಾರೆ. ಇದು ನಾರದ ಭೃಗು ಋಷಿಗಳ ವ್ಯಾಪಾರ. ತ್ರಿಕಾಲಜ್ಞರೂ, ಬಹಿಬ್ರಹ್ಮಾಂಡದಲ್ಲಿರುವ ಮನಸ್ಸ ತತ್ವಪರಿಯಂತ ವ್ಯಾಪ್ತಿ ಅಲ್ಲಿರುವ ಭಗವದುಪಾಸನೆಗೈವವರು ವ್ಯಾಪೋಪಾಸಕರು. " ಋಷಯೋಂತಃ ಪ್ರಕಾಶ " ಎನ್ನುವಂತೆ ಅಂತರಂಗ ಜ್ಞಾನಿಗಳು ಅವರವರ, ಆಯುರ್ಮರ್ಯಾದೆ ಬಲ್ಲವರು. ಶ್ರೀ ವಾಯುದೇವರ ಅನುಗ್ರಹಬಲದಿಂದ ಜ್ಞಾನಾಯುಗಳನ್ನು ಕೊಡುವ ಸಮರ್ಥರು. ಜಡಪ್ರಕೃತಿಗತ ಪಂಚಮಹಾಭೂತಗಳನ್ನು ತಮ್ಮ ವಶದಲ್ಲಿಟ್ಟುಕೊಂಡವರಿಗೆ ಲೋಕದೃಷ್ಟ್ಯಾ ಮಹಾಮಹಿಮೆಗಳನ್ನು ತೋರಿಸುವದೇನಚ್ಚರ.

ಇಂಥ ಮಹಿಮೆಯುಳ್ಳ ಭೃಗು ಮಹಾಋಷಿಗಳು ಶ್ವೇತ ವರಾಹ ಕಲ್ಪದಲ್ಲಿ ಶ್ರೀ ಬ್ರಹ್ಮದೇವರ ತ್ವಚಾದಿಂದ ಉತ್ಪನ್ನರಾದರು. ಇವರಿಗೆ ಪತ್ನಿ "ಖ್ಯಾತಿ" ಎಂಬುವಾಕೆಯಲ್ಲಿ 'ಧಾತಾರ, ವಿಧಾತಾರ' ಎಂಬ ಇಬ್ಬರು ಗಂಡುಮಕ್ಕಳು, 'ಶ್ರೀಯಾ' ಎಂಬುವಳು ಹೆಣ್ಣುಮಗಳಿದ್ದಳು. "ಭೃಗುಃಖ್ಯಾತ್ಯಾಂ ಮಹಾ ಭಾಗಾಃ ಪತ್ನ್ಯಾಂ ಪುತ್ರಾನ್ನ ಜೀ ಜನತ್" "ಧಾತಾರಂ ವಿಧಾತಾರಂ ಶ್ರೀಯಂಚ ಭಗವತ್ಪ್ರಿಯಾಂ" ಎಂದು ತೃತೀಯ ಸ್ಕಂದ ಭಾಗವತ ೪ನೇ ಸ್ಕಂದ ೪೩ನೇ ಶ್ಲೋಕವಿದೆ. ಶ್ವೇತ ವರಾಹ ಕಲ್ಪದಲ್ಲಿ ಪುಟ್ಟಿದ ಈ ಭೃಗುಋಷಿಗಳೇ ಪರಮಾತ್ಮನ ವಕ್ಷ ಸ್ಥಳಕ್ಕೆ ಒದೆದು ಪರಮಾತ್ಮ ಗುಣಪೂರ್ಣ ಸರ್ವೋತ್ತಮನೆಂದು ಲೋಕಕ್ಕೆ ಬೀರಿ ಮಹತ್ಪುಣ್ಯಕರವಾದ ಕಾರ್ಯವನ್ನು ಮಾಡಿದರು. ಇದು ಪುಣ್ಯಬೀಜ. ಪಾಪ ಹೇಗಂದರೆ, ನಿಷ್ಕಲ್ಮಷರಾದ ಭೃಗುಋಷಿ ಗಳು ಶ್ರೀಹರಿ ಸರ್ವೋತ್ತಮತ್ವ ತೋರುವದಕ್ಕೆ ಮಾಡಿದ್ದು ಪುಣ್ಯಬೀಜ. ಪರಮಾತ್ಮನ ವಕ್ಷಸ್ಥಳಕ್ಕೆ ಒದೆದುದು ಪಾಪ. ಈ ಪಾಪದಿಂದಲೇ ದ್ವಾಪರದಲ್ಲಿ ಆ ಭೃಗುಋಷಿಗಳೇ 'ಜರಾ' ನಾಮಕ ವ್ಯಾಧನಾಗಿ ನೀಚ ಯೋನಿಯಲ್ಲಿ ಜನಿಸಿದಾಗ್ಯೂ, ಆತನಿಗೆ ಜ್ಞಾನವಿತ್ತು. ಶ್ರೀಕೃಷ್ಣದೇವರು ಪರಂಧಾಮಕ್ಕೆ ಹೋಗುವಾಗ ಗಂಗಾತೀರ ವಡ್ಡಿ ಜಗನ್ನಾಥ ಹತ್ತಿರ ಪಿಪ್ಪಲವೃಕ್ಷದ ಬುಡದಡಿಯಲ್ಲಿ ಮಾನವರಂತೆ ಮಲಗಿ ಕಾಲು ಮೊಳಕಾಲ ಮೇಲಿಟ್ಟು ಮಲಗಿದಾಗ ಕೆಂಪು ಮೃದುವಾದ ಪಾದಕ್ಕೆ ಇದು ಒಳ್ಳೇ ಪಕ್ಷಿ ಇದೆ ನನ್ನಗೆ ಭಕ್ಷಣಕ್ಕೆ ಯೋಗ್ಯವಿದೆಂದು ಭಾವಿಸಿ ಬಾಣವನ್ನು ಹಾಕಿದನು. ಪಕ್ಷಿ ದೊರಕಿತೆಂಬೊ ಆಶೆಯಿಂದ ಸಮೀಪ ಬಂದು ಶ್ರೀ ಕೃಷ್ಣಪರಮಾ ತ್ಮನ ಸಂದರುಶನದಿಂದಲೇ ಜ್ಞಾನ ಪುಟ್ಟಿತು. ಸಾಷ್ಟಾಂಗ ನಮನಮನ ಮಾಡಿದನು. ಇಂಥ ಪಾಪ ಕರ್ಮರತನಾದ ವ್ಯಾಧನಿಗೆ ಶ್ರೀ ಹರಿಯು ವಿಮಾನದಲ್ಲಿ ಕುಳ್ಳಿರಿಸಿ ಸದ್ಗತಿಯಿತ್ತನು. ಇದಕ್ಕೆ ಶ್ರೀಮದಾಚಾರ್ಯರು ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ ೩೨ನೇ ಅಧ್ಯಾಯದಲ್ಲಿ ಹೇಳಿದ್ದೇನಂದರೆ, "ಅಥಾಸತಃ ಪಿಪ್ಪಲ ಮೂಲ ಈಶತು । ರುರುಸ್ಥಿತಂ ಪಾದತಲಂ ಸುತಾಮ್ರಂ ॥ ದೃಷ್ಟ್ವಾ ಜರಾ ನಾಮಸಸರ್ಜ ಶಲ್ಯಂ ಭಕ್ತ್ಯೋಪ್ಯಲಂ ರೋಹಿತಂ ಶಂಕಮಾನಃ ॥೨೦॥ ಅಚ್ಛೇದ್ಯಾs ಭೇಧ್ಯೇ

ದೇಹಸ ಶಲ್ಯೋಪಾದಮು ಸ್ಥಿತೆ|| ಸಮೀಪ ಮಾಗತೋ ವ್ಯಾಧೋ ದೃಷ್ಟ್ವಾಭಿತೋಪತತ್‌ದ್ಭುಃ ||೨೧|| ವಿಪ್ರವಾಕ್ಯಂ ಮಾನಯಾನಃ ಕಾರ ಯಿತ್ವಾಮುನಾಹರಿಃ ಪಾಪಂ ಮಾಂಜಹಿ ದೇವೇತಿಯಾಚಂತ ಮನಯು ದ್ದಿನಂ ||೨೨|| ಪಾದಪ್ರಹಾರ ದೋಷೇಣತಂ ಭೃಗುಂವ್ಯಾಧತಾಂಗತಂ|| ಪಶ್ಚಾತ್ತಾಪೇನ ಭಕ್ತ್ಯಾಚ ಸುಪ್ರೀತಸ್ತ್ವಚ್ಛರೀರಿಣಂ ||೨೩|| ಸ್ವಾಜ್ಞಾ ಪ್ರಾಪ್ತ ವಿಮಾನೇನ ದಿವ್ಯಂ ನಿನ್ಯೆ ಜನಾರ್ದನಃ || ನೀಚಾಯೋನಿರ್ನೀಚ ನಿ ಚಕರ್ಮಾಪ್ತಂ ನೀಚಕರ್ಮತಃ ||೨೪|| ಅದುಷ್ಟತ್ವಾತ್ತು ಮನಸೊ ಭಕ್ತಿಲೋ ಪೋನಚಾಪ್ಯ ಭೂತ್ || ಭೃಗೋರತ್ರಾ ಬುದ್ಧಿಪೂರ್ವಂ ನಾತಿದೋಷಾ ಕೃದಪ್ಯಭೂತ್ ||೨೫||.

ಸಾರಾಂಶವೇನಂದರೆ, ಭೃಗುಋಷಿಗಳು ಶ್ರೀ ಹರಿಯ ವಕ್ಷಸ್ಥ ಲಕ್ಕೆ ಪಾದಪ್ರಹಾರ ದೋಷದಿಂದ ಜರಾನಾಮಕವ್ಯಾಧನಾಗಿ ಜನಿಸಿ ದನು. ಹಿಂದೆ ಯಾದವ ಕುಲ ನಾಶಮಾಡುವ ಮುಸುಲವನ್ನು ಹೆರೂ ವಳೆಂಬ ವಿಪ್ರಶಾಪದಿಂದ ಬಂದುದನ್ನು ಖರೆ ಮಾಡಲು ಮನಿಕೆ ಮಸೆ ಯಲು ಆ ಪುಡಿಗ ಬೆಳೆದಿತು, ಯಾದವರಿಗೆ ಪರಸ್ಪರ ಕಲಹ ನಾಶಕ್ಕೆ ಕಾರಣ ಆ ಮನಿಕೆಯಲ್ಲಿ ಉಳಿದ ಉಕ್ಕಿನತುಂಡು ಸಮುದ್ರದಲ್ಲೆ ಬಿಸಾ ಟಲು ಮೀನ ನುಂಗಿ ಈ ಜರಾವ್ಯಾಧನಿಗೆ ಮೀನ ಸಿಕ್ಕು ಆ ಮೀನ ಹೊಟ್ಟೆಯಲ್ಲಿ ಇರುವ ಮನಿಕೆಯ ಅಣಸಿನ ತುಂಡು ಕಬ್ಬಿಣದಿಂದಾದ ಭಾಗವು ಶ್ರೀಕೃಷ್ಣ ದೇವರ ಅಚ್ಛೇದ್ಯವಾದ ದೇಹಕ್ಕೆ ತಗಲಿದರೂ ಏನು ಮಾಡಲಿಲ್ಲ. ಪಶ್ಚಾತ್ತಾಪದಿಂದ ವ್ಯಾಧನು ನಮಸ್ಕಾರಗೈದನು ಶ್ರೀಹರಿಯು ಭೃಗುಋಷಿಯು ಮತ್ತು ಈ ವ್ಯಾಧನು ಯಾವ ದುಷ್ಟ ಕಾರ್ಯವನ್ನು ಮನಸ್ಸಿಗೆ ತಾರದೆ ಪಾದಪ್ರಹಾರ ಮಾಡಿದ್ದು, ನೀಚ ಯೋನಿಯಲ್ಲಿ ಜನಿಸಿ ಹಿಂಸಾರೂಪವಾದ ಜೀವ ಹಿಂಸಾಮಾಡುವ ಕೃತ್ಯ ವ್ಯಾಧನಿಗೆ ಸ್ವಧರ್ಮವಾದುದು. ಪರಮಾತ್ಮನ ಪಾದವೆಂದು ತಿಳಿಯದೆ ಅಜ್ಞಾನದಿಂದ ಪಕ್ಷಿ ಎಂದು ಭಾವಿಸಿ ಬಾಣಬಿಟ್ಟದ್ದು, ಇದು ಅಜ್ಞಾತ ಪಾಪವೆಂದು ತಿಳಿದ ಸರ್ವಜ್ಞನು. ಇವನು ಅದುಷ್ಟ ಮನಸ್ಕನಾಗಿರು ವನು. ನನ್ನ ಅನುಗ್ರಹದಿಂದ ನೀಚಯೋನಿ ನೀಚ ಕೃತ್ಯವನ್ನು ಮಾಡಿ ದಾಗ್ಯೂ ಇವನಲ್ಲಿ ಭಕ್ತಿಲೋಪವಿಲ್ಲ. ಬುದ್ಧಿಪೂರ್ವಕವಾಗಿ ಇವನು

ಕೆಟ್ಟ ಕೆಲಸ ಮಾಡಿದವನಲ್ಲವೆಂದು ತನ್ನ ದರ್ಶನ ಮಾಡಿದ ಪುಣ್ಯಾತ್ಮ ನಿಗೆ ವಿಮಾನವನ್ನು ತರಿಸಿ ಸ್ವರ್ಗಲೋಕಕ್ಕೆ ಕಳುಹಿದನೆಂದು ಶ್ರೀಸರ್ವ ಜ್ಞರ ಉಕ್ತಿನಂಬಿರಿ. ಅಹೋ ಎಂಥ ಸೂಕ್ಷ್ಮ ಧರ್ಮವಿದು. ಶ್ರೀ ಹರಿಯು ತನ್ನವರು ಮಾಡ್ದ ಮಹಾ ಪಾಪವನ್ನು ಲೆಕ್ಕಿಸವೆ ಅದುಷ್ಟ ಮನಸ್ಕರಾದವರಿಗೆ ಸ್ವರ್ಗವನ್ನು ಕೊಟ್ಟನು. ಎಂಥ ಕರುಳಾಳು. ಭೃಗಋಷಿಗಳು ಪುಣ್ಯಬೀಜ ಪಾದದಿಂದ ನೀಚಯೋನಿಯಲ್ಲಿ ಜನಿಸಿ ದಾಗ್ಯೂ ವ್ಯಾಧನ ಸ್ವಧರ್ಮವಾದ ಹಿಂಸಾರೂಪ ಅಜ್ಞಾತ ಪಾಪ ವಾದರೂ, ಶ್ರೀಕೃಷ್ಣನ ಸಮೀಪಕ್ಕೆ ಹೋಗಿ ನೋಡುವ ಮಾತ್ರದಿಂದಲೇ ಶ್ರೀಹರಿ ಎಂದು ತಿಳಿದು ಪಶ್ಚಾತ್ತಾಪದಿಂದ ನಮಿಸಲು ಆ ಅಜ್ಞಾತ ಪಾಪವನ್ನೂ ನೀಚಯೋನಿಯನ್ನೂ ಕಳೆದು ವಿಮಾನದಿಂದ ಸ್ವರ್ಗಕ್ಕೆ ಕಳುಹಿದನು ಆದರೆ ವ್ಯಾಧಯೋನಿಯಲ್ಲಿ ಜನಿಸಿದ ಕಾರಣ ಜ್ಞಾನ ಕಾರ್ಯವಾದ ಭಗವಂತನ ಸ್ತೋತ್ರಮಾಡುವದು ವ್ಯಾಧಯೋನಿಯಲ್ಲಿ ಸಾಧಿಸಲಿಲ್ಲ.

ದೇವತೆಗಳು ಸಾಂಶರು ಒಂದೇ ಕಾಲದಲ್ಲಿ ತಮ್ಮ ಅಂಶಗಳಿಂದ ಭಗವಂತನ ಸೇವಾರೂಪವಾದ ಅನೇಕ ದೇಹ ಧಾರಣ ಮಾಡಿ ಪ್ರಾರಬ್ಧ ಅನುಭೋಗಿಸುತ್ತ ಪುಣ್ಯಕಾರ್ಯವನ್ನು ಮಾಡಿ ಲೋಕಕ್ಕೆ ಹಿತಕರರಾಗಿರುವರು. ಆ ಪುಣ್ಯಾಂಶವ ಒಂದು ಅಂಶದಿಂದ ಈ ಭೃಗು ಋಷಿಗಳು ತ್ರೈಯಲಿರಾ **ಸುರಲೀಲನೆಂಬೊಕಪಿ** ಯಾಗಿ ಶ್ರೀರಾಮನ ಸೇವೆಯನ್ನು ಮಾಡಿದನು. ದ್ವಾಪರದಲ್ಲಿ **ನಿಕಂಪನೆಂಬೊ** ಯಾದವ ನಾಗಿ ಶ್ರೀಕೃಷ್ಣನನ್ನು ಸೇವಿಸಿದೆನೆಂದು ದಾಸರೇ ಸ್ವತಃ ಸುಳಾದಿ ನಂಬರ (೪) ಪುಟ ೫ ತ್ರಿವಿಡಿ ತಾಳದಲ್ಲಿ "ಸುರಲೀಲನಾಗಿ ನಿಕಂಪ ನೆಂದೆನಿಸಿ ದ್ವಾಪರದಲ್ಲಿ ಜನಿಸಿದೆ। ಕೆಲವು ದಿನ ಬಿಡದೆ। ತರುವಾಯ ವರ ಕಲಿಯುಗದಲ್ಲಿ– ಈಗ ಜನನ ಮರಣವಾಗುತ ಬಂದು ಧರೆಯೊ ಳಗೆ ಮೆರೆದು। ಹರಿಕೃಪೆಯಿಂದಲಿ ದಾಸರ ಸದನದೊಳಗೆ। ತುರು ಕರುವು ಆಗಿ ಜನಿಸಿದೆನೊ ಸುಕೃತದಿಂದ। ಸುರಿಪತಿಸ್ಥ ವಿಷ್ಣುವಿಜಯ ವಿಠ್ಠಲನ್ನದಾಸರು ಪೇಳಲು ಕವನ ಎರಗಲು ಶ್ರವಣಕ್ಕೆ" ಎಂದು ಹೇಳಿದ್ದಾರೆ. ಕಲಿಯುಗದಲ್ಲಿ ಜನನ ಮರಣವಾಗುತ್ತ ಹಿಂದೆ ವ್ಯಾಧ

ನಾದಾಗ್ಗೆ ಶ್ರೀಕೃಷ್ಣ ಸಂದರ್ಶನ ಪಾಪವಿಲ್ಲ ಸುಕೃತ ಮನರಾದ ಕಾರಣ ಇಂಥ ಪುಣ್ಯದಿಂದ– ಶ್ರೀ ಪುರಂದರ ದಾಸರ ಮನೆಯಲ್ಲಿ ಆಕಳ ಕರುವು ಆಗಿ ಹುಟ್ಟಿದರು. ಸತ್ಪುರುಷರ ಮನೆಯಲ್ಲಿ, ಗೋ ಜನ್ಮವಾದರೂ ಉತ್ತಮವಾದುದು. ಶ್ರೀ ಪುರಂದರದಾಸರು ಶ್ರೀಹರಿಯ ಗಾಯನ ಮಾಡುವ ಶಬ್ದವು ನಿತ್ಯ ಕಿವಿಗೆ ಬೀಳಹತ್ತಿತು.

ಮುಂದೆ ಅಟ್ಟತಾಳದಲ್ಲಿ ಪುರಂದರದಾಸರು ಹೇಳತಕ್ಕ ಕವನ ರೂಪವಾದ ಶ್ರೀ ಹರಿಯ ಕಥಾ ಶ್ರವಣಕ್ಕೆ ಬೀಳಲು, ಆಕಳ ಕರುವಾದ ಪಶು ಜನ್ಮವಾದರೂ, ಉತ್ತಮ ಜೀವ ದೇಹದಲ್ಲಿದ್ದ ಕಾರಣ ಆ ಭೃಗು ಋಷಿಗಳಿಗೆ ಪೂರ್ವಜನ್ಮ ಜ್ಞಾನವಿತ್ತೆಂದೆ ನಿಶ್ಚಯ. ಇಂತಹ ಶ್ರವಣ ಫಲದಿಂದ ಮುಂದೆ ಭೂಮಿಯೊಳಗೆ ಎರಡು ಅವನಿಸುರರೆಂದರೆ ಬ್ರಾಹ್ಮಣ ದೇಹವನ್ನು ಧರಿಸಿದೆನು ಎಂದು ಹೇಳಿದ್ದಾರೆ. ಇದೇ ವಿಷಯವನ್ನೆ ಶ್ರೀ ದಾಸರು ಶ್ರೀ ಪುರಂದರರಾಯರ ಸ್ತೋತ್ರದಲ್ಲಿ "ಶರಣು ಶ್ರೀ ವ್ಯಾಸಮುನಿಚರಣಾಬ್ಜಭೃಂಗ" ಎಂಬುವ ಪದವೇನು ನುಡಿಯಲಿ– ಪುರಂದರ ದಾಸರ ನಾಲ್ಕು ಜನ ಮಕ್ಕಳು ಅಂಶವನ್ನು ಹೇಳಿರುವರು. "ವರದಪ್ಪನೇ ಸೋಮ, ಗುರುರಾಯ ದಿನಕರನು, ಗುರು ಮಧ್ವಪತಿಯು 'ಭೃಗು' ಅಭಿನವನೆ ಜೀವ, ವರತನಯ ನಾಲ್ವರನು ಪಡೆದು ಉಪದೇಶಿಸಿ ಪರಮಜ್ಞಾನಿಗಳ ಮಾಡಿ" ಎಂದು ಹೇಳಿದ್ದಾರೆ. ಆ ಆಕಳು ಕರುವಿನ ಜನ್ಮವೃತ್ತಿ ಆದ ಮೇಲೆ ಭೃಗುಋಷಿಗಳೆ, ಗುರು ಮಧ್ವಪತಿ ವಿಠ್ಠಲರೆಂಬುವರೆ ಪುರಂದರದಾಸರ ಮಕ್ಕಳಾಗಿ ಜನಿಸಿದರು. ಈ ವಿಷಯವನ್ನೆ ಹಯವದನ ವಿಠ್ಠಲರೇ ಮೊದಲಾದ ದಾಸರು ವರ್ಣಿಸಿದ್ದಾರೆ. ಅಲ್ಲದೆ ಮುಂದಿನ ಜನ್ಮದ ವೃತ್ತಾಂತವನ್ನೇ ಶ್ರೀ ದಾಸರು ಮೇಲ್ಕಾಣಿಸಿದ ಪದ ೭ ನೇ ನುಡಿಯಲ್ಲಿ "ಎಂತು ವರ್ಣಿಸಲಿ ಎನಗಳವಲ್ಲ ಧರೆಯೊಳಗೆ। ಸಂತತಿ ನೆಲಸಿದಂತೆ ಕಾವ್ಯ ವನೆ ಸ್ಥಾಪಿಸಿ ॥ ಸಂತಾನದೊಳಗೆ ಗುರು ಮಧ್ವಪತಿ ದಾಸರನ ಸಂತರಿ ಸಿಧರಿಗೆ ತೋರಿ" ಮತ್ತು ಆವ ಜನುಮದಿ ಸ್ನಾನ ಮಾಡಿದೆನೋ ಎಂಬುವ ಸುಳಾದಿಯ ತ್ರಿವಿಡಿ ತಾಳದಲ್ಲಿ "ದಾಸರು ತಮ್ಮ ಸುತ ರೊಡನೆ ವಿರಚಿಸಿ, ಗುರು ಪುರಂದರ ವರದ ಅಭಿನವ, ಗುರು ಮಧ್ವ

ಪತಿ ಎಂಬಾಂಕಿತರಿಂದ ವಿವರಣೆನಾಡಿ ಲೋಕವನು ಉದ್ಧರಿಸೆ। ಅವರವರು ಎಲ್ಲ ಅತಿ ದಯಾಪರರಾಗಿ, **ಭವಿಷ್ಯೋತ್ತರ ತಿಳಿದು ಎನಗೆ ಒಂದು ಕವನಕ್ಕೆ ನೆಲೆ**ನಾಡಿ ಪೋಗಿದ್ದದರಿಂದ **ಹವಣೆ ತಿಳಿದೆನೊ ಗುರುಗಳ** ಕರುಣದಿಂದ" ಎಂದು ಆ ಪುರಂದರ ದಾಸರ ಅನುಗ್ರಹದಿಂದಲೇ ಅವರು ತಮ್ಮ ವಂದಂಶ ಎನ್ನಲ್ಲಿರಿಸಿ ಕವನ ರೂಪವಾದ ಸಂತಾನನಿಲ್ಲಿಸಲು ಆ ಗುರು ಮಧ್ವಪತಿಗಳಾದವರನ್ನೇ ಎನ್ನನ್ನಾಗಿ ಪುಟ್ಟಿಸಿದ ಕರುಣಾಳುಗಳು ಅವರ ಈ ಇಂಗಿತವನ್ನು ಎನಗೆ ತಿಳಿಸಿದ್ದಾರೆಂದು ಆ ಗುರುಗಳ ಮಹಿಮೆ ತುಂಬಾಕೊಂಡಾಡಿರುವರು. ಮತ್ತು ದಾಸರು ದಾಸರ ಸುತರು ನಾಲ್ವರ ಮುಂದೆ ಎಂಬುದರಲ್ಲಿ "ದೇಶದೊಳಗೆ ತಮ್ಮ ದಾಸ ಪುಟ್ಟುವನೆಂದು ಲೇಸಾಗಿ ಡಿಯುವನ್ನು ಸೂಸಿ ಕೇವಲವಾಗಿ ಪೋಷಿಸಬೇಕೆಂದು ಏಸುಪರಿಯಲ್ಲಿ ಎಂದು ಪೇಳಿರುವರಲ್ಲದೆ ಗೋತ್ರ ಪ್ರವರೋಚ್ಚಾರಣೆ ಎಂಬ ಸುಳಾದಿಯಲ್ಲಿಯೂ ತಂದೆ ಮಕ್ಕಳಲ್ಲಿರುವ ಸಂಬಂಧ ಅಂಶ ಕವನ ಇತ್ಯಾದಿ ಬಹು ವಿಸ್ತಾರವಾಗಿ ವರ್ಣಿಸಿರುವರು. ಶ್ರೀ ವಿಜಯ ದಾಸರ ಆತ್ಮಾನುಭವ ಪದ ಸುಳಾದಿಗಳೇ ಸಾಕಷ್ಟು ಪ್ರಮಾಣವಾಗಿವೆ. ಅವರು ಭೃಗುಋಷಿಗಳಂಶವೆನ್ನುವದಕ್ಕೆ ಲೇಶವಾದರೂ ಸಂದೇಹವಿಲ್ಲ. ಶ್ರೀ ಮೋಹನ ದಾಸರು ಸಹ "ಭೂಸೂರ ಗುರುದೊರೆ" ಎಂದು ಬ್ರಾಹ್ಮಣ ಕುಲಾಭಿಮಾನಿ ಭೃಗುಋಷಿಗಳು. ಸಂತತ ನಮಗೆ ಜ್ಞಾನಪ್ರದರೆಂದು ವರ್ಣಿಸಿದ್ದಾರೆ. ಶ್ರೀ ವೇಣುಗೋಪಾಲರು "ಪುರಂದರದಾಸರಾಯರ ಕಾಲದಲ್ಲಿ ಗುರು ಮಧ್ವಪತಿಯೆಂಬ ಪೆಸರ ಧರಿಸಿದ್ದು ಚೀಕನ ಬರಿ ವಿಗ್ರಾಮದಿ ಪುಟ್ಟಿಸುರನದಿ ಮುಖತೀರ್ಥಯಾತ್ರೆಯಾ ವಿರಚಿಸಿ ಬಹುಚಿತ್ರ ಚರಿತೆಯ ತೋರಿದ ವಿಜಯದಾಸರ ಎಂದು ವರ್ಣಿಸಿದ್ದಾರೆ. ನಿಜವಾಗಿಯೂ ಭೃಗುಋಷಿಗಳ ಅಂಶವು. ಅವತರಿಸಿದ ದೇಶ.

ಇನ್ನು ಕೃಷ್ಣಾ, ತುಂಗಾ ನದಿಗಳ ಮಧ್ಯದೇಶವಾದ ಕನ್ನಡ ನಾಡು ಪವಿತ್ರವಾದುದಾದರೂ "ರಾವಣನ ಹೊಲಿಗೇರಿ" ಎಂಬ ಅಜ್ಞರ ನಾಣ್ಣುಡಿ, ಪ್ರಸಿದ್ಧವಾಗಿದೆ. ಇದರಲ್ಲಿ ಕೇವಲ ಮೌಢ್ಯ ಜನರ ಪಂಗಡಗಳೇ ಬಹಳ. ಕಲಿಯುಗದಲ್ಲಿ ಇಂಥ ಜನರ ಉದ್ಧಾರ

ಗೋಸುಗ, ಉಮಾಪತಿಯಾದ ಶ್ರೀ ಶಂಕರನು ಲೋಕಕ್ಕೆ ಮಂಗಳ ಕರವಾಗಲೆಂದು ಆದಿಶಿಲಾಕ್ಷೇತ್ರದಲ್ಲಿ ತಪಸ್ಸು ಮಾಡಲು ಶ್ರೀಹರಿಯು ನಾನು ಈ ದೇಶದಲ್ಲಿ ಅವತರಿಸಿ ಜನರುದ್ಧಾರಗೈಸುವೆನು. ನೀವೆ ಲ್ಲರೂ ನನ್ನ ಸೇವಾರ್ಥವಾಗಿ ಪರಿವಾರತ್ವೇನ ಅಂಶತ್ವೇನ ಅವತರಿಸಿ ಸಜ್ಜನರನ್ನು ಕಾಪಾಡಿರೆಂದು ರಾಯಚೂರ ಜಿಲ್ಹೆ ಗದ್ವಾಲ ಸಂಸ್ಥಾ ನಕ್ಕೆ ಸೇರಿದ– ಮೊದಲು ಕಲ್ಲು ಎಂಬ ಗ್ರಾಮದ, ಅಟವಿಯಲ್ಲಿ ಗುಡ್ಡದ ಒಂದು ಶಿಲೆಯಲ್ಲಿ, ಸ್ವಯಂವ್ಯಕ್ತನಾಗಿ ಶ್ರೀ ವೆಂಕಟೇಶ ನಾಮದಿಂದ ಒಡಮೂಡಿದನು. ಆದಿಶಿಲಾಕ್ಷೇತ್ರವಾದಿತು. ಕೆಲವು ದೇವತೆಗಳು ಅವತರಿಸಿ ಈ ಕನ್ನಡ ನಾಡನ್ನುದ್ಧರಿಸಿದರು. ಇದೇ ಕೇವಲ ಅಂತರಂಗದ ಗುಟ್ಟು, ಬರಿಯ ಮಾತಲ್ಲ. ಆದಿಶಿಲಾಕ್ಷೇತ್ರ ಮಹತ್ಮೆಯಲ್ಲಿ ಬ್ರಹ್ಮಾಂಡ ಪುರಾಣದ ವಚನವು ಇದೆ. ಹೀಗೆ ಇದೇ ರಾಯಚೂರ ಜಿಲ್ಹೆಯಲ್ಲಿಯೇ ಶ್ರೀ ವಿಜಯದಾಸಾರ್ಯರು ಮೊದ ಲಾದ ಪ್ರಭೃತಿಗಳ ಅವತಾರಗೈದು ಸಜ್ಜನರುದ್ಧರಿಸಿದ್ದೆ ಸಾಕ್ಷಿ. ಶ್ರೀ ಪುರಂದರದಾಸರು ಉತ್ತರ ದೇಶವನ್ನು ಬಿಟ್ಟು, ದಕ್ಷಿಣ ವಾರ ಣಾಸಿ ಎನಿಸುವ ಹಂಪಿಗೆ ದಿಗ್ವಿಜಯಮಾಡಿದರು. ಈ ಹಂಪೆಗೆ ೪೦ ಯೋಜನ ದೇಶದ ಮಧ್ಯದಲ್ಲಿಯೇ ಶ್ರೀ ವಿಜಯ ದಾಸರು ಭಾಗಣ್ಣದಾಸರು, ಗುರುಗೋಪಾಲದಾಸರು, ವರದ ಗೋಪಾಲ ದಾಸರು, ಶ್ರೀ ಶ್ರೀ ವ್ಯಾಸತತ್ವಜ್ಞರೂ, ಶ್ರೀ ಜಗನ್ನಾಥದಾಸರು, ಶ್ರೀ ಪ್ರಾಣೇಶದಾಸರು ಮೊದಲಾದವರು ಅವತರಿಸಿದ ಪುಣ್ಯ ಭೂಮಿ. ಇದು ದೇಶ ಪ್ರಶಂಸನೆ. **ದಾಸರು ಜನ್ಮಪಡೆದ ಪುಣ್ಯಗ್ರಾಮ.**

## ದಾಸರು ಅವತರಿಸಿದ ಜನ್ಮಭೂಮಿ

ಹೈದರಾಬಾದ ಷ್ಟೇಟ, ರಾಯಚೂರ ಜಿಲ್ಹಾ ಮಾನವಿ ತಾಲ್ಲೂ ನಲ್ಲಿರುವ ಗ್ರಾಮ. ಚೀಕನಬರಿವಿ ( ಚೀಕನಪರಿ ) ಎಂಬ ಪುಣ್ಯ ಗ್ರಾಮ. ತುಂಗಾನದಿಯ ತಟದಲ್ಲಿ ಈ ಪವಿತ್ರ ಸ್ಥಳವಿದೆ. ವಿಶಾಲ ವಾದ ನದಿಯ ಪಾತ್ರೆ ಅತಿ ಶುಭ್ರವಾಗಿ ಹರಿಯುತ್ತ ಪರಿಶೋಭಿಸುವ ತುಂಗೆಯ ಮಂಗಳಯಾನಕರವಾದಜಲ. ಸೂರ್ಯಾಸ್ತಂಗತದಲ್ಲಿ ನದಿಯ

ಜಲದಲ್ಲಿ ಪ್ರತಿಬಿಂಬಿಸಿರುವ ಸೂರ್ಯನ ಅರುಣ ಬಿಂಬವು ಪಶ್ಚಿಮಾಂಗನೆಯು ಲೀಲೆಯಿಂದ ಹಿಡಿದ ಸ್ಫೈಕನ್ನಡಿಯೊ, ವಾರುಣಿಯ ಮಸ್ತಕೊನ್ನತದ ನವೀನ ಮಾಣಿಕ್ಯವೋ ಸೀರಪತಿಯಾದ ವರುಣ ದೇವರಿಗೆ ಸತಿಯಾದ ವಾರುಣಿದೇವಿಯು ತನ್ನ ಪತಿಗೆ ಆರುತಿ ಎತ್ತಿ ನಿವಾಳಿಸಿದ ಬಂಗಾರದ ತಳಿಗಿಯೋ ಹೇವಾಣವೋ ಎಂದು ಶೋಭಿಸುತ್ತಿರುವದು. ತುಂಗೆಯ ತಟದ ಎಡಬಲ ಭಾಗದಲ್ಲಿ ರಮಣೀಯವಾಗಿ ಶೋಭಿಸುವ ಸೂರ್ಯರಶ್ಮಿಗಳ ಮುಸ್ಸೋಟ ತಟದಮೇಲಿರುವ ಹಸಿರು ಹುಲ್ಲು ಗಿಡಗಳ ಮೇಲೆ ಬಿದ್ದ ಸೂರ್ಯನ ಕಿರಣದಿಂದ ಶೋಭಿಸುವ, ಅವುಗಳ ನೆರಳು ನದಿಯ ಪವಿತ್ರಜಲದಲ್ಲಿ ಮನೋಹರವಾಗಿ ದಂಡಿಯಲ್ಲಿ ಸಂಜೆಕಾಲ ಬ್ರಾಹ್ಮಣರು ಸಂಧ್ಯಾವಂದನೆಗೈದು ಇಂಥ ಪರಿಶೋಭಿಸುತ್ತಿರುವ, ಪ್ರತ್ಯಕ್ಷನಾಗಿರುವ ಸೂರ್ಯನಿಗೆ ಅರ್ಘ್ಯಪ್ರದಾನವಿತ್ತು ಮಂಗಳಕರವಾದ ಶೋಭೆಯು ಕಿವಿಗೆ ಇಂಪಾಗಿ ಕೇಳುವ ಪಕ್ಷಿಗಳ ಮಧುರತರವಾದ ಇಂಚರವು ಬ್ರಾಹ್ಮಣರ ವೇದ ಘೋಷದಿಂದ ಮಿಳಿತವಾದುದೆಂದು ತೋರಿತು.

ಇನ್ನು ಉದಯದಲ್ಲಿ ನದಿಯಲ್ಲಿ ಸುಳಿವ ಫೇನಬೊಬ್ಬುಳಿ-ಜಲಚರ ಪ್ರಾಣಿಗಳ ವಿಹಾರ. ಮರಿ ಮೀನುಗಳ ವೈಬಂಣ, ರವಿಯು ಉದಯಾಚಲದಿಂದ ಪೊರಟು ತನ್ನ ಗೆಳೆಯನಾದ ವರುಣನ ದರ್ಶನಕ್ಕೆ ಬರುವನೋ ಎಂಬುವತೆರ, ಸೂರ್ಯನ ಅರುಣ ಕಾಂತಿಯು ನದಿಯ ಮೇಲೆ ಪಸರಿಸಿದ ಶೋಭೆಯಿಂದ ಪ್ರಾಣಿಗಳಿಗೆ ಆನಂದ– ಸೂರ್ಯೋದಯ ಕಾಲದಲ್ಲಿ ಸೂರ್ಯನಿಗೆ ಅರ್ಘ್ಯವೀಯುವ ದೃಶ್ಯ- ಮುತ್ತೈದಿಯರು ಸ್ನಾನಾದಿಗಳನ್ನೆಸಗಿ ತಿಲುಕವನ್ನಿಟ್ಟು ಮರದ ಬಾಗಿಣವನ್ನು ಕೊಡುವ ಅಂದ. ತುಂಗೆಯೇ ಸಾಕ್ಷಾತ್ತಾಗಿ ಬಂದಿರುವಳೋ ಎಂಬ ಭಕ್ತರ ಮನೋಲ್ಲಾಸ ಮಂಗಳಾಂಗೆಯ ತುಂಗೆಯ ಮಹಿಮಾವನ್ನು ತುಂಗಾತೀರದಿ ಅವತರಿಸಿದ ಶ್ರೀ ವಿಜಯದಾಸರೇ ವರ್ಣಿಸಿರುವರು.

ಪದ ರಾಗ ಮೋಹನಕಲ್ಯಾಣಿ–ತ್ರಿವಿಡಿ ತಾಳ.

ತುಂಗೆ ಬಂದಳು ದೇವೋತ್ತುಂಗ ವರಹನ। ಮುಂಗೋರಿಯಲ್ಲಿ ಪುಟ್ಟಿಭಕ್ತನಿಕರನಾ। ಹಿಂಗದೆ ಪೊರೆದು ಸುಖಂಗಳನೀವುತಾ।

ಮಂಗಳಾಂಗೆ ಮಾತಂಗ ಸುಗಮನೆ ||ಪಲ್ಲ|| ಕಾಳಸನ್ನಗವೇಣಿ ಕೋಕಿಲ ವಾಣಿ | ಫಾಲಕಸ್ತುರಿಜಾಣಿ ಪಲ್ಲವಪಾಣಿ | ವಾಲೆಮೂಗುತಿ ಅಣಿ ಮುತ್ತು ಕಠಾಣಿ | ತೋಳು ಮಂದಾರಮಣಿ ಅತಿಗುಣಶ್ರೇಣಿ || ಮೌಳಿಯಾ ಮೇಲಿನ ಜಾಳಿಗೆ ಸೂಸುಕ | ವಾಲಲುಕದಪಿನ ನೀಲ ಗೂದಲುಭ್ರಮ ರಾಳಿಗಳಂತಿರೆ ಬಾಲಸುಧಾಕರ ಪೋಲುವ ವದನೆ ||೧||

ಇನ್ನು ಕುಡುತೆಗಂಗಳಶೋಭೆ, ಶಂಖವಂತೆ ಕಂಠ ಕೈಯಲ್ಲಿ ಕಡಗ ಕಂಕಣ ಶೃಂಗಾರಳಾಗಿ, ಪದಕಹಾರದಿಂದ ಜಡಿತಳಾಗಿ ಉತ್ತ ಮವಾದ ಪೀತಾಂಬರ ಉಟ್ಟು ಕುಪ್ಪಸತೊಟ್ಟು ತಲೆಗೆ ವಿಚಿತ್ರವಾದ ಪುಷ್ಪಂಗಳು ಮುಡಿದ, ಈ ಕಡಲೊಡೆಯನ ಮಡದಿಯು ತೀಡಿದ ಪರಿಮಳ ಗಂಧದಿಂದ ಮೆಲ್ಲಮೆಲ್ಲನೆ ಐತರುವ ಶೋಭೆ ರಮಣೀಯ ವಾದುದು. ಕುಚಗಳ ಅದರುವಿಕೆ, ಬಡನಡುವಿನ ಒಢ್ಯಾಣವಲ್ಲಿ ರುವ ಕಿಂಕಿಣಿರವ ಗೆಜ್ಜೆಕಾಲ್ಪೆಂಡೆಯ ನಿನಾದವು ಇಂಪಾದುದು.

ಈ ತುಂಗಾನದಿಯು ಕೂಡಲಿಪುರದಲ್ಲಿ ಭದ್ರಾನದಿಯಿಂದ ಕೂಡಿ ಸೂಸಿದವಳಾಗಿ ಮುಂದೆ ಸಾಗುತ್ತ ಆಡುತಲೇ ಅನಾಯಾಸ ದಿಂದ ಬಹುಲೇಸಾಗಿ ತನ್ನನ್ನು ಪಾಡುತ್ತ ಪೊಗಳುತ್ತಿರುವ ಜನರಿಗೆ ಈಡಿಲ್ಲದ ವರವು ಕೊಡುತ್ತ ದಯವನ್ನು ಮಾಡುತ್ತ ಕೃಪೆಯಿಂದ ನೋಡುತ್ತ ತಡೆಯಿಲ್ಲವೆ ಮುಂದೆ ಸಾಗುತ್ತ ಬಂದಳೆಂಬೊ ಶೋಭೆ ವಿಚಿತ್ರವಾದುದು,

ಶೃಂಗಾರವಾದ ಮಾರ್ತಾಂಡೆ, ಹರಿಹರ, ಮಾತಾ, ಅಂಗಾದಿ ಪರ್ವತ ಹಿಂಗವೆ ಬಲಗೊಳುತ ಕೂಡ್ಲಿಗೆಬರುತ್ತ ಸಂಗೀತನೃತ್ಯಾದಿ ದೇವ, ಮಾನವ ಗಾಯನದಿಂದ– ತಂಗಿಯಾದ ಭದ್ರಾದೇವಿಯನ್ನು ಕೂಡುತ್ತ ತುಂಗಭದ್ರಾ ಎನಿಸಿ ಕ್ರೀಡೆಯಾಡುತ್ತ ಗಂಗೆ ಎನಿಸುತ್ತ ದಕ್ಷಿಣದಿಶೆಗೆ ಪರಿಯುತ್ತ ಬಂದಳೊ ?

ಲೋಕದೊಳಗೆ ಪ್ರತಿರಹಿತವಾಗಿ ಪೆಸರಾದ **ಚೀಕನಬರವಿಯ ಅಶ್ವತ್ಥಮರದ ನೃಕಂಠೀರವನ ಪಾದದಿಪರಿದು** ವ್ಯಾಧಿಷ್ಠರಾದವರು ಸ್ನಾನಾದಿಗಳನ್ನು ಮಾಡಲು ವ್ಯಾಧಿಪರಿಹಾರ ಮಾಡುತ್ತ,– ಅಂತರಂಗ

ಭಕ್ತರು ಮೈಮರೆದು ಗಾಯನ ಮಾಡುತ್ತ ತುಂಗೆ ಮಂಗಳ ತರಂಗೆ ಎಂಬು ಕರೆದ ಪಾಕ ಪದಾರ್ಥ ಸ್ವೀಕರಿಸುತ್ತ, ಶ್ರೀಕರನಾದ ವಿಜಯ ವಿಠ್ಠಲ ಹರಿಗೆ ಎರಗುತ ನಾಕಕನ್ನಿಕೆಯಂತೆ ಹೊಳೆದಳು ಇಂದು || ಶ್ರೀ ವಿಜಯದಾಸರೆ ತುಂಗಭದ್ರಾ ಪುಣ್ಯ ನದಿಯ ಸ್ತೋತ್ರ ಮಾಡಿರುವರು.

ಮತ್ತು ಶ್ರೀ ವಿಜಯದಾಸರು ಇನ್ನೊಂದು ಪದದಲ್ಲಿ ತುಂಗಾ ನದಿಯ ಉತ್ಪತ್ತಿ ಅನೇಕ ಮಹಿಮಾ ಪೊಗಳಿರುವರು.

ಪದ ಉದಯರಾಗ, ಝಂಪಿ ತಾಳ

ನಮಾನಮಾಂ ಜಯ ತುಂಗಭದ್ರೆ ನಮಿತರನು ಪಾಲಿಸುವ ಸದ್ಗುಣಸಮುದ್ರೆ ||ಪಲ್ಲ|| ವೈರಾಜನಗರಿಯಲಿ ಧಾರುಣಿಯ ರೋಚ ಕನು । ವಿೂರಿವೇದಾದಿಗಳಿಗಂಜದಿರಲು || ಘೋರ ರೂಪವತಾಳಿ ಅವನ ಕೊಲ್ಲಲು ಹರಿಯ ಮೋರೆ ಕಿರಿಬೆವರಿಡಲು ಅತಿಹರುಷದಿಂದ ||೧|| ರೂಢಿಯೊಳಗೆಲ್ಲ ಸಮಸ್ತನದಿ ಉದಕಗಳು । ನೋಡಿದರು ರುಚಿಕರ ವಿಲ್ಲವೆಂದು || ದಾಡಿಯಲಿ ಧರಿಸಿದ ನುಸುರರು ಕೊಂಡಾಡುತಿರೆ । ಈಡ್ಯಾರು ನಿನ್ನ ಮಹಿಮೆಗೆ ವರಹತನಯೆ ||೨||

ಇಂಥ ರುಚಿಕರವಾದ ಸವಿ ಉದಕವನ್ನು ಬಣ್ಣಿಸಿ ರುಚಿಕರ ಸ್ವಾದಿಷ್ಟ, ಜಲವಾದ ಕಾರಣ ಮುಂದಿನ ನುಡಿಯಲ್ಲಿ–

"ಸಲಿಲವೇ ಹರಿಯಾದ ಶಿವ ನಿನಗೆ ಶಲೆಯಾದ । ಬಲು ಮುನಿಗಳು ಮಳಲವೊಳಗಾದರೂ || ಜಲಜ ಸಂಭವನು ತೃಣನಾದ । ಬಳಿಕ ವಿಷ್ಣು ಕೆಲವು ಕಾಲ ನಿಲಸಿದನು ||೩||

ಎಂದು ಪೇಳಿದ್ದಾರೆ. ದ್ರವರೂಪವಾದ ಉದಕವೆ ಹರಿ, ಶಿಲಾ ರೂಪವಾಗಿರುವವು. ಶಿವನ ಅಧಿಷ್ಠಾನ, ಮಳಲಲ್ಲಿ ಮುನಿಗಳ ವಾಸ, ಬ್ರಹ್ಮದೇವರು ತುಂಗಾತಟದಲ್ಲಿ ತೃಣರೂಪದಿಂದ ನಲಿಯುವ, ಶ್ರೀ ವಿಷ್ಣುವಿನ ಸನ್ನಿಧಾನ ವಿಶೇಷವೆಂದಮೇಲೆ ಇಂಥ ಪುಣ್ಯಕರವಾದ ತುಂಗಾ ಮಹಿಮೆ ಎಂತೊ ?

ಮುಂದೆ ೪೫ ನೇ ನುಡಿಯಲ್ಲಿ

ವೇದಾದ್ರಿಯಲಿ ಜನಿಸಿ ನರಸಿಂಹಕ್ಷೇತ್ರದಲಿ ಭೇದವಿಲ್ಲದೇ ಸಂಗ ಮವು ಎನಿಸಿ || ಆದರದಿಂದ ಹರಿಹರ ಪೊಂಪ ಬಲಗೊಂಡು ಮೊದಲು ಶ್ರೀ ಕೃಷ್ಣೆಯಲಿ ಬೆರಪೆ ಕೂಡಲಿಯೊಳು ||೪|| ತುಂಗೆತುಂಗೆ ಎಂದು ಸ್ಮರಿಸುವಾ ಜನರಿಗುತುಂಗಗತಿಯಾಗುವದು ಪಾಪವಳಿದು || ಮಂಗಳ ಮೂರುತಿ ವಿಜಯವಿಠ್ಠಲನ ಚರಣಂಗಳಿ ಇಧ್ದವರ ಸತತ ಪೊರೆವುದು ದೇವಿ ||೫|| ಇಂತು ತುಂಗಭದ್ರಾ ಮಹತ್ಮೆ ಆದರಲ್ಲಿ–

ಚೀಕನಬರಿವಿ (          )

ಅಶ್ವಥ್ಥಮರದ ನೃಸಿಂಹದೇವರ ಪಾದದಿ ಪರಿದು, ಎಂಬಮಹಿಮಾ ಸ್ತೋತ್ರಗೈದಿರುವರೆಂದಮೇಲೆ ಎಂಥ ಪುಣ್ಯತಮವಾದ ಭೂಮಿ ಅದರಲ್ಲಿ **ಅಸ್ವಥ್ಥಮರದ ಶ್ರೀ ನರಸಿಂಹದೇವರ ಪಾದವೆಂಥದು ಇದರ ಮಹಿಮೆ ಏನು?**

ಸುಮಾರು ೧೫ ನೇ ಶತಮಾನದಲ್ಲಿ ಅವತರಿಸಿದ ಪುಣ್ಯ ಪುರುಷ ರಾದ **ಧ್ರುವಾಂಶ ಸಂಭೂತ ಶ್ರೀಪಾದರಾಜರು** ದಾಸಪಂಥವನ್ನು ಬೆಳಿಸಲು ಮೂಲಕಾರಣರಾದರು. ಇವರು ದೇಶಪರ್ಯಟನ ಮಾಡುತ್ತಾ ಪುಣ್ಯತಮವಾದ ತುಂಗಭದ್ರಾನದಿಯ ತಟವಾದ ಚೀಕನಬರಿವಿಗೆ ದಿಗ್ವಿಜಯಗೈಸಿ ಆ ಮನೋಹರವಾದ ಪುಣ್ಯಕ್ಷೇತ್ರದಲ್ಲಿ ಕೆಲವುದಿನ ಇದ್ದು ತಪಗೈದು ಆ ತುಂಗಾತಟದ ಮೇಲ್ಭಾಗದಲ್ಲಿ ಗ್ರಾಮಕ್ಕೆ ಹತ್ತಿರವಾಗಿಯೇ ಒಂದು ಅಶ್ವಥ್ಥನಾರಾಯಣ ವೃಕ್ಷವನ್ನು ಹಾಕಿ ಉತ್ತಮವಾದ ಒಂದು ವಿಶಾಲ ಕಟ್ಟೆಯನ್ನು ಕಟ್ಟಿದರು. ಅಲ್ಲಿ ಪಿಪ್ಪಲ ವೃಕ್ಷದಲ್ಲಿ ಶ್ರೀ ಲಕ್ಷ್ಮಿ ನೃಸಿಂಹನನ್ನು ಆವ್ಹಾನಿಸಿ ಅಶ್ವಥ್ಥವೃಕ್ಷದ ಮೂಲ ವಿಭೂತಿಯನ್ನು ವ್ಯಕ್ತ ಗೊಳಿಸಿದರು. ಅಂದಿನಾರಭ್ಯ ಪುಣ್ಯಕ್ಷೇತ್ರದ ಶೋಭೆ ಮಿಗಿಲೆನಿಸಿತು. ವಿದುರಾಶ್ವಥ್ಥ, ಬ್ರಹ್ಮಾಶ್ವಥ್ಥ ಪುಣ್ಯಕ್ಷೇತ್ರಗಳಿಗೆ ಸಮವಾಗಿ; ಶ್ರೀಪಾದ ರಾಜ ಅಶ್ವಥ್ಥನೃಸಿಂಹವೆಂದು ಲೋಕದೊಳಗೆ ಪ್ರಸಿದ್ಧವಾಯಿತು. ಇಂದಿಗೆ ಸುಮಾರು ೫೦೦ ವರ್ಷಗಳಾದರೂ ಆ ಅಶ್ವಥ್ಥವೃಕ್ಷವು ಒಂದು ಟೊಂಗೆ ಒಣಗಿದರೆ ಇನ್ನೊಂದು ಕೊಂಬೆ ಚಿಗಿಯುತ್ತ ದೇವಾಂಶರಿಂದ ಸ್ಥಾಪಿತವಾಗಿ ಶ್ರೀ ನೃಸಿಂಹದೇವರ ವಿಶೇಷ ವಿಭೂತಿಗೆ ಕಾರಣವಾಗಿ

ಪ್ರಫುಲ್ಲಿತವಾಗಿರುವದೆ ಸಾಕ್ಷಿ. ಇಂದಿಗೂ ಪೂಜಾದಿಗಳು ನಡೆಯುತ್ತಲಿವೆ. ಜನರು ಸೇವೆಯನ್ನು ಮಾಡಿ ಇಷ್ಟಾರ್ಥಗಳನ್ನು ಹೊಂದುತ್ತಲಿರುವರು.

## ದಾಸರ ತಂದೆತಾಯಿಗಳು ಪುಣ್ಯಾತ್ಮರು

ಇಂಥ ಪುಣ್ಯಕರವಾದ ಕ್ಷೇತ್ರದಲ್ಲಿ ೧೮ನೇ ಶತಮಾನದಲ್ಲಿ ಬ್ರಾಹ್ಮಣರಾದ ಶ್ರೀನಿವಾಸಪ್ಪ ಕೂಸಮ್ಮನೆಂಬ ಇಬ್ಬರು ದಂಪತಿಗಳು ಇರುತ್ತಿದ್ದರು. ಇವರು ವೈಷ್ಣವಬ್ರಾಹ್ಮಣರು, ಋಕ್‌ಶಾಖಾ, ಭಾರದ್ವಾಜ ಗೋತ್ರೋತ್ಪನ್ನರಾದವರು. ದೈವಬ್ರಾಹ್ಮಣರಲ್ಲಿ ಭಕ್ತಿಸಂಪನ್ನರು ಶಮದಮಾದಿ ಗುಣಗಳಿಂದ ಯುಕ್ತರಾಗಿ ಇದ್ದ ಬಡತನದಲ್ಲಿಯೇ ಶ್ರೀ ಹರಿಗುರುಗಳನ್ನು ದೇವಬ್ರಾಹ್ಮಣರನ್ನು ಪೂಜಿಸುತ್ತಾ, ಅತಿಥಿಸತ್ಕಾರ ಮಾಡುತ್ತ ಶ್ರೀ ಭಗವಂತ ಕಥಾಶ್ರವಣ ಮಾಡುತ್ತಾ ಸತ್ಕಾಲಕ್ಷೇಪ ಮಾಡುತ್ತಿದ್ದರು. ತಮ್ಮ ಬಡತನವನ್ನು ಒಬ್ಬರಿಗಾದರೂ ಉಸರುತ್ತಿದ್ದಿಲ್ಲ. ಇದೇ ಸತ್ಕುಲ ಪ್ರಸೂತ ಪುಣ್ಯವಂತ ಸುಶೀಲರ ಲಕ್ಷಣ. ಈಶ್ರೀನಿವಾಸಪ್ಪ ಕೂಸಮ್ಮನವರಿಗೆ ಮಕ್ಕಳಿರಲಿಲ್ಲ. ಶ್ರೀ ಹರಿಯಾಜ್ಞೆಯಂತೆ ಪ್ರತಿನಿತ್ಯ ತುಂಗೆಯ ಮಂಗಳೋದಕದಲ್ಲಿ ಸ್ನಾನಾಹ್ನಿಕ ತೀರಿಸಿಕೊಂಡು ಶ್ರೀಪಾದರಾಜರ ಅಶ್ವತ್ಥ ನೃಸಿಂಹದೇವರಲ್ಲೆ ಸೇವೆ ಮಾಡಹತ್ತಿದರು. ಮೊದಲೆ ಬಡತನ, ಒಂದು ಉಪವಾಸ ಚಂದ್ರಾಯಣಾದಿ ವ್ರತಗಳು ಮಾಡಲು ಅನುಕೂಲವಾದಿತು. ಉಪವಾಸದಿಂದ ದೇಹಕೃಶವಾದರೂ, ಶ್ರೀ ನೃಸಿಂಹದೇವರ ಪೂಜಾಸೇವಾದಿಂದ ದೇಹದಲ್ಲಿ ಆತ್ಮಬಲ ತೇಜಸ್ಸು ಓಜಸ್ಸು ಪೆಚ್ಚಿ ಬಹುಕಾಂತಿಯುಕ್ತರಾಗಿ ಬಹು ನಿಷ್ಠತೆಯಿಂದ ಶ್ರೀ ಹರಿಯ ಭಜಿಸುತ್ತ ಸೇವಾದಲ್ಲಿ ನಿರತರಾಗಿದ್ದರು. ಒಳ್ಳೇ ಸತ್ಕುಲ ಪ್ರಸೂತ ಪುಣ್ಯಪುರುಷರು "ಗುರುಸೇವೆಮಾಡಿ ವರಪಡೆದಳ್ಳೆ ಎರಡೊಂದು ಪುತ್ರರನು" ಎಂಬಂತೆ.

ಶ್ರೀ ವಿಜಯದಾಸರ ಅವತಾರಕ್ಕೆ ಯೋಗ್ಯದೇಶ, ಯೋಗ್ಯಕಾಲ, ಯೋಗ್ಯರಲ್ಲಿ ಅವತರಿಸಲು "ಶ್ರೀಮತಾಂಧೀಮತಾಂಗೇಹೆ ಯೋಗ ಭ್ರಷ್ಟೋಭಿ ಜಾಯತೇ" ಎಂಬಂತೆ ದೇವತೆಗಳು ತಮ್ಮ ಪೂರ್ವ ಪ್ರಾರಬ್ಧ ಅನುಭೋಗಿಸಿ ಸಜ್ಜನರನ್ನು ಉದ್ಧರಿಸಲು ಅವತಾರ ಮಾಡಲು.

ಯೋಗ್ಯವಾದ ದೇಶಕಾಲ, ಅವತರಿಸಲು ಕಾರಣರಾದ, ಪುಣ್ಯಾತ್ಮ ದಂಪತಿಗಳಲ್ಲಿ ಭಗವದಾಜ್ಞೆಯಿಂದ ಮೇಲೆ ವಿವರಿಸಿದ ಭೃಗುಋಷಿಗಳ ಅಂಶ ಸಂಭೂತರಾದ ಶ್ರೀ ಪುರಂದರದಾಸರ ಮಕ್ಕಳಾಗಿ ಜನಿಸಿದ ಗುರು ಮಧ್ವಪತಿದಾಸರೆ ಶ್ರೀ ಪುರಂದರದಾಸರ ಒಂದಂಶದಿಂದ ಶ್ರೀನಿವಾಸಪ್ಪನ ಉದರ ಪ್ರವೇಶಿಸಿ; ಧರ್ಮಪತ್ನಿ ಪತಿವ್ರತಾ ಶಿರೋಮಣಿಯಾದ, **ಕೂಸಮ್ಮನವರ** ಗರ್ಭದಲ್ಲಿ ಪ್ರವೇಶಮಾಡಿದರು ಇಂಥ ಪುಣ್ಯಾತ್ಮರು ಗರ್ಭ ಪ್ರವೇಶಮಾಡಲು ಗರ್ಭ ಚಿನ್ಹೆಯು ದಿನೆ ದಿನೆ ಬೆಳೆಯುತ್ತ ಶ್ರೀ ಕೂಸಮ್ಮನವರ ದೇಹಕಾಂತಿ ಹೆಚ್ಚಿತು. "ದೇವಾನಾಂ ನಿರಯೋನಾಸ್ತಿ" ಎಂಬುವ ವಚನದಂತೆ ತತ್ವಾಭಿಮಾನಿ ದೇವತೆಗಳ ಸಮಕಕ್ಷಿಯಲ್ಲಿರುವ ಈ ಭೃಗ್ವಂಶರಿಗೆ ಯದ್ಯಪಿ ಗರ್ಭವಾಸವಿದ್ದಾಗ್ಯೂ, ಗರ್ಭದಲ್ಲಿ ಆಗತಕ್ಕ ದುಃಖಾದಿಗಳು ಇವರಿಗೆ ಇಲ್ಲವೆ ಇಲ್ಲ. ದೇವತೆಗಳಿಗೆ ಗರ್ಭವಾಸ ದುಃಖಾದಿಗಳು ಇಲ್ಲವೆಂದು ಭಾಗವತೋಕ್ತಿ ಮರೆಯಲಾಗದು. ಇಂತು ನವಮಾಸಗರ್ಭದಲ್ಲಿದ್ದು ಶಕೆ ೧೬೦೪ ರುಧಿರೋದ್ಗಾರಿನಾಮ ಸಂವತ್ಸರ ಕ್ರಿಸ್ತಶಕೆ ೧೬೮೨ ರಲ್ಲಿ ಸುಖಪ್ರಸವವಾಗಲು ಭೂಮಿಯಲ್ಲಿ ಅವತರಿಸಿದ ಶಿಶುವು ಅತಿ ತೇಜಃಪುಂಜವಾಗಿಯೂ, ಅಸದ್ರಶವಾಗಿ ಮಾನವರಿಗೆ ಮಿಗಿಲೆನಿಪ ಕಾಂತಿಯುಳ್ಳದ್ದಾಗಿತ್ತು. ಜಾತಕರ್ಮಾದಿಗಳನ್ನು ಮಾಡಿ ಜನಿಸಿದ ಶಿಶುವಿಗೆ ಜೇನುತುಪ್ಪವನ್ನು ಚೀಪಿಸಲು ಜುರುಜುರುನೇ ನೆಕ್ಕಲಾರಂಭಿಸಿತು. ಶ್ರೀನಿವಾಸಪ್ಪ ಕೂಸಮ್ಮ ಉಪವಾಸ ಭಕ್ತಿಯಿಂದ ಸೇವೆಗೈದ ಪುಣ್ಯಕರವಾದ ಸೇವಾರುಚಿಯೇ ಶ್ರೀನೃಸಿಂಹದೇವರು ಈ ಶಿಶುವಿನ ದ್ವಾರಾ ಜುರುಜುರುನೇ ಮೆಲುವನೆಂಬುದು ಸಾರ್ಥಕ್ಯವಾದಿತು ದೇಶಕಾಲ ಸಂಪ್ರದಾಯದಂತೆ ಬಾಣಂತಿಗೂ ಕೂಸಿಗೂ ಆರತಿಯನ್ನು ಎತ್ತುತ ಮುತ್ತೈದಿಯರು ಹಾಡಿಹರಸಿದರು. ೧೧ನೇ ದಿನ ಗಂಡುಕೂಸಿಗೆ ನಾಮಕರಣ ಮಂಗಲ ವಿಜ್ರಂಭಣೆ ಇದ್ದ ಬಡತನದಲ್ಲಿಯೇ ಜರಿಗಿತು. ಕೂಸಿನ ಮುಖಕಮಲಕಾಂತಿಯನ್ನು ನೋಡಿ ಬ್ರಾಹ್ಮಣರು ವಿಸ್ಮಯ ಚಕಿತರಾದರು. ಇವನು ಒಳ್ಳೇ ಪುಣ್ಯವಂತನಾಗುವನು. ದೈವಿಭಕ್ತಿಯುತನು. ದೈವಿಭಕ್ತಿಯು ಸಾಮಾನ್ಯವಾಗಿ ದಾಸನಾದವನಿಗೇನೆ ಪುಟ್ಟುವದು. (ಮೇಲಾಗಿ ನೈಜವಾದ ದಾಸವಂಶದಲ್ಲೇ ಹುಟ್ಟಿದ

ಕಾರಣ) ಈ ಎರಡೂ ವಿಧವಾಗಿಯೂ ತಿಳಿಸಿದ ಶ್ರೀಹರಿಯ ಇಂಗಿತವನ್ನು ತಿಳಿದ ಬ್ರಾಹ್ಮಣೋತ್ತಮರು ಈ ಕೂಸಿಗೆ "ದಾಸಪ್ಪ" ನೆಂಬೋ ನಾಮ ಕರಣ ಮಾಡಿದಂತೆ ಮಂಗಲ ಸುವಾಸಿನಿಯರೆಲ್ಲರೂ ಕೂಸಿನನ್ನು ಶೃಂಗಾರ ವಾದ ತೊಟ್ಟಿಲೊಳಗಿಟ್ಟು ದಾಸಪ್ಪನೆಂದು ಪೆಸರಿಟ್ಟು ಸುಸ್ವರದಿಂದ ಜೋಗುಳವನ್ನು ಪಾಡಿ ಪರಸಿದರು.

ಪದ, ರಾಗ ಶಂಕರಾಭರಣ ಆದಿತಾಳ

ಜೋ ಜೋ ಯಶೋದಿಯನಂದ ಮುಕುಂದನೆ ಜೋ ಜೋ ಕಂಸಕುಠಾರೆ। ಜೋ ಜೋ ಮುನಿಗಳ ಹೃದಯಾನಂದನೆ। ಜೋ ಜೋ ಲಕ್ಷುಮಿಯ ರಮಣ ॥ ಪಲ್ಲ ॥ ಹೊಕ್ಕಳಹೂವ್ವಿನ ತಾವರೆಗಣ್ಣಿನ ಇಕ್ಕಿದ ಮಕರ ಕುಂಡಲದ। ಜಕ್ಕಳಿಸುವ ಕದಪಿನ ಸುಳಿಗುರುಳಿನ। ಚಿಕ್ಕಬಾಯಿ ಮುದ್ದುಮೊಗದಾ ॥ ಸೊಕ್ಕಿದ ಮದಕರಿಯಂದದಿ ನಸಲೊ। ಳಿಕ್ಕಿದ ಕಸ್ತೂರಿತಿಲುಕಾ। ರಕ್ಕಸರೆದೆದಲ್ಲಣ-ಮುರವೈರಿಯೆ ಮಕ್ಕಳ ಮಾಣಿಕ ಜೋ ಜೋ ॥ ೧ ॥ ಕಣ್ಣು ಬೆಳಗುಪ ಸರಿಸುತಿರೆ ಗೋಪಿ ಅರೆ। ಗಣ್ಣು ಮುಚ್ಚಿ ನೋಡಿನಗುತ। ಸಣ್ಣ ಬೆರಳುಗಳು ಬಾಯಿ ವಳಗಳವಡಿಸಿ। ಪನ್ನಗಶಯನ ತೊಟ್ಟಿಲಲೀ ॥ ನಿನ್ನ ಮಗನಮುದ್ದು ನೋಡೆಂದು ನಗುತಲಿ। ತನ್ನ ಪತಿಗೆ ತೋರಿದಳು। ಹೊನ್ನಬಣ್ಣದ ಸೊಬಗಿನ ಖಣಿಯೆ ಹೊಸ। ರನ್ನದ ಬೊಂಬೆಯೇ ಜೋ ಜೋ ॥ ೨ ॥ ನಿಡಿತೋಳ್ಗಳ ಪಸರಿಸುತಿರೆ ಗೋಪಿಯು। ತೊಡಿಯ ವ್ಯಾಲ್ಕಲಗಿದಾ ಬಾಯ್ದೆರಿಯೆ। ಒಡಲೊಳಗೀ ರೇಳು ಭುವನವಿರಲುಕಂಡು। ನಡುಗಿ ಕಣ್ಣು ಮುಚ್ಚಿದಳು ॥ ಸಡಗರಿಸುತ ತಾನರಿಯದಂತೆ। ಹೊಡಮರಳಿ ಮೊಗವ ನೋಡುತಲೀ ಪಾ। ಲ್ಗಡ ಲೊಡೆಯನೆ ಪುರಂದರವಿಠ್ಠಲ। ಬಿಡದೆ ನಮ್ಮೆಲ್ಲರ ರಕ್ಷಿಸುವ ॥ ೩ ॥ ಜೋ ಜೋ ॥

ಮತ್ತು

ಲಾಲಿ ಲಾಲಿ ತ್ರಿಭುವನ ಪಾವನಲಾಲಿ ॥ ಪ ॥ ಶರಧಿಗೆ ಸೇತು ಕಟ್ಟಿದಗೆ ಲಾಲೀ। ತರುಣಿ ದ್ರೌಪದಿ ಕಾಯ್ದವಗೆ ಲಾಲೀ। ಕರಿಮೊರೆ ಇಡಲು ಬಂದೊದಗಿದಗೆ ಲಾಲಿ। ವರದ ಪುರಂದರವಿಠ್ಠಲಗೆ ಲಾಲಿ ॥ ೧ ॥

ಅಂದು ಆ ಕಾಲದಲ್ಲಿ ಸುಮಂಗಲೆಯರು ಜೋಗುಳವನ್ನು ಪಾಡಿ ಆರತಿಎತ್ತಿ ನಿವಾಳಿಯನ್ನು ಶಾಶಿ ಸೂಸಿದಂತೆ ಇಂದು ಪದಪದ್ಯ ಸುಳಾದಿ

ರೂಪದಿಂದ ಜ್ಞಾನಸಂತತಿ ನಿಲ್ಲಿಸಿ ಅವತರಿಸಿದ ದಾಸರೆ ಒಂದಂಶದಿಂದ ಹರಿದಾಸ ಸಾಹಿತ್ಯ ಮಂದಿರದಲ್ಲಿ ಅವತರಿಸಿದ ದಾಸರ ಜೋಗುಳವನ್ನು ಹರಿದಾಸ ದಾಸಿಯರೆಲ್ಲ ಪಾಡುವರು.

ಪದ ರಾಗ ಶಂಕರಾಭರಣ ಆದಿತಾಳ

ಜೋ ಜೋ ಪುರಂದರದಾಸ ಕುಲಾಗ್ರಣಿ । ಜೋ ಜೋ ಸುಜನ ಹೃತ್ಕಮಲ ನಿವಾಸನೆ ಜೋ ಜೋ ನಾರಂದಜ್ಞಾನ ಪ್ರದನೆತ್ವಾಂ । ಜೋ ಜೋ ಹರಿಯ ಪ್ರತ್ಯಕ್ಷ ಕರಿಸಿದನೆ ॥ ಜೋ ಜೋ ॥ ಪಲ್ಲ ॥ ಶ್ರೀ ರಮಣ ಕೃಷ್ಣನಿಂವರವ ಪಡೆದು ನೀಂ । ಘೋರ ಕಲಿಯುಗದೊಳು ಅವತರಿಸುತಲಿ । ನಾರದರೆ ಕಲಹಕಾರಿ ದೈತ್ಯರ್ಗೆತ್ವಾಂ । ಪ್ರೇರಿಪಿ ಕುಬುದ್ಧಿ ಸಜ್ಜನಕೆ ಸಚ್ಚಿತ್ತ ॥ ೧ ॥ ಗುರುವಾಸಮುನಿಯ ಹೃತ್ಸರಸಿರುಹ ಕೃಷ್ಣ । ಚರಣಧೇನಿಸಿ ಉಪದೇಶವಕೊಂಡು । ಪುರಂದರ ನಾಮದಿ ಮೆರೆದು ಪೊಂಪಾದಲ್ಲಿ । ವರಕೃಷ್ಣಭೂಪ ಮೆಚ್ಚಿದ ನಿಮ್ಮಾಚರಣೆ ॥ ೨ ॥ ಈರೆರಡುಲಕ್ಷದಿಪ್ಪತ್ತೈದುಸಾವಿರ । ಮಾರಮಣನಕಥೆ ವೇದಸಾರಾರ್ಥವ । ಬೀರಿಕ್ಷೋಣಿಯೊಳಾ ಪಾರಸಂತತಿನೆಲಸಿ । ತೋರೆ ಶ್ರೀ ಹರಿಯ ಅಪಾರ ಲೀಲೆಗಳ ॥ ೩ ॥ ವಿಜಯದಾಸರ ನಿಜ ಹೃದಯ ಮಂಟಪದೊಳು ಸುಜಯಗೋಪಾಲ ದಾಸಾಖ್ಯನೇಣುವಿನಿಂಶೋಭಿಸೆ । ತ್ರಿಜಗ ಜಗನ್ನಾಥ ಹೇಮತೊಟ್ಟಿಲೊಳು । ನಿಜದಾಸ ಪ್ರಾಣೇಶನಿಂ ಉಯ್ಯಾಲಿಪನೆ ॥ ೪ ॥ ಪಾದತ್ರಮುವಪೂರಿಪ ಮಧ್ವಪತಿಗಳಲಿ । ಮೋದದಿಂದೊಂಶದಲಿ ಅವತರಿಸಿನೀಂ । ಸಾದರ**ದೀದಾಸಗೊಲಿದು** ಉಪದೇಶಿಸಿ । ಮಾಧವ ವಿಜಯ ವಿಠಲಾಂಕಿತವನಿತ್ತೆ ॥ ಜೋ ಜೋ ॥ ೫ ॥ ತಂದೆ ಸುತರು ಸಂಧ್ಯಾಗೈದುಗೋತ್ರೋಚ್ಚಾರ । ಒಂದೆ ಮಾಡುವತೆರ ವಿಜಯ ದಾಸರಲಿ । ನಿಂದು ಪೇಳಿಸಿದ ಹರಿಯ ಗುಣಾನಂದವು । ನಂದಸುರರ ವೃಂದ ಮೊಗಳೆನಭದಲ್ಲಿ ॥ ಜೋ ಜೋ ॥ ೬ ॥ ಅಂದ ಪದಸುಳಾದಿ ದಾಯಿ ಉಗಾಭೋಗ । ನಂದದಿಂಪಾಡುತ ದಾಸ ದಾಸಿಯರೆಲ್ಲ ಹೃ । ನ್ಮಂದಿರ ಹರಿಯುತೂಗುತ ನಿಂದೈಧಾರೆ ಪು । ರಂದರವರದ ಸುಂದರ ವಿಠಲ ಜೋ ಜೋ ॥ ೭ ॥

ಹೀಗೆ ಹರಿದಾಸ ದಾಸಿಯರೆಲ್ಲ ಜೋಗುಳಪಾಡಿ ಪುಟ್ಟಿದ ಶಿಶುವಿಗೆ ದಾಸಪ್ಪನೆಂದು ನಾಮಕರಣ ಮಾಡಿದರು ಮೊದಲೇ ಶ್ರೀದಾಸನೇ ಈಶನೆಂದೂ, ಇತರ ರಮಾ ಬ್ರಹ್ಮಾದಿಗಳೆಲ್ಲ ನಿತ್ಯವಾದ ಹರಿದಾಸರೆಂದೂ, ತೋರಿದ ದಾಸಗೆ **ದಾಸಪ್ಪನೆಂಬ** ನಾಮವು ಅನ್ವರ್ಥಕವಾದುದು. ತಂದೆ ತಾಯಿಗಳಿಗೆ ಆನಂದ, ಬಂಧುಬಳಕ್ಕೆಲ್ಲ ಆನಂದ, ನಂದಕಂದನ ದಾಸನ ಅವತಾರ ಮಂದಿ ಮಕ್ಕಳಿಗೆಲ್ಲ ಅತ್ಯಾನಂದ. ಇತರರ ದಬ್ಬಾಳಿಕೆಯಲ್ಲಿ ನೈತಿಕ, ತಾತ್ವಿಕ ಸಾಮಾಜಿಕ ಪರಿಸ್ಥಿತಿಯು ಕೊಲೆಯಲ್ಲಿ ಸೊಂದು ಮಾರ್ಗತೋಚದಿರುವ ಸಜ್ಜನವೃಂದಕ್ಕೆಲ್ಲ ಮತ್ತೂ ಹೆಚ್ಚಿನ ಆನಂದ. ನಭದ ಸುರವೃಂದವೆಲ್ಲನಲಿದು ಹರಿಪರನೆಂದು ಡಂಗುರಬೀರಿದ ಭೃಗು ಋಷಿಗಳು ಇಂದು ಗೂಢರೂಪದಿಂದ ಶಿಶುವಾಗಿ ಮುಂದೆ ಮುಕುಂದ ಅಪಾರವಾದ ಆನಂದ ಗುಣಗಳನ್ನು ತುತಿಸಿ ಸಜ್ಜನರ ಕಾಪಾಡುವನೆಂದು ಮಹಾ ಆನಂದಸಮುದ್ರದಲ್ಲಿ ಮುಳುಗಿ ಶ್ರೀಹರಿಯನ್ನು ಕೊಂಡಾಡಿದರು.

ಸಾಮಾನ್ಯವಾಗಿ ಒಂದು ಶಿಶು ಜನಿಸಿದರೆ ಎಷ್ಟೋ ಆನಂದವು. ಇಂಥ ಪರಮೋದಾರ ಜ್ಞಾನಿವರೇಣ್ಯ ದೇವತೆಗಳ ಆವಿರ್ಭಾವವು ಎಷ್ಟು ಮಡಿ ಆನಂದ ಹೆಚ್ಚಿಸಲಿಕ್ಕಿಲ್ಲ ?

## ದಾಸಪ್ಪನ ಬಾಲಲೀಲಾ

ಮುಂದೆ, ತಂದೆ ತಾಯಿಗಳ ಮನೋಲ್ಲಾಸವು ಉಕ್ಕೇರಿತು. ತಾಯಿಯ ಮೊಲೆಯು ಜುರುಜುರುನೆ ಮೆಲಿಯುತ್ತ ಶಿಸುವು ಬಿದಿಗೆ ಚಂದ್ರಮನಂತೆ ಅಭಿವೃದ್ಧಿಯಾಗಿ ೩ನೇ ತಿಂಗಳಲ್ಲಿ ಗುಡಿಗೆ ಹೋಗಿ ಬರುವ ಸಂಪ್ರದಾಯದಂತೆ ಅಶ್ವತ್ಥ ನರಸಿಂಹದೇವರು ಅನುಗ್ರಹಿಸಿ ದಯಪಾಲಿಸಿದ ಆ ರನ್ನ ಮಗುವನ್ನು, ಅರಳೆಲಿ ಕಟ್ಟಿ ಒಡೆಯನ ಅಡಿದಾವರೆಗಳಲ್ಲಿ ಅರ್ಪಿಸಿ ಪೂಜಿಸಿ ಮಂಗಳತರಳಾದ ಗಂಗೆಯನ್ನು ಪೂಜಿಸಿದ ವಾಳ್ಯ ತುಂಗೆಯು ಜ್ಞಾನಿ ಭಕ್ತಶ್ರೇಷ್ಠರಾದವರ ಸಂಗಮವು ಎನಗಾದಿತೆಂಬ ಆತುರದಿ ಉಕ್ಕೇರಿ ಅಲೆಗಳು ಮುಂದೆ ಬಂದವು. ಗಂಗಾಪೂಜೆ ಪುನಃ ನೃಸಿಂಹದೇವರ ಅರ್ಚನ ಮಾಡಿಕೊಂಡು ಮನೆಗೆ ಬಂದು ಬಡತನದಲ್ಲಿಯೆ ಸುವಾಸಿನಿ ಬ್ರಾಹ್ಮಣರರಿಗೆ ಯೋಗ್ಯತಾನುಸರಿಸಿ

ಭೋಜನಮಾಡಿಸಿ ತಾಂಬೂಲ ದಕ್ಷಿಣಾದಿಗಳಿಂದ ಸತ್ಕರಿಸಿ ಆಶೀರ್ವಾದ ತೆಗೆದುಕೊಂಡರೂ ಅಹೋ ಏನಾಶ್ಚರ್ಯ! "ಭೂಸುರ ಗುರುದೊರೆ ಬ್ರಾಹ್ಮಣ ಕುಲಕ್ಕೆ ಅಭಿಮಾನಿಗಳಾಗಿ", ದಾಸ ರೂಪದಿಂದ ಜನಿಸಿದ ಶಿಶುವಿಗೆ ಬ್ರಾಹ್ಮಣ ಆಶೀರ್ವಾದವೆ? ಭಗವಂತನ ಲೀಲೆಯು ವಿಚಿತ್ರ ವಾದುದು. ಬ್ರಾಹ್ಮಣರ ದ್ವಾರಾ ತಾನು ಆಶೀರ್ವಾದವನ್ನು ಕೊಡಿಸಿ, ಮುಂದೆ ಸಜ್ಜನರಿಗೆ ನೀನು ಆಶೀರ್ವದಿಸಿ ಉದ್ಧರಿಸಲು ಅಧಿಕಾರಿಯಾ ಗೆಂಬ ಗೂಢವಾದ ಭಾವ ಸಜ್ಜನರು ತಿಳಿದರು.

ಇಷ್ಟು ದೈವಿಸಂಪತ್ತು ಇದ್ದರೂ, ಲೋಕದಲ್ಲಿ ರೊಕ್ಕ ಹಣ ಕಾಸು ಇದ್ದರೆ ಜನರಲ್ಲಿ ಪ್ರತಿಷ್ಠೆ. ಆದರೆ ಶ್ರೀನಿವಾಸಪ್ಪ ಕೂಸಮ್ಮನವರು ಅತಿ ಬಡತನದಲ್ಲಿದ್ದರೂ, ಅಂತರಂಗದಲ್ಲಿ ಭಗವದ್ಭಕ್ತತೆ ನಿರ್ಮಾತ್ಸರ್ಯತೆ ಇತ್ಯಾದಿ, ಶಮಾದಮಾದಿ ಗುಣಗಳೆಂಬ ಧನದಿಂದ ಐಶ್ವರ್ಯವಂತರಾಗಿ ರುವದನ್ನು, ಲೋಕದ ಮೂಢ ಜನರು ಮನ್ನಿಸುವರೇ? ತಮ್ಮ ರಕ್ಷಣೆ ಯನ್ನು ಮಾಡಿಕೊಳ್ಳುವ, ಲೋಕ ದೃಷ್ಟ್ಯಾಶಕ್ತಿ ಇರದ ತಂದೆ ತಾಯಿ ಗಳಿಗೆ ಶಿಶುವಿನ ರಕ್ಷಣೆ ಭಾರವೆನಿಸಿದರೂ, ಆ ಶ್ರೀಪಾದರಾಜವರದ ಶ್ರೀ ಲಕ್ಷ್ಮೀನರಸಿಂಹನೇ ಸಕಲ ಆಪತ್ತಿನಿಂದ ಕಾಪಾಡಿ ರಕ್ಷಕನೆಂದು ದೃಢನಂಬಿಕೆಯನ್ನು ತಾಳಿ, ಈ ಶಿಶುವೆ ಮುಂದೆ ನಮಗೆ ತಾರಕವೆಂದು ಅಂತರಂಗದಲ್ಲಿ ನಿಶ್ಚಯವಾಗಿ ತಿಳಿದು ಶಾಂತಿಸಮುದ್ರದಲ್ಲಿ ಮುಳುಗಿದ್ದರು.

ಆ ಮುದ್ದು ಬಾಲನ ಚಿನ್ನದ ಮುಗುಳುನಗೆ ನೋಟವನ್ನೀಕ್ಷಿಸಿ ಬೆರಗಾಗುವರು. ಹಸಿದು ತೊಟ್ಟಿಲೊಳಗೆ ಚೀರ್ವ ದಾಸಪ್ಪನಿಗೆ ಮೊಲೆ ಯುಣಿಸುವ ಕೂಸಮ್ಮನ ಭಾಗ್ಯವೆಂತಹದೊ? ಮುದ್ದು ಮೊಗವಿನ ಬಾಲ ಲೀಲೆಗಳನ್ನು ಪತಿಯು ಮುಂದೆ ಪೇಳಿ ನಗುವಳು. ಜನನಿ ಜನಕರು ಮುದಭರಿತರಾಗಿ ಕಾಲಕ್ಕನುಸಾರವಾಗಿ ಒಳ್ಳೇ ಮುಹೂರ್ತದಲ್ಲಿ ಶಿಶುವಿಗೆ ಅನ್ನಪ್ರಾಶನ, ಚವಲ ಮುಹೂರ್ತ ಮಾಡಿಸಿದರು. ಬಡತನದ ಭೂತ ಬಡೆದಿರಲು ಶಿಶುವಿಗೆ ಒಡವೆ ಆಭರಣಗಳಿಂದ ಶೃಂಗರಿಸಿ ಕಣ್ತುಂಬ ನೋಡುವ ಸಮಯವೆಲ್ಲಿ? ಕಾಲಕಾಲಕ್ಕೆ ಶಿಶುವಿಗೆ ಪೋಷಿಸುವ ಸಾಮಗ್ರಿಗಳೆಲ್ಲಿ? ಆದರೂ ಶಾಂತಚಿತ್ತರಾಗಿ ಶ್ರೀ ಭಾಗವತದಲ್ಲಿ ಗೋಪಿ ದೇವಿಯರು ಶ್ರೀಕೃಷ್ಣನಿಗೆ ಅಲಂಕರಿಸಿ ಉಡಿಮುಡಿ ಆಭರಣಗಳನ್ನಿಟ್ಟ

ಪದಗಳನ್ನು ಸೊಗಸಾಗಿ ಪಾಡುವಳು. ಆ ಶ್ರೀಕೃಷ್ಣಬಾಲನ ಶೃಂಗಾರ ವನ್ನೆ ಈಕ್ಷಿಸುವಳು. ಕೃಷ್ಣನ ಪಾದ ನಂಬಿದ ಭಕ್ತಳು ಮೇಲೊದಗಿ ಬಹ ಬಡತನ ಕಷ್ಟಗಳನ್ನು ಮನಸಿಗೆ ತಾರಳು. ಶ್ರೀಹರಿಯ ಚಿತ್ತ ದಂತೆ ಆಚರಿಸುವದೆಂದು ತಿಳಿದವರು ಜ್ಞಾನಿಗಳು. ಭಕ್ತರು ಶ್ರೀಹರಿ ಯಾಜ್ಞೆಯನುಸರಿಸಿ ಪ್ರಾರಬ್ಧಭೋಗವನ್ನು ಅನುಭವಿಸಿ ಸಂತೋಷದಿಂದ ಕಾಲ ಕಳೆಯುವರು. ಆಗ್ಗೆ ಸಹ ತಮ್ಮ ಕಷ್ಟ ನಷ್ಟಗಳನ್ನು ಇತರರಿಗೆ ಆ ದಂಪತಿಗಳು ಹೇಳುತ್ತಿರಲಿಲ್ಲ.

ಕೂಸಮ್ಮನವರ ಶಿಶುವಾದ ದಾಸಪ್ಪನು ಅಂಬೆಗಾಲಿಡಲು ಪ್ರಾರಂಭಿಸಿದನು. ಕೆಲವುಕಾಲ ಹೊಟ್ಟೆ ಸವರಹತ್ತಿದನು. ಇದನ್ನು ನೋಡಿದ ಜನನಿ ಜನಕರು ದೈವಜ್ಞ ಸಜ್ಜನರು ಈ ಬಾಲಕನು ಸುಜನ ರನ್ನು ಹರಿಪಾದಾವಲಂಬಿಗಳನ್ನು ಮಾಡಲು ಮುಂದುವರಿಯುವನೆಂದು ತಿಳಿದು ಆನಂದಭರಿತರಾದರು. ಈ ಭಕ್ತನ ಬಾಲಲೀಲೆ ಏನು ಪೇಳು ವದು– ಜನನಿಯು, ಕುಂಚಿಗೆ ಕುಲಾಯುಗಳನ್ನು ಕಟ್ಟಿ ಅಲಂಕರಿಸುವಳು. ಬಾಲಕನ ಮುದ್ದು ಮೊಗವೀಕ್ಷಿಸುತ ಬೀಗಿದಪ್ಪುವಳು. ಮುಂದಲೆಯನ್ನು ಆಘ್ರಾಣಿಸುವಳು. ಬಹು ಪ್ರೀತಿಯಿಂದ ಮೊಲೆಯನ್ನುಣಿಸುವಳು. ಆಗ್ಗೆ ಆ ಶಿಶುವು ಜುರುಜುರುನೆ ಮೊಲೆಯನುಣುತ್ತ, ಜನನಿಯ ಮೊಗ ವೀಕ್ಷಿಸುತ, ಕಿರುನಗೆಗಳಿಂದ ತಾಯಿಮೊಗವನ್ನು ನೋಡುತ್ತ, ತಾಯಿಯ ಕೊರಳಲ್ಲಿರುವ ಮಣಿಯ ಹಾರವನ್ನೆಳೆಯುತ್ತ ತನ್ನ ಪಾದಗಳನ್ನು ಅಲ್ಲಾಡಿ ಸುತ್ತ, ತಾಯಿಯ ಸ್ತನಗಳನ್ನು ತನ್ನ ಸುರುಚಿರ ನಖಗಳಿಂದೂರುತ್ತ ಪರಿಪರಿಯ ಬಾಲಚೇಷ್ಟೆಯಂ ಮಾಳ್ಪ ಕುವರನ ಮುಂಗೂದಲಗಳನ್ನು ತಿದ್ದುತ ಕೂಸಮ್ಮನು ಯಶೋದೆಯಂತೆ ಮಂದಸ್ಮಿತದೊಳು ಆನಂದವಂತಾಳ್ದಳು.

ಈ ತರುಳನಾಡುವ ಬಾಲಲೀಲೆಯನು ನೋಡಿ, ರಸಭರಿತವಾದ ತೊದಲು ಮಾತುಗಳನ್ನು ಕೇಳಿ, ಆ ಮುದ್ದು ಕಂದನ ಕಾಯುವನೆತ್ತಿ ಮತ್ತೆ ತನ್ನ ನಳಿತೋಳ್ಗಳಿಂದ ಅಪ್ಪಿ, ಸೀರೆಯ ನಿರಿಗೆಯ ಮೇಲಿರಿಸಿ ಕುಣಿದಾಡುವ ಸೊಗಸನ್ನು ನೋಡಿ, ಮುಂದಲೆ ಮೂಸಿ ನೋಡುವಳು.

ಶಿಶುವಿನ ಬಾದ್ದರೆವ ಜೋಲ್ವ ಚೆಂದುಟಿಯನ್ನು ಚುಂಬಿಸುವಳು. ಹೀಗೆ ಪಂಚೇಂದ್ರಿಯ ಸಂಪ್ರೀತಿಯಿಂದ ಪೂರ್ಣಳಾದಳು.

ಕೆಲಕಾಲ ಈ ಮುದ್ದು ಮಗುವು ನಲಿವ ತೊಟ್ಟಿಲಿನಲ್ಲಿ ಆಡುವ, ನೆವನವಿಲ್ಲದೆ ನಗುವನು. ಬಾಯೊಳಗೆ ಬಟ್ಟು ಇಕ್ಕುತ ಪೀರ್ವನು. ಹಸಿದರೆ ಚೀರುವನು. ತಾಯಿಯು ತೊಟ್ಟಲಿಂದ ಕೆಳಗೆ ಇಳಿಸಲು, ಮೊಲೆಯುಣ್ಣಪೋಗಲು ಅಂಬೆಗಾಲಿಡುವನು. ಎದ್ದು ನಿಲ್ಲಲು ಪ್ರಯತ್ನಿಸುವನು, ಪದಾರ್ಥಗಳನ್ನು ಬೇಡುವನು, ಕುಣಿಕುಣಿದಾಡುವನು. ಮೊಳಕೆ ಹಲ್ಲುಗಳ ಜೊಲ್ಲಿನಿಂದ ತೊದಲು ನುಡಿ ನುಡಿಯುವನು. ಕೋಮಲ ಪಾದದಿಂದ ದಟ್ಟಡಿ ಇಡುವನು, ಕಾಡುವನು. ಮನೆಯಲ್ಲಿದ್ದ ಪದಾರ್ಥಗಳನೆಲ್ಲ ಸೂರಿಮಾಡುವನು, ಹಿಟ್ಟಿನಲ್ಲಿ ನುಚ್ಚು ಕಲೆಸುವನು, ಇತ್ಯಾದಿ ಮೋಹಕರವಾದ ಬಾಲ ಚೇಷ್ಟೆಗಳನ್ನು ತೋರುತ್ತ ಕ್ರಮೇಣ ಮನೆಯ ತಲಬಾಗಿಲು ದಾಟುವನು. ಬೀದಿಯೊಳಗಾಡುತ್ತ ಅಲ್ಲೆ ಮಲಗುವನು. ಕೂಡುವನು. ಅನೇಕ ಬಾಲಲೀಲೆಗಳನ್ನು ತೋರುತ್ತ ಜನರಿಗೂ ಆನಂದಗೊಳಿಸುತ್ತಿರುವನು.

ಆದರೆ ಬಡತನದಲ್ಲಿ ಬೆಳೆಯುವ ದಾಸಪ್ಪನಿಗೆ ಮನ್ನಿಸುವರಾರು. ಜನರು ಆಗಲೇ **ಕೂಸಿಮುಗ ದಾಸನೆಂದು** ಕರೆಯಲಾರಂಭಿಸಿದರು. ಅಯ್ಯೋ ಪ್ರಾರಬ್ಧವೇ ಎಂಥದು. ಶ್ರೀಹರಿ ಅಚ್ಚಿನ್ನ ಭಕ್ತನಾದ ವಾಯುವಿಗೆ ಕೋತಿಜನ್ಮ ಅನುಭವಿಸಬೇಕಾದಿತು. ನಮ್ಮದೇನು ಪಾಡೆಂದು ಕೂಸಮ್ಮನು ಮನದಲ್ಲಿ ನೊಂದುಕೊಳ್ಳದೆ, **" ಇಟ್ಟಾಂಗ ಇರುವೆನೊ ಹರಿಯೆ "** ಎಂದು ಪಾಡಿ ಪೊಗಳುವಳು. ಇದು ಶಾಂತ ಮನಸ್ಕರ ನೈಜ ಸ್ವಭಾವ.

ಮುಂದೆ ಒಂದೊಂದು ಸಮಯ ಹಸಿದ ಬಾಲನನ್ನು ತನ್ನ ತೊಡಿಯ ಮೇಲೆ ಮಲಗಿಸಿ ಹೊಯ್‌ಹಾಲು ಹಾಕುವಳು. ಭಗದ್ಗುಣಾನುಗಾನ ಮಾಡುವಳು. ಅಂದು ಯಶೋದೆಯು ಶ್ರೀಕೃಷ್ಣನನ್ನು ಪಾಡಿದಂತೆ ಪಾಡುವಳು.

## ವಾರ್ಧಿಕ

"ಜಗವಂದ್ಯನಂ ತನ್ನ ಕಾಲನೇಲ್ಮಲಗಿಸುತ । ಸೊಗಸಿಂದ ಕ್ಷೀರ ಮಂಪದಮಾಡಿ ಕುಡಿಯನ್ನ । ಮಗುಮಣಿಯೆ ಕಂದಮ್ಮ ಕುಡಿಯಮ್ಮ ಪರ ಬೊಮ್ಮ ಛಲವ್ಯಾಕೊ ನಿನಗೆ ತಮ್ಮಾ ॥ ಉಗಳದಿರು ಮಂಗಯ್ಯ ಪಸಿದಿರ್ಪ್ಪರಂಗಯ್ಯಾ। ಮೊಗ ಬಾಡಿತಲ್ಲೋ ಹರಿ ಕುಡಿಯೊ ಮೋಹನಕಾರಿ। ಮಗನೆ ಕುಡಿಯೆನುತಲಿ ಯಶೋದೆ ಕೆನೆವಾಲನಂ ಕುಡಿಸಿದಳ್ ಸಂತೈಸುತಾ ॥" ಎಂದು ಪದವನ್ನು ಪಾಡುತ್ತಾ ಶಿಶುವಿಗೆ ಪಾಲುಗರೆವಳು.

ಆದರೆ ಧರ್ಮ ಕರ್ಮ ಪ್ರಾರಬ್ಧ ಭೋಗದಿಂದ ದಾಸಪ್ಪನಾದ ಶಿಶುವಿನ ಮೈಗೆ ಹತ್ತಲಿಲ್ಲ. ಶಿಶುವು ಬಡವಾಗಹತ್ತಿತು. ವರ್ಷಾಂತ್ಯದಲ್ಲಿಯೇ ತಾಯಿಯು ಎರಡನೇ ಗರ್ಭಚಿನ್ಹವು ತೋರಿ ಕೂಸು ನವದು ಎಣ್ಣೆಗೊಳ್ಳಹತ್ತಿತು. ದೈವಯೋಗವೆ ಬೇರೆ. ಆ ಕಾಲದಲ್ಲಿ ತಾಯಿಯ ಮೊಲೆಹಾಲು ಕಡಿಮೆ ಆದರೆ, ಮೊಲೆ ಪಾಲುಳ್ಳ ಸ್ತ್ರೀಯರು ಕನಿಕರದಿಂದ ತಮ್ಮ ಸ್ತನ್ಯ ಪಾನಮಾಡಿಸಿ ಶಿಶುಗಳ ರಕ್ಷಣೆ ಧರ್ಮವು ಬಹು ಜಾಗ್ರತೆಯಾಗಿತ್ತು. ಕೂಸಮ್ಮನ ನೆರಮನೆಯ ಒಬ್ಬ ಲಿಂಗಾಯತ ಹೆಣ್ಣುಮಗಳು ನಿತ್ಯ ಈ ಚರ್ಯವನ್ನು ನೋಡಿ ಕೂಸಾದ ದಾಸಪ್ಪನನ್ನು ತನ್ನ ಮೊಲೆಗೆ ಹಾಕಿಕೊಂಡು ತನ್ನ ಹೊಟ್ಟೆಯಲ್ಲಿ ಪುಟ್ಟಿದ ಮಗನಂತೆ ಕ್ಷೀರ ಪಾನಮಾಡಿಸಿ ಬೆಳಸಿದಳು ಎಂದು ಪರಂಪರೆ ಹಿರಿಯರಿಂದ ಕೇಳಿದ ಸತ್ಯ ವಾಕ್ಯವು. "ದಾನಪಾತ್ರ ಗುಣಾನುಕೂಲ್ಯಾತ್" ಎಂಬ ವಿಜಯ ವಾಕ್ಯವು ನೆನಪಿಗೆ ಬರುತ್ತದೆ.

ಸತ್ಪಾತ್ರರಾದ ದಾಸಪ್ಪನವರಿಗೆ ಮೊಲೆ ಪಾಲುಣಿಸಿದ ಆ ಉತ್ತಮ ಸ್ತ್ರೀಯಳಿಗೆ ಉತ್ತಮ ಗತಿಯೇ ನಿಜ. ಹೀಗೆ ದಾಸಪ್ಪನು ಬೆಳೆಯುತ್ತ ಮೂರು ವರ್ಷದ ಬಾಲಕನಾದನು. ಇಷ್ಟರಲ್ಲಿಯೇ ಶ್ರೀಮದಾಚಾರ್ಯರಿಗೆ ಶ್ರೀ ವಿಷ್ಣುತೀರ್ಥರು ಅನುಜರಾಗಿ ಜನಿಸಿದಂತೆ ಒಬ್ಬ ತಮ್ಮ ಆನಂದ ದಾಸರು ಪುಟ್ಟಿದರು. ಅವರು ಬೆಳೆಯುತ್ತ ಉಭಯರೂ "ರಾಮ ಕೃಷ್ಣರಂತೆ" ಮುದ್ದಾದ ಆಟಗಳನ್ನಾಡುತ್ತ ಜನರಿಗೆ ಬೆಡಗು ತೋರಿದರು.

## ಅಕ್ಷರಾಭ್ಯಾಸ

ಹೀಗೆ ದಾಸಪ್ಪ, ಆನಂದ ಇಬ್ಬರಿಗೂ ಕ್ರಮೇಣ ೬-೫ ವರ್ಷಗಳಾದವು. ಸತ್‌ಸಂಪ್ರದಾಯದಂತೆ ಅಕ್ಷರಾಭ್ಯಾಸ ಒಳ್ಳೇ ಬ್ರಾಹ್ಮಣೋತ್ತಮರಿಂದ ಶ್ರೀ ಅಶ್ವತ್ಥ ನರಸಿಂಹನ ಸನ್ನಿಧಾನದಲ್ಲಿ ಮಾಡಿಸಿ, ಶ್ರೀಹರಿ ಕೊಟ್ಟಿದರಲ್ಲಿಯೇ ಸೀರೋ ಮುಚ್ಚೋ ಇತ್ತು, ಬ್ರಾಹ್ಮಣರನ್ನು ತೋಷಪಡಿಸಿ, ನಮನರೂಪವಾದ ಗುರುದಕ್ಷಣೆಯಿತ್ತರು. ಅಕ್ಷರಾಭ್ಯಾಸವಾಯಿತು. ಮುಂದೇನು ಮಾರ್ಗವೆಂದು ಯೋಚನೆಗೊಳಗಾಗಲು ಕಾರಣವೇ ಇದ್ದಿಲ್ಲ. ವಿದ್ಯಾಭ್ಯಾಸಕ್ಕೆ ಆ ಕಾಲದಲ್ಲಿ ಅಲ್ಲಲ್ಲೆ ಅಯ್ಯನವರ ಶಾಲೆ. ಜಾತಿ ನೀತಿ ಭೇದಗಳಿರಲಿಲ್ಲ ಜಾತಿ ಪಂಗಡ ದ್ವೇಷವಿರಲಿಲ್ಲ. ಅಯ್ಯನವರು ಒಳ್ಳೇ ಅಕ್ಷರಸ್ಥರಾಗಿ ಪಂಡಿತರಾಗಿರುವರು; ಕನ್ನಡ ಹಳೆ ಕನ್ನಡ, ಲೆಕ್ಕಪತ್ರ ಭಾಷಾತಜ್ಞರಾದ ಕೆಲವರು ಅನೇಕ ಪೂರ್ವಿಕ ಕಾವ್ಯಗಳಲ್ಲಿ ನಿಷ್ಣಾತರಾದವರು, ಕೆಲವರು ಸಂಸ್ಕೃತ ಭಾಷೆಯಲ್ಲಿ ತೇರ್ಗಡೆ ಪೊಂದಿದ ಬ್ರಾಹ್ಮಣರೂ ಅಯ್ಯನವರು ಅಧ್ಯಾಪಕರಾಗಿದ್ದರು. ಅವರಿಗೆ ವೇತನಾದಿಗಳ ಕ್ಲಪ್ತವಿರಲಿಲ್ಲ. ವಿದ್ಯಾದಾನಮಾಡಿ ಜನರನ್ನು ಸುಮಾರ್ಗಕ್ಕೆ ತರುವದೇ ವಿದ್ಯಾದಾನದ ಮುಖ್ಯ ಧ್ಯೇಯವಾಗಿದ್ದಿತು. ಇಂಥ ಉಚ್ಚ ತರಗತಿಯ ಭಾವನೆಯಿಂದಳಿದು ವಿದ್ಯಾ ಗುರುಕುಲ ಪ್ರಾಧ್ಯಾಪಕರಿಗೆ ಯೋಗ್ಯ ವೇತನ ವಿದ್ಯಾದಾನ ಕಾಲಕ್ಲಪ್ತ ಇದ್ದಾಗ್ಯೂ ವಿಷಯಾಶೆ ಬಿಡದೆ ಧನಾರ್ಜನೆಯೆ ಮುಖ್ಯವೆಂದು ಭಾವಿಸಿದ ಈಗಿನ ಪ್ರಾಧ್ಯಾಪಕರು ಅಧ್ಯಾಪಕರೂ, ಎಲೊ ನೀನು 'ಟ್ಯೂಶನ್'( ) ಹೇಳಿಸಿಕೊಳ್ಳಯ್ಯಾ ಎಂದು ಬೋಧಿಸಿ ದ್ರವ್ಯ ಹರಣ ಮಾಡುವ ಮಾರ್ಗ ತೆಗೆದಿರುವರು. ಅಯ್ಯೋ ಗುರುಗಳೇ, ಇದು ನೈತಿಕ ಸಾಮಾಜಿಕ ಮಾರ್ಗ ತಪ್ಪಿದರೆ ? ಮುಂಚೆ ೫-೬ ನೂರು ವರ್ಷ ಪೂರ್ವದಲ್ಲಿ ಕನ್ನಡ ದೇಶವಾದ ಮಳಖೇಡ ಮುಂತಾದ ಸ್ಥಳಗಳಲ್ಲಿ ದೊಡ್ಡ ದೊಡ್ಡ ಗುರುಕುಲಗಳು ಇದ್ದು ೬೦೦ ಜೈನ ಪ್ರಾಧ್ಯಾಪಕರಿಗೆ ಮುಖ್ಯ ಮಹೋಪಾಧ್ಯಾಯರು ಶ್ರೀ ಟೀಕಾರಾಯರು ಇದ್ದರೆಂಬ ಇತಿಹಾಸವು ಮರೆಯಬಾರದು. ಆ ನಡವಳಿಕೆಗೆ ಅನುಸರಿಸಿಯೇ ಹಳ್ಳಿಗಳಲ್ಲಿ ಅಲ್ಲಲ್ಲೆ ಅಯ್ಯನವರ ಶಾಲೆ ಸುಗಮವಾಗಿ ನಿರ್ವ್ಯಾಜದಿಂದ ಸಾಗುತ್ತಿದ್ದವು. ವಿಷಯಾಶೆ ಅಯ್ಯನವರಿ

ಗಿರಲಿಲ್ಲ. ಮಕ್ಕಳ ಹಿರಿಯಪ್ಪಗಳು ತಂದು ಕೊಟ್ಟ ಜೋಳ ಕಾಳು ಕಡಿಯಲ್ಲಿಯೆ, ಬೋನ ರೊಟ್ಟಿಗಳಿಂದ ತೃಪ್ತರಾಗಿ ವಿದ್ಯಾದಾನ ಮಾಡು ವರು. ಪ್ರತಿನಿತ್ಯ ಒಬ್ಬ ಹುಡುಗನು ರಾತ್ರಿ ಔಡಲ, ಪುಂಡೆ ಯಣ್ಣೆ ಗಾಳನ್ನು ತಂದು ಕೊಡುವನು. ದೀಪಾರಾಧನಿ ಮಾಡಿಸಿ ತಕ್ಕ ದೇವತಾ ಪಾರ್ಥನರೂಪ ಮಂತ್ರಗಳನ್ನೂ ಸಾಯಂಕಾಲದ ದೇವತಾ ಪ್ರಾರ್ಥನೆ ಯನ್ನು ಮುಗಿಸಿ ನೀತಿಗಳನ್ನು ಬೋಧಿಸಿ ಮಕ್ಕಳನ್ನು ಮನೆಗೆ ಕಳುಹು ವರು. ಮುಂಜಾನೆ ಸೂರ್ಯೋದಯಕ್ಕೆ ಸರಿಯಾಗಿ ಎಲ್ಲರೂ ಸೇರಿ ದೇವಪ್ರಾರ್ಥನೆ ಮಾಡಿ ವಿದ್ಯಾಭ್ಯಾಸ ಪ್ರಾರಂಭ. ಕಾಲಕ್ಲಪ್ತತೆ ಇರಲಿಲ್ಲ. ಪೀಸು ಟ್ಯೂಶನ್‌ಗಳಿರಲಿಲ್ಲ. ಇಷ್ಟೇ ಅಲ್ಲ ರಾತ್ರಿ ಸಹ ಕೆಲವು ಹುಡು ಗರನ್ನು ತಮ್ಮ ಗೃಹದಲ್ಲಿಯೇ ಮಲಗಿಸಿಕೊಂಡು ಅಯ್ಯನವರು ನೀತಿ ಮಾರ್ಗವನ್ನು ಬೋಧಿಸುವರು. ಪಾಶ್ಚಾತ್ಯ ಅನುಕರಣೆಕಾಲ ಬಲದಿಂದ ಎಲ್ಲವೂ ಲೋಪವಾಗಿ, ಉಚ್ಚ ತರಗತಿಯ ಪಧವಿಧರರೂ ಸಹ ಭಾಷಾ ಶಾಸ್ತ್ರವನ್ನು ಅರಿಯದವರಾದರು. ನೈತಿಕ ಮಾರ್ಗದಿಂದ ದೂರಾದರು. ಸಾಮಾಜಿಕ ಪ್ರೀತಿ ಎಂಬ ಮರ್ಮವನ್ನು ಮರೆತರು, ಆಗಲಿ ದೈವಚಿತ್ತ.

ಹಿಂದಿನ ನಮ್ಮ ಅಯ್ಯನವರು ಅಪ್ಪನವರು ಇಂಥವರಲ್ಲಿ ವಿಷ ಯಾಸೆ ಮೊದಲಿರಲಿಲ್ಲ. ವಿದ್ಯಾದಾನವೇ ಮುಖ್ಯವೆಂದು ತಿಳಿದು ಹಗಲಿರುಳು ದುಡಿದು ದುಃಖಪಡೆದು ಸರಳ ನೀತಿಮಾರ್ಗದಲ್ಲಿ ಮಕ್ಕಳನ್ನು ಮುಂದೆ ತರುವದು ಅವರ ಮುಖ್ಯ ಧೇಯವಾಗಿತ್ತು. **ಆ ಮಾನವಿಯ ತಾಲ್ಲುಕ**ನಲ್ಲಿರುವ ಜನಾಂಗದ ಪರಿಸ್ಥಿತಿಯೇ ಈ ಪ್ರಕಾರವಾಗಿತ್ತು. ಈಗ ೫೦–೬೦ ವರ್ಷದ ಕೆಳಗೆ ಎಷ್ಟೋ ಜನ ಲಿಂಗಾಯತ ಗ್ರಹಸ್ಥರೂ ಅಯ್ಯ ನವರು. ಬ್ರಾಹ್ಮಣರೂ ಮಾತೃಭಾಷೆಯಾದ ಕನ್ನಡ ರಾಜಶೇಖರ ಜೈಮಿನಿ, ಪಂಪ ರನ್ನರ ಕಾವ್ಯಗಳಲ್ಲಿ ಅತಿ ಪಂಡಿತರಾಗಿದ್ದರು. ಅಲ್ಲಲ್ಲಿ ಸಭೆ ನೆರೆಯುವವು. ಪಂಡಿತರುಗಳ ಕಾವ್ಯಾಲಾಪ ಅರ್ಥವಿಚಾರಣೆಯಲ್ಲಿ ಕಾವ್ಯ ವ್ಯಾಕರಣ ಛಂದಸ್ಸು ಅಲಂಕಾರದಲ್ಲಿ ಒಬ್ಬರಿಗೊಬ್ಬರಿಂದೊಬ್ಬರು ನೈಜವಾದ ಪಾಂಡಿತ್ಯವನ್ನು ವ್ಯಕ್ತಗೊಳಿಸುವರು. ಭಾಷಾಶಾಸ್ತ್ರ ತಜ್ಞರಾಗಿದ್ದರು. ಒಂದುಸಲ ೬೦ ಜನ ಪಂಡಿತರ ಸಮಾಗಮ. ೬೦ ಜನರೂ ಒಂದು ಜೈಮಿನಿ ಪದ್ಯಕ್ಕೆ ಬೇರೆ ಅರ್ಥಗಳನ್ನು ಸರಿಯಾದ

ವಂಚನವಿಲ್ಲದ ಮಾರ್ಗದಲ್ಲಿ ಪೇಳಿ ತಮ್ಮ ತಮ್ಮ ಪಾಂಡಿತ್ಯವನ್ನು ವ್ಯಕ್ತ ಗೊಳಿಸಲು, ಸಂಸ್ಕೃತ ಕನ್ನಡ, ನಡುಗನ್ನಡ, ಹಳೆಗನ್ನಡದಲ್ಲಿ ಆಗಿನ ಕಾಲದಲ್ಲಿ ಶ್ರೇಷ್ಠರೆನಿಸಿ ಪಂಡಿತರಲ್ಲಿ ನೆರೆದ ಶ್ರೀ ವೈ. ವಾಸಿಗಳಾದ ಕುರಡಿ ಕೃಷ್ಣಾಚಾರ್ಯರು ಶಾಸ್ತ್ರ ಸಮ್ಮತವಾಗಿ ೬೧ನೇ ಅರ್ಥವನ್ನು ಕಾವ್ಯ, ವ್ಯಾಕರಣ ಛಂದಸ್ಸು ಅಲಂಕಾರ ಭಾಷಾ ದೃಷ್ಟಿಯಿಂದ ಮೇಲ್ಮಟ್ಟಿನಲ್ಲಿ ಪೊಗಳಿ ಹೇಳಿ ಸರಸ್ವತಿದೇವಿಯ ಭಕ್ತರಾದ ಎಲ್ಲ ಪಂಡಿತರನ್ನು ಮನಾ ನಂದಗೊಳಿಸಿದರು. ಅವರನ್ನು ನೋಡಿದ ಈ ನಯನವೇ ಧನ್ಯ. ಇಂಥ ಅನೇಕ ಜನರು ೨೫-೩೦ ವರ್ಷದೊಳಗೆ ನಮ್ಮೆದುರಿಗೆ ಕಣ್ಮರೆ ಯಾದರು. ನಮ್ಮಲ್ಲಿ ಒಬ್ಬ ಮುದುಕ ಅಯ್ಯನವರು ಛಂದಸ್ಸಾರ-ಛಂದೋಬುಧಿ, ಇಂಥ ವಿದ್ಯಾ ಆಗರವಾದ ಮಾನವಿಯದೇಶ ಗೌಡ ಕರಣಿಕರು ಸಹ ವಿದ್ಯಾ ವ್ಯಾಸಂಗಿಗಳಾಗಿದ್ದರು. ಎಷ್ಟೋ ಕಾವ್ಯ ಗ್ರಂಥಗಳು ಮಾನವಿ ಇಲಾಖೆಯಿಂದಲೇ ಸಂಶೋಧನದಲ್ಲಿ ದೊರೆತವೆ ಸಾಕ್ಷಿಯಾಗಿವೆ. ಉಚ್ಚ ಕಾವ್ಯ, ಸಂಕೋಚ ಭಾರತ ಅನಂತನ ಕಥೆ ಮೊದಲಾದವುಗಳು ಪ್ರಚುರಗೊಳಿಸುತ್ತದೆ. ಸರಿಯಾದ ರೀತಿಯಿಂದ ಮುಖೋದ್ಗತವೆನ್ನುವರು. ಭಾಮಿನಿ ವಾರ್ಧಕಗಳನ್ನು ಬೇರೆ ರಸಗಳಲ್ಲಿ ೧೮-೨೦ ತರವಾಗಿ ಅನ್ನುವವರು ಇನ್ನು ಇದ್ದಾರೆ. ಬೇರೊಬ್ಬರಿಗೆ ಹೇಳಬಾರದೆಂಬ ಕಾರ್ಪಣ್ಯ.

ಇಂಥ ಅಯ್ಯನವರ ಶಾಲೆಯಲ್ಲಿ ನಮ್ಮ ದಾಸಪ್ಪನವರ ಅಭ್ಯಾಸ ೬ನೇ ವರುಷ ಪ್ರಾರಂಭವಾದಿತು. ಆಗಿನ ಕಾಲದಲ್ಲಿ ಪಾಟಿ ಪೆನಸಿಲು ಕಾಗದಗಳಿದ್ದಿಲ್ಲ. ಉದ್ದನ ಸಣ್ಣ ಹಲಿಗೆ ಮೇಲೆ ಹಾಕಲು ಕೆಮ್ಮಣ್ಣು ಸೋಸಿಟ್ಟಿರುವರು. ಪ್ರತಿಯೊಬ್ಬ ಸಣ್ಣ ಹುಡುಗನಿಗೆ ಹಲಿಗೆಮೇಲೆ ಮಣ್ಣು ಹಾಕಿ ಅದರಲ್ಲಿ ಬೆರಳಿನಿಂದ ಅಯ್ಯನವರು ಪ್ರಾರಂಭಕ್ಕೆ || ಓ ನಾ ಮಾ ಸಿದ್ಧಂ || ಎಂದು ಬರೆದು ಹುಡುಗರಿಗೆ ಹೇಳಿ ಪಾಠ ಮಾಡಿಸುತ್ತಾ ತಿದ್ದಿಸುವರು. || ಓಂ ನಮಃ ಸಿದ್ಧಂ || ಎಂದು ಪ್ರಾರಂಭ ದಲ್ಲಿ ಓಂ ಗುಣಪೂರ್ಣನಾದ ಪರಮಾತ್ಮನಿಗೆ ವಿದ್ಯಾ ಬುದ್ಧಿ ಸಿದ್ಧಿ ಗೋಸುಗ ನಮಸ್ಕಾರ ಮಾಡುತ್ತೇನೆ ಎಂತ ಅದರ ಇಂಗಿತಾರ್ಥ ಧೂಳಾಕ್ಷರದಲ್ಲಿಯೇ ಪ್ರಾರಂಭಿಸಿ ಅಜಾದಿ ಐವತ್ತೊಂದು ವರ್ಣಗಳು

ಕ್ರಮವಾಗಿ ಬಾಲಕರಿಗೆ ಹೇಳುವ ಪದ್ಧತಿಯಂತೆ ಇದರಿಂದ ಅಕ್ಷರಾಭ್ಯಾಸ ಮಾಡಿ ದೇವತೆಗಳು ತುಷ್ಟರಾಗಿ ಕಲಿತ ವಿದ್ಯಾ ಸಫಲವಾಗುತ್ತಿತ್ತು.

ಅಹೋ ಇಂದು ದೇವರ ಇಲ್ಲ ಜಾತಿ ನೀತಿಗಳಿಲ್ಲೆಂಬ ಜಗತ್ತಿನ ಮಾದರಿಯೇ ಬೇರೆಯಾಗಿದೆ. ೧—ಆ—ಈ—ಕ ಇತ್ಯಾದಿ ವರ್ಣಗಳ ಪ್ರಾರಂಭ. ಇದರ ಅರ್ಥದಂತೆ ಫಲ.

ಪೂರ್ವ ಸಂಪ್ರದಾಯದಂತೆ ದಾಸಪ್ಪನ ತಂದೆಯಾದ ಶ್ರೀನಿವಾಸಪ್ಪನು ಒಳ್ಳೇ ದಿನದಲ್ಲಿ ದಾಸಪ್ಪನಿಗೆ ಶಾಲೆಗೆ ಕರಕೊಂಡು ಹೋಗಿ ಅಯ್ಯನವರಿಗೆ ವಂದಿಸಿ ತಕ್ಕ ಪೂಜಾದಿಗಳನ್ನು ಮಾಡಿ ಸರಸ್ವತಿದೇವಿಯನ್ನು ಬಲಗೊಂಡು ಅಕ್ಷರಾಭ್ಯಾಸ ಪ್ರಾರಂಭ ಮಾಡಿಸಿದನು. ಪೂರ್ವ ಜನ್ಮದ ಸಂಸ್ಕಾರದಿಂದ ದಾಸಪ್ಪನ ಸ್ಫೂರ್ತಿ ದಿನದಿನೆ ಹೆಚ್ಚಲಿಕ್ಕೆ ಹತ್ತಿತು. ಒಮ್ಮೆ ಹಾಕಿಕೊಟ್ಟ ಅಕ್ಷರಗಳನ್ನು ಇನ್ನೊಮ್ಮೆ ಹೇಳಿಸಿಕೊಳ್ಳಲಿಲ್ಲ, ತಿದ್ದಲಿಲ್ಲ. ಅತಿ ವಿಚಕ್ಷಣ ಬುದ್ಧಿಯ ಬಾಲಕನನ್ನು ನೋಡಿ ಅಯ್ಯನವರು ಸಂತೋಷಪಡುವರು. ಮುಂದೆ ಸುಮಾರು ೩ ವರ್ಷಗಳಲ್ಲಿಯೇ ದೇಶ ಮಾನವರ ಪದ್ಧತಿಯಂತೆ ಶಾಲೆಯಲ್ಲಿ ಕಲಿಯತಕ್ಕ ಲೆಕ್ಕಪತ್ರ, ಸಣ್ಣಪುಟ್ಟ ಕಾವ್ಯಗಳನ್ನು ಸಹ ಮುಗಿಸಿದನು. ಎಂಟನೆ ವರ್ಷ ಪ್ರಾರಂಭವಾದಿತು. ಬಡತನ—ಒಪ್ಪತ್ತು ಊಟ ಶಿಕ್ಕರೆ ಇನ್ನೊಪ್ಪತ್ತಿಗೆ ಇಲ್ಲ. ಇಂಥ ಬಡತನದಲ್ಲಿ—

## ದಾಸಪ್ಪನ ಉಪನಯ

ಶ್ರೀ ಅಶ್ವಥ ನೃಸಿಂಹನ ಸನ್ನಿಧಾನದಲ್ಲಿಯೇ ಶ್ರೀನಿವಾಸಪ್ಪನು ಬಡತನದಲ್ಲಿಯೇ ದಾಸಪ್ಪ ಮತ್ತು ಆನಂದ ಉಭಯರ ಉಪನಯನ ಹೇಗೋ ಗುರ್ವನುಗ್ರಹದಿಂದ ಮಾಡಿ ಗಾಯತ್ರಿ ಮಂತ್ರೋಪದೇಶವನ್ನು ಕೊಟ್ಟು ವೇದೋಕ್ತ ವಿಧಾನದಿಂದ ಹೋಮಾದಿಗಳನ್ನು ಮಾಡಿ, ವಟುಗಳಿಗೆ ಬ್ರಾಹ್ಮಣರಿಂದ ಆಶೀರ್ವಾದ ಮಾಡಿಸಿದನು. ಚಿಕ್ಕ ವಯಸ್ಸಿನ ವಟುಗಳು ಸದಾಚರಣೆಯಿಂದ ತೇಜಃಪುಂಜರಾದರು. ಈಗಿನ ಕಾಲದಲ್ಲಿ ಪುರೋಹಿತರಲ್ಲಿಯೇ ಸಂಧ್ಯಾ ಉಳಿದಂತೆ ಉಳಿಯಲಿಲ್ಲ. ಕಾಲ ಕಾಲಕ್ಕೆ ತ್ರಿಕಾಲ ಸಂಧ್ಯಾ ಮಂತ್ರಾಭ್ಯಾಸನಡೆಯಿತು. ಅದರಲ್ಲಿಯೂ

ಸಹ ದಾಸಪ್ಪನ ಅತಿಸ್ಫೂರ್ತಿಮೇಲಾಗಿ ತೋರಿತು. ಆದರೂ ಪ್ರಾರಬ್ಧ ವಶಾತ್ ಬಡವರನುಕ್ಕಳಲ್ಲಿ ಏನು ಗುಣಗಳಿದ್ದರೂ ಲೋಕರಿಗೆ ಅದು ಕಣ್ಮರೆಯಾಗಿ ಬಡವರೆಂದು ಹೀಯಾಳಿಸತೊಡಗಿದರು. ನಾಲ್ಕಾರುಜನ ರನ್ನು ಸಂರಕ್ಷಣೆಮಾಡಲು ಶ್ರೀನಿವಾಸಪ್ಪನಿಗೆ ಶಕ್ತಿ ಸಾಲದು. ಆಗ್ಗೆ ದೇಶ ಪದ್ಧತಿ ಪ್ರಕಾರ ಹೊಲಗಳಲ್ಲಿ ಜೋಳದ ರಾಶಿಯಾಗುವಾಗ್ಗೆ ತಾನು ಹೋಗುವನು. ಚಿಕ್ಕ ಬಾಲಕರನ್ನು ಕಳುಹುವನು. ಬಂದ ಕಾಳಿನಲ್ಲಿಯೇ ಏನೊ ಕೆಲವುದಿನ ಸಂಸಾರ ಕಾಲಕ್ಷೇಪವಾದಿತು.

ಈ ಬಡತನ ಬ್ರಹ್ಮೇತಿಯಲ್ಲಿ ಶಾಲೆಗೆ ಕಳಿಸಿ ಓದಿಸುವ ಭರವು ಕಡಿಮೆಯಾಗುತ್ತ ಬಂದಿತು ದಾಸಪ್ಪನಿಗೆ ಚನ್ನಾಗಿ ತಿಳುವಳಿಕೆ ಬಂದಿತು. ಅಂತರಂಗದಲ್ಲಿ ಹರಿಯನ್ನು ಮರೆತಿರಲಿಲ್ಲ. ಕೆಲವು ವರ್ಷಾ ನಂತರ ಸುಮಾರು ೧೪ನೇ ವಯಸ್ಸಿನಲ್ಲಿ—

## ದಾಸಪ್ಪನ ವಿವಾಹ

ತಮ್ಮ ಆಪ್ತರಪೈಕಿ ಅದೇ ಊರಲ್ಲಿರುವ ರೂಪಗುಣವತಿಯಾಗಿಯೂ ಸುಶೀಲೆಯಾಗಿಯೂ ಇರುವ ೮ ವರುಷ ವಯಸ್ಕಳಾದ ನೃಸಿಂಹದೇವರ ಭಕ್ತಳಾಗಿ ನೃಸಿಂಹದೇವರಿಗೆ ವಿಭೂತಿ ಸ್ಥಾನಾಪನ್ನವಾದ ಅರಳೆಗಿಡದ ಪೆಸರಿಟ್ಟ "ಅರಳಮ್ಮ" ನವರನ್ನು ಕೊಟ್ಟು ವಿಧ್ಯುಕ್ತ ಪ್ರಕಾರವಾಗಿ ಸುಮುಹೂರ್ತದಲ್ಲಿ ಲಗ್ನಮಾಡಿ ಮಂಗಳಾಷ್ಟಕವನ್ನು ಹೇಳಿದರು. ದಂಪತಿಗಳು ಲಕ್ಷ್ಮೀನಾರಾಯಣರಂತೆ ಜ್ಞಾನಿಗಳಿಗೆ ತೋರಿದರು. ಬಡವರೆಂದರೆ ದುರ್ಲಕ್ಷ್ಯ.

ಹೀಗೆ ಬಡತನದಲ್ಲಿ ಬ್ರಹ್ಮೇತಿಯೊಂದು ಎಂಬಂತೆ ವಿವಾಹನಂತ ರವೂ ಬಹುಕಷ್ಟಕ್ಕೊಳಗಾಗದು. ಅನೇಕ ಜನರ ಸೇವಾ ಮಾಡಿದರು. ಲೋಕದಲ್ಲಿ ಅಪಹಾಸ್ಯಕ್ಕೆ ಗುರಿಯಾದರು.

ಒಂದು ಕಾಲ ಈ ದಾಸಪ್ಪನ ಸೋದರಮಾವನ ಮನೆಯಲ್ಲಿ ಮದುವೆ. ಆ ಮದುವಿಗೆ ಈ ಬಡವರನ್ನು ಕರೆಸಲಿಲ್ಲವಾದರೂ– ಬಂಧು ಬಳಗದವರನ್ನೆಲ್ಲ ನೋಡುವ ಆಶೆಯಿಂದ ಕೂಸಮ್ಮನು ಮಕ್ಕಳಸಹಿತ ಹೊರಟಳು. ಬಡವಿಯಾದ ಕೂಸಮ್ಮ ಕೂಸಮ್ಮನ ಮಕ್ಕಳಿಗೆ ಆದ

ರೋಪಚಾರವೆಲ್ಲಿ ? ಊಟಕ್ಕೆ ಸಹ ಮರೆತೇಬಿಡುವರು. ಮಲಗಲೂ ಸ್ಥಳವಿಲ್ಲ, ಎಲ್ಲೆಯೊಂದಕಡೆ ದಾಸಪ್ಪ ಒರಗಿದ್ದನು. ತುಸು ಕತ್ತಲಿರುವಾಗ ಮನೆಯ ಯಜಮಾನ ಎದ್ದು ಕತ್ತಲಲ್ಲಿ ದಾಸಪ್ಪನನ್ನು ನೋಡಿ ಗಾಬರಿಯಾಗಿ ಇಲ್ಲ್ಯಾಕ ಒರಗಿರುವಿಯೋ ಎಲ್ಲಿಯಾದರೂ ಹೋಗಬಾರದೆಂದು ಶಿಟ್ಟಿನಿಂದ ನುಡಿದನು. ಹರಿಯಾಜ್ಞೆ ಮೀರದೆಂದು ಮನದಿ ಅರಿತ ದಾಸಪ್ಪನಿಗೆ ಅಂತರಂಗ ದೃಢವಿದ್ದರೂ, ಲೋಕಜನರಂತೆ ನಟಿಸಿದನು. ಊಟಕ್ಕೆ ಸಿಗದಿದ್ದರೂ ಸಾಕು ಅವಮಾನಕ್ಕೆ ಗುರಿಯಾದೆನಲ್ಲ, ಎಂಬ ಸಂಕಟವೃತ್ತಿ ತೋರುತ್ತ ಹಿರಿಯರಿಗೆ ಪೇಳದೆ ಹೊರಗೆ ಹೊರಟ.

( ಇದು ಮೋಹನದಾಸರ ಪರಂಪರೆಯಲ್ಲಿ ಬಂದ ನಿಜವಾದ ಐತಿಹ್ಯ )–ಇದಕ್ಕೆ ಅವರ ತಮ್ಮಂದಿರಾದ ಹಯವದನ ವಿಠ್ಠಲರು, ಮತ್ತು ಕೇಶವವಿಠ್ಠಲರ ಕವನಗಳೆ ಆಧಾರ ಪದ (೬) ನು|ಡಿ ೨೩ ರಲ್ಲಿ.

" ವರತುಂಗಭದ್ರಾತೀರದ ಗ್ರಾಮ ಅಶ್ವಥ್ಥ | ನರಸಿಂಹ ಚೀಕನಬರಿವಿ ಎಂಬ ಗ್ರಾಮ | ದಿರುತಿಪ್ಪ ಶ್ರೀನಿವಾಸಪ್ಪ ಕೂಸಮ್ಮ ಶ್ರೀ ಗುರುಸೇವೆಮಾಡಿ ಸತತ || ವರಪಡದಳ್ಳೆ ಎರಡೊಂದು ಪುತ್ರರನು | ಹಿರಿಯ ಮಗನಾದ ದಾಸಪ್ಪನೆಂದಿರುವ ನಾಮದಿ | ಕರೆದು ಮುದ್ದಿಸಿಸಾಕಿ ಮುಂಜಿ ಮದುವೆಯ ಮಾಡಿ ಇರುತಿರಲು ಕೆಲವುಕಾಲ || ೨ || ಲೋಕ ಜನರಂತೆ ಲೌಕಿಕದೊಳು ಸಂಚರಿಸಿ | ಈ ಕಾಯಗೋಸುಗಾನೇಕ ಜನರ ಸೇವೆ | ಕಾಕಪ್ಪಿಯಾಗಿ ವಸ್ತ್ರಾನ್ನಕಾಣದೆ ಮರುಗಿ ಸಾಕುವರಿಲ್ಲೆನುತಲಿ || ಬೇಕಾದ ದೇಶವನು | ತಾಕಿ ಚೋರರು ವಸ್ತ್ರಗಳ ಅಪಹರಿಸ ಇ | ನ್ಯಾಕೆ ಬಂಧು ಬಳಗವೆನುತ ಅಲ್ಲಿಂದ ನಾಕನದಿಮೀವೆನೆಂದು || ೩ || ಹಿರಿಯರಿಗೆ ಪೇಳದಲೆ ತೆರಳಿ ಯಾತ್ರೆಗೆ ಪೋಗಿ | ಎರಟೆಂಟು (೨×೮=೧೬) ವತ್ಸರದ ತರುಳಪ್ರಾಯದಲಿಂದ | ಸರುವ ತೀರ್ಥಕ್ಷೇತ್ರಮಿಂದು ವಿಂಶತಿವತ್ಸರಕೆ ತಿರುಗಿನ್ನು ಬಂದು || ವರಮಾತೃ ಪಿತೃಸಹೋದರರ ಸಹವಾಗಿ | ಬೆರತು ಮಾನವರಂತೆ ಸಂಸಾರವೃತ್ತಿಯಲಿ ಇರುತಿರ್ದ ||

ಮತ್ತು ಮುಂದೆ ಪದ ೭ ರಲ್ಲಿ ನುಡಿ (೧) ದೇಶದೊಳಗೆ ತುಂಗ ತೀರ ಅಶ್ವಥ್ಥನ ನರಕೇಸರಿಯ ಚೀಕನಬರಿವಿ ಎಂಬ ವಾಸವಾಗಿದ್ದ

ಶ್ರೀನಿವಾಸನ ಉದರದಲಿ । ಲೇಸಾಗಿ ಜನಸಿದರು ಭೂಸುರ ರೂಪದಲ್ಲಿ ||೧|| ವಾರಣಾಸಿಯಾತ್ರೆ **ಧೀರತನದಲಿ** ಪೋಗಿ ಮೂರೊಂದುವತ್ಸರಕೆ ತಿರುಗಿ ಬಂದು ||" ಎಂದು ಹೇಳಿರುವರು. ಮುಂದೆ ಪದ ೫೨ ರಲ್ಲಿ ಕೇಶವವಿಠ್ಠಲರು ಸಂಕ್ಷೇಪದಲ್ಲಿ ದಾಸರ ಚರಿತ್ರೆಯನೆಲ್ಲ ವರ್ಣಿಸಿರುವರು. "ವಿಜಯ ರಾಯರ ಪಾದಕಮಲ ಭಜಿಸಲಾಕ್ಷಣ, ದಿ । ಗ್ವಿಜಯಮಾಡಿ ಸುಜನರನ್ನ ಪೊರವನನುದಿನ || ಪಲ್ಲ || ದಾಸಪ್ಪನೆಂಬ ನಾಮದಿಂದ ಕರೆಸುತ । ಉದರಗೋಸುಗದಿ ಪರರಬಳಿಯ ಆಶ್ರೈಸುತ । ಯೇಸುಪರಿಯು ಬಡ ತನವು ಸೋಸಿವಣೆಯುತ । ಕ್ಲೇಶಗೊಂಡು ಸುಲಿಸಿಕೊಂಡು ಕಾಶಿ ಪೋಗುತ || ೧ || **ವಾಸವಾಗಿ ಸನ್ಯಾಸಿವೇಷಧರಿಸುತ** ನಿತ್ಯಬ್ಯಾಸರ ದಲೆ ವೃತಗಳು ಉಪವಾಸಮಾಡುತ || ರಾಶಿ ರಾಶಿ ಜನರಕೂಡಿ ದೇಶ ಚರಿಸುತ । ಮ್ಯಾಲೆ ಕಾಶಿ ಬಿಟ್ಟು ಶೇತುರಾಮೇಶನ್ನಹುಡುಕುತ || ೨ || ತಿರುಗಿ ತಿರುಗಿ ಚೀಕಲಾಪರಿಗೆ ಬಂದನು । ಕಂಡು ಗುರುತುಹಿಡಿದು ಆ ಕ್ಷಣದಲಿ ಕರದುವೈದರು । ಪರಮ ಸಂತೋಷದಿಂದ ಭರಿತರಾದರು । ವೈ । ನೆರದ ಶೋಭನಾದಿಗಳನು ತ್ವರಿತಮಾಡ್ದರು || ೨ ||

ಇತ್ಯಾದಿ ದಾಸಪ್ಪನ ೨೦ ವರುಷ ಪರಿಯಂತರ ಚರಿತ್ರೆ ಹೇಳಿರು ವರು. ಸಾಕಷ್ಟು ಆಧಾರವಾಗಿವೆ. ಇವೆಲ್ಲ ಪ್ರಮಾಣವನ್ನು ಬಿಟ್ಟು ದಾಸಪ್ಪನಿಗೆ ಪೂರ್ವವಯಸ್ಸಿನಲ್ಲಿ ಮದುವೆ ಯಾಗಿದ್ದಿಲ್ಲವೆಂದು ಕೆಲವರು ಹೇಳಿದ್ದಾರೆ. ಅದು ಸರಿಯಾದುದಲ್ಲವೆಂದು ತೋರುತ್ತದೆ.

ಮತ್ತು ಕೆಲ ಮಹನೀಯರು ವಿಜಯದಾಸರ ಕಥಾ ಹರಿಕೀರ್ತನೆ ಪ್ರಸಂಗದಲ್ಲಿ ದಾಸಪ್ಪನು ಬಡತನ ಅನುಭೋಗಿಸಿ ಬಡತನ ತಾಳಲಾರದೆ ಭಾಗೀರಥಿಗೆ ಹೋಗಿ ಪ್ರಾಣಕೊಡುವೆನೆಂದು ಕಾಶಿಗೆ ಹೊರಟನೆಂದು ಹೇಳುತ್ತಾರೆ. ಕೀರ್ತನಕಾರರಂತೆ ದಾಸಪ್ಪನೇನು ಅಜ್ಞನೆ. "ಲೋಕ ಜನರಂತೆ ಲೌಕಿಕದೊಳು ಇದ್ದು ಕಾಕಪ್ಪಿಯಾಗಿ ವಸ್ತ್ರಾನ್ನಕಾಣದಲೆ ನಾಕನದಿಮೊವೆನೆಂದು" "ವಾರಣಾಸಿಯಾತ್ರೆ ಧೀರತನದಿ ಪೋಗಿ" ರುವರೆಂದು ಹೇಳಿದ್ದಾರೆ. ಅವರಿಗೆ ಪ್ರಾಣಭಯವೆತ್ತಣದು ! ಎಂದು ಅವರ ತಮ್ಮಂದಿರ ವಚನ. ಇನ್ನು ಅನೇಕ ಅಪಲಾಪಗಳನ್ನು ಮಾಡಿ

ಊಹೆ ಮಾಡುವರು. ಅಪರೋಕ್ಷಜ್ಞಾನಿಗಳಿಂದ ರಚಿತವಾದ ಪದಗಳ ಆಧಾರ ಮೇಲಿಂದ ನಿಜವಾದ ಸಂಗತಿ ಪೇಳುತ್ತ ದಾಸರಲ್ಲಿ ಮನುಜರಂತೆ, ಅಜ್ಞಾನಾದಿಗಳನ್ನು ಕಲ್ಪಿಸದೆ ದಾಸರ ಅನುಗ್ರಹಕ್ಕೆ ಪಾತ್ರರಾಗಬೇಕೆಂಬ ಕನಿಕರದಿಂದ ಬಿನ್ನೈಸಿದ್ದೇನೆ. ದಾಸರ ಚರಿತ್ರೆಗೆ ಸರಿಯಾದವು ಶಿಷ್ಯರ ವಚನಗಳೇ ಸಾಕಷ್ಟು ನಿಜವಾದ ಆಧಾರ.

ಇಲ್ಲಿ ಮುಂಖ್ಯಾಂಶ ವಿಚಾರಾರ್ಹವಾದುದು. ದಾಸಪ್ಪನ ಅತಿ ಬಡತನ, ನಾನಾತರದಿಂದ ಕಷ್ಟಪಡುವಿಕೆ, ಚೋರರಿಂದ ಉಪದ್ರವ ಸಹಿಸಲಾರದ ಮಾನವರಂತೆ ದಾಸಪ್ಪನಲ್ಲ. ಇವರು ಅಗಾಮಿಸಂಚಿತ ಕಳೆದು ಹರಿಯಾಜ್ಞೆಯಂತೆ ಪ್ರಾರಬ್ಧ ಅನುಭೋಗಿಸಿ ಸಜ್ಜನರನ್ನು ಉದ್ಧರಿಸಲು ಮರ್ತ್ಯಲೋಕಕ್ಕೆ ಬಂದ ಜ್ಞಾನಿಗಳು. "ಆಗಾಮಿಸಂಚಿತ ಅಖಿಳ ಕರ್ಮವಿದೂರ ಭೋಗ ಪ್ರಾರಬ್ಧ ಭುಂಜಿಸುವ ಭೂದೇವ ||" ಇತ್ಯಾದಿ (ಗೋಪಾಲದಾಸರ ವಚನ ಪುಟ ೧೫ ನೋಡಿ) ಇವರಿಗೆ ಬಡತನ ದಾರಿದ್ರದೋಷವೆತ್ತಣದು. ಇಲ್ಲಿ ಅನುಗುಣವಾದ ಐತಿಹ್ಯ ಮೋಹನ್ನ ದಾಸರ ಪರಂಪರೆಯಲ್ಲಿ ಬಂದ ಶ್ರೀ ವೈ. ವಾಸಿಗಳಾದ ವೃಧರಾಗಿರುವ ವೆಂಕೋಬದಾಸರಿರುವಾಗ್ಗೆ ಅನೇಕ ಚರಿತ್ರೆಗಳನ್ನು ಪೇಳುವರು. ಅದರಲ್ಲಿ ಇದೊಂದು ಮುಖ್ಯವಾಗಿದೆ.

ದಾಸಪ್ಪನು ಬಡತನ ನಿಮಿತ್ಯ ಪರರಲ್ಲಿ ಸೇವಾ ಮಾಡಿದನು. ತಮ್ಮ ಸೋದರಮಾವನಲ್ಲೇ ನೀರುತರಲು ಇದ್ದ. ಲಗ್ನದಲ್ಲಿ ಅವಮರ್ಯಾದೆಯಾಗಿ ಮುಂದಿನ ಮಹತ್ತರ ಕಾರ್ಯವನ್ನರಿತ ಅಂತರ ಜ್ಞಾನಿಯು ಹಿರಿಯರಿಗೆ ಹೇಳದೆ ಹೊರಟು ದಾರಿಯಲ್ಲಿ ಕಳ್ಳರಿಂದ ಸುಲಿಸಿಕೊಂಡು ಉತ್ತರ ಯಾತ್ರಾಕ್ಕೆ ತೆರಳುವ ಬಾವಾಜಿಗಳ ಗುಂಪಿನಲ್ಲಿ ಸೇರಿದನು. ಆಗ್ಗೆ ಈ ಹೊಸ ಮನುಷ್ಯನನ್ನು ನೋಡಿ, ಬಾವಾಜಿಗಳಿಗೆ ಗುರುವಾದ ಬಾವಾಜಿ, "ಅರೇತುಮ್ ಕೋನ್ ಹೋ–ಹಮ್ಮ ಬೈರಾಗಿಯೋಂಮೆ ಆಕರ ಕಿಸವಾಸ್ತೆಮಿಲೆ" ಹೀಗೆ ಹಿಂದಿ ಭಾಷೆಯಲ್ಲಿ ಕೇಳಲು (ನೀನಾರು ಬೈರಾಗಿಗಳಾದ ನಮ್ಮನ್ನೇಕೆಬೆರತೆ) ದಾಸಪ್ಪನ–ಸ್ಫೂರ್ತಿ ಹಿಂದಿ ಭಾಷೆಯಲ್ಲಿ ಆದುದೇನಚ್ಚರ? =ಗುರೂಜಿ ವೈಭಿ ಏಕ ಸಾಧಕ

ಪುರುಷ ಆಪ ತೈಸೆ ಜೈಸೆ ಸಜ್ಜನ ಸಮಾಗಮಸೆ ತೀರ್ಥಯಾತ್ರಾಕೆ ಇಚ್ಛಾಸೆ ಆಯಾಂಹು. ಗುರು=ಅರೆರೆ ತುಮತೊ ಗೃಹಸ್ಥಾಶ್ರಮಿ ದುಹೆರಾ ಯಜ್ಞೋಪವೀತಾ ಹೈ. ಹಮ್ ಬ್ರಹ್ಮಚಾರಿ ಬೈರಾಗಿ ಸಂಘಮೆ ತುಮ್ಹಾರಾ ಚರಿತಾರ್ಥ ಕೈಸೆಹೋಗಾ ಚಲೇಜಾವ" ಎಂದನು.

ಅಯ್ಯೋ ಪ್ರಾರಬ್ಧವೆ ಇಲ್ಲಿಯೂ ದಾಸಪ್ಪನಿಗೆ ಇಂಬು ದೊರೆಯ ದಂತಾಯಿತೆ? ಎಷ್ಟು ಕಷ್ಟ? ಆಗ್ಗೆ ದಾಸಪ್ಪನು ಖಿನ್ನಮನಸ್ಕನಾಗಿ ನಿಲ್ಲಲು.

ಗುರು :— ಅರೆಪಿತಾ, ಸಚ್ಚ ಕಹೋ ಭೀರುಮತ್ ಹೋ.

ದಾಸಪ್ಪ :— ಗುರುಜಿ ಚರಣ ಆಗೆ ಸನ್ನಿಧಿಮೆ ಸಚ್ಚ ವಿನಂತಿಕರ ತಾಹೂ, ಮೇರೆ ವಿವಾಹತೋ ಹೋಗಯಾಹೈ. ಲೇಕಿನ್, ಸಂಸಾರ ಅಸಾರಪಾಕರ್, ತೀರ್ಥಯಾತ್ರಾಕೆ ಗರಜಸೇ, ಆಪಕೆ ಚರಣಸನ್ನಿಧಿಮೆ ಆಯಾಂಹು.

ಗುರು :— ಅಚ್ಛಾ ಬಹುತ ಅಚ್ಛಾ ಫೀರ ಕಭೀ ಆಪ ಪಲಟಕೆ ಸಂಸಾರ ವೃತ್ತಿಮೇ ಜಾಕರ ವಿಷಯಲಂಪಟಮೆ ಪಡೇಂಗೆ ?

ದಾಸಪ್ಪ :— ನಹಿನಹಿ ಗುರುಜಿ ಆಜನ್ಮವಿಷಯ ವಿಮುಖತಾಸೆ ಸಂಸಾರ ತ್ಯಾಗ ಕರುಂಗಾ ವಿಷಯಲೋಲುಪತಾಮೇ ನಹಿಪಡೂಂಗಾ—

ಗುರು :— ಶಪಥಪೂರ್ವಕ ಕಹತೇಹೋ ?

ದಾಸಪ್ಪ :— ಸಚ್ಚಾಶಪಥಪೂರ್ವಕ ಬಿನಂತಿ ಕರತಾಹೂ ಕಭೀಭೀ ವಿಷಯಲೋಲುಪತಾಮೆ ನಹಿ ಪಡುಂಗಾ ಜಿತೇಂದ್ರಿಯ ಬ್ರಹ್ಮಚರ್ಯ ವೃತ್ತೀಸೆ ಭಗದ್ಗುಣಾನುವಾದಗಾವುಂಗಾ.

ಅಹೋ ದಾಸಪ್ಪನ ಎಂಥನಿಜವಾದ ದೃಢಪ್ರತಿಜ್ಞಾ ? ಇದನ್ನು ಕೇಳಿ ಬಾವಾಜಿ ಗುರು ಸಂತೋಷ ಮನಸ್ಕನಾಗಿ—

ಗುರು :— ಅಚ್ಛಾ, ಬೋಲೋ, ತುಮ್ಹಾರಾ ನಾಮ ಕ್ಯಾ ಹೈ.

ದಾಸಪ್ಪ :— ಗುರುಜಿ ಮೇರಾನಾಮ ದ್ವಾಸ ಹೈ ಕಾನಡಿ ಮುಲಕ ಮೆ, ಮೇರಾನಾಮ ದಾಸಪ್ಪಾ ಪುಕಾರತೆಂ ಹೈ.

ಗುರು :– ಬಹುತಅಚ್ಛಾ ಅಚ್ಛಾ ಹೈ. ಈಶ ಭಜನ್‌ಕೇಲಿಯೇ "ದಾಸ" ಪಹಿಲಾಬನೆ ತುಮ್ಹಾರಾ ನಾಮಹಿದಾಸ ಹೈತೋ ದೈವತಾ ಪ್ರೀತಿಹುವಾ. ಚಲೋ ಹಮಾರೆಸಾತ, ಮಗರ ತುಮ್ಮ ಭೇಷಬದಲ್ ಕರ್ ಸನ್ಯಾಸಿ ಬಾವಾಜಿ ವೇಷಧಾರಣಕರನಾ ಅವಶ್ಯ ಹೈ.

ದಾಸಪ್ಪ :– ಬಹುತಅಚ್ಛಾಗುರುಜೀ ಎಂದನು. ಮತ್ತು ಅವರು ಕೊಟ್ಟ ಚಿನ್ಹಗಳನ್ನು ಧಾರಣಮಾಡಿ ಗ್ರಾಮೈಕರಾತ್ರಿಯಂತೆ ಭಿಕ್ಷಾಟನ ಮಾಡುತ್ತ ಶ್ರೀಹರಿ ಗುಣಗಾನಮಾಡುತ್ತ ಸನ್ಯಾಸವೇಷದಿಂದಲೇ ಕಾಶಿಗೆ ಹೊರಟನು. ಆ ಭೈರಾಗಿಗಳ ಸಂಗಡ ಬೆರತೆ ಅನೇಕ ವ್ರತ ಉಪವಾಸ ಮಾಡಿದನು. ಇಂಥ ಅನೇಕ ಜನರ ಸಂಗಡಕೂಡಿ ನಾಲ್ಕುವರುಷ ಪರಿಯಂತರ ತೀರ್ಥಯಾತ್ರೆಚರಿಸುತ್ತಾ ಕಾಶಿಯಾತ್ರೆ ಮುಗಿಸಿ ದಕ್ಷಿಣ ಯಾತ್ರೆಗೆ ಹೊರಡಲು ಸಿದ್ಧರಾದ ಬೈರಾಗಿಗಳ ಸಮೂಹದಲ್ಲಿಯೇ ಬೆರತು ರಾಮೇಶ್ವರನ ದರ್ಶನಾರ್ಥವಾಗಿ ಪ್ರಯಾಣಬೆಳಸುತ್ತ ತುಂಗಾತೀರವಾದ ಚೀಕನಬರಿವಿಗೆ ಬಂದು ನದಿಯ ವಡವೇಸತಿಯಾಯಿತು. ವ್ರತನೇಮ ಉಪವಾಸದಿಂದ ಯಾತ್ರೆ ತೀರ್ಥದಲ್ಲಿ ದಾಸಪ್ಪನ ಮನೋನೈರ್ಮಲ್ಯ ಹೆಚ್ಚಿತು ತೇಜಃಪುಂಜನಾದನು.

ಚೀಕನಬರಿವಿ ನನ್ನ ಜನ್ಮಭೂಮಿ ಮನೆಮಾರು ತಂದೆತಾಯಿ ಹೆಂಡತಿ ಎಂಬೊ ಆಶೆ ಕನಸಿನಲ್ಲಿ ಸಹನೆನೆಯಲಿಲ್ಲ. ಪ್ರಾತಃಕಾಲ ಸ್ನಾನ ಸಂಧ್ಯಾದಿಗಳನ್ನು ತೀರಿಸಿ ನಿತ್ಯಕ್ರಮವಾದ ಭೈರಾಗಿಗಳ ಭಜನಾ ನಂತರ ಗುರುಗಳು ದಾಸಪ್ಪ ಇನ್ನೊಬ್ಬ ಶಿಷ್ಯರಿಗೆ ಬೈರಾಗಿಗುರು–

ಗುರು :– ತುಂಗಾಮಂಗಲಜಲಮೇ ಸ್ನಾನಪಾನಸೇ ಪವಿತ್ರ ಹೋಗಯೆ. ಹೇದಾಸ ತುಮ್ಹಾರೆ ಸಾಥಿಂಯೋಸೆ ಜಾಕರ–ಭಿಕ್ಷಾಟನ ಕರಕೆ ಆಟಾಲೇಕರ ಆವ ಎಂದು ಆಜ್ಞಾಮಾಡಲು ಗುರುವಾಜ್ಞೆಶಿರಸಾ ವಹಿಸಿ–ದಾಸಪ್ಪ ಒಂದು ಜೋಳಿಗೆಯನ್ನು ಹಿಡಿದುಕೊಂಡು ಚೀಕಲ ಪರಿವಿ ಊರಲ್ಲಿ ಭಿಕ್ಷಾಕ್ಕೆ ಹೊರಟನು.

ಬೈರಾಗಿವೇಷವನ್ನು ಧರಿಸಿದ ದಾಸಪ್ಪನನ್ನು ಗುರುತುಹಿಡಿಯುವ ರಾರು ? ನಾಲ್ಕುವರುಷಗಳಿಂದ ದಾಸಪ್ಪನು ಮಾಯವಾಗಿದ್ದವನನ್ನು

ಮರತೇ ಬಿಟ್ಟಿದ್ದರು. ತಂದೆ ತಾಯಿ ಹೆಂಡತಿ ಮೊಲೆಯುಣ್ಣಿಸಿದ ಮುದುಕಿ ಇವರಿಗೆ ಮಾತ್ರ ದಾಸಪ್ಪನಚಿಂತೆ. ದಾಸಪ್ಪ ತನ್ನ ಊರಲ್ಲಿ ನಾಚದೇ ಭಿಕ್ಷಾಕ್ಕೆ ಹೊರಟನು ಪ್ರತಿಮನೆಯ ಎದುರಿಗೆ ನಿಂತು "ಜೈಸೀತಾರಾಮ" "ಭವತಿಭಿಕ್ಷಾಂದೇಹಿ" ಎಂದು ಒದರಿ ಅನ್ನವನು ಹಿಟ್ಟು ಹಾಕಿದವನ್ನು ಸ್ವೀಕರಿಸುವನು. ಇಲ್ಲವೆ ತಡಮಾಡದೇ ಮುಂದೆ ಸಾಗುವ.

ತಮ್ಮ ಮನೆಯ ಮುಂದೆ ಬಂದು ನಿಂತು ದಾಸಪ್ಪನು ಬಾವಾಜಿ ವೇಷದಿಂದ "ಜೈಸೀತಾರಾಮ" ಎಂದು ಕೂಗಿದೊಡನೆ ಬಡತನ ದಲ್ಲಿಯೂ ಭಿಕ್ಷುಕರನ್ನು ಅನಾದರಮಾಡದೇ ಇದ್ದ ಜನನಿಯು ತನ್ನ ಸೊಸೆಯಾದ ಅರಳಮ್ಮನಿಗೆ ಭಿಕ್ಷಾನೀಡಲು ಹೇಳಿದಳು. ಆಗ್ಗೆ ಅರಳ ಮ್ಮನು ಬೊಗಸಿತುಂಬಾ ಹಿಟ್ಟುತೆಗೆದುಕೊಂಡು ತಡಮಾಡದೇ ಹೋಗಿ ಬೈರಾಗಿ ಜೋಳಿಗೆಯಲ್ಲಿ ಹಾಕಿ ನಮಿಸಿ ಹಿಂದೆ ತಿರುಗುವದರಲ್ಲಿಯೇ ಮನೆಯ ಮುಂದೆ ಕುಳಿತಿದ್ದ ದಾಸಪ್ಪನಿಗೆ ಮೊಲೆಯುಣಿಸಿದ ಮುದುಕಿಯು ದಾಸಪ್ಪನನ್ನು ಗುರುತುಹಿಡಿದು ತಕ್ಷಣವೇ ಎದ್ದು **ಅಯ್ಯೋ ನನ್ನ ದಾಸಪ್ಪನೆಂದು ಬಿಗಿದಪ್ಪಿದಳು** ಹೆಂಡತಿ ಕಣ್ಣುತುಂಬಾ ನೋಡಿದಳು. ಜನನಿ ಜನಕ ಅನುಜರು ಗುರುತಿಸಿ ತಬ್ಬಿಬಿಟ್ಟರು. ಕಣ್ಣಿನಿಂದ ಆನಂದ ಭರಿತವಾದ ಜಲಸೂಸಿದವು. ಆಗ್ಗೆ ದಾಸಪ್ಪನ ಅಂತಃಕರುಣವು ಕದಲಿತು.

ಅಮ್ಮಾ ಸರಿಯರಿ ನಾನು ನಿಮ್ಮ ಮಗನಾದರೂ ಬೈರಾಗಿ ಬಾವಾಜಿ ಗಳ ಶಿಷ್ಯನಾಗಿದ್ದೇನೆ. ನಾನು ನಿಂದ್ರುವಂತಿಲ್ಲಾ ಎಂದು ಬಿಡಿಸಿಕೊಂಡು ಗುರುವಿದ್ದೆಡೆ ತುಂಗಾದಡಕ್ಕೆ ನಡೆದನು, ಎಲ್ಲರೂ ದಾಸಪ್ಪನನ್ನು ಹಿಂಬಾಲಿಸಿದರು.

ಗುರುವೆಡೆಯಲ್ಲಿ ದಾಸಪ್ಪನು ಜೋಳಿಗೆಯನ್ನು ಅರ್ಪಿಸಿ ಸುಮ್ಮಗೆ ನಿಂತನು ಆಗ್ಗೆ ಬೈರಾಗಿ ಗುರುಗಳು "ಯಹಜನಸಮ್ಮರ್ದನ ಕ್ಯಾ ಹೈ" ಎಂದು ಕೇಳಲು ಆ ಲಿಂಗಾಯತ ಮುದುಕಿ ವೃದ್ಧ ಜನನಿ ಜನಕರು ಪ್ರಾಯದ ಪ್ಯೈನೆರದ ಹೆಂಡತಿ ಚಿಕ್ಕ ತಮ್ಮಂದಿರು ಬಾವಾಜಿಯ ಪಾದ ಕೆರಗಿ ಬೇಡಿಕೊಂಡರು. ಎಲೋ ಬಾವಾಜಿಗಳೆ ನಮ್ಮ ಹುಡುಗನನ್ನು

ಮನೆಗೆ ಕಳುಹರಿ. ನಾವು ವೃದ್ಧರು ಈತನ ಧ್ಯಾನದಲ್ಲೇ ಕುಳಿತು ಜೀವ ಕೈಯೊಳಗೆ ಹಿಡಕೊಂಡಿರುವೆವು. ಚಿಕ್ಕ ಪ್ರಾಯದ ಹೆಂಡತಿ ಹಲುಬು ಕೇಳಲಾರಿವೆ. ಕಳುಹರಿ ಕಳುಹರಿ ಎಂದು ಬೇಡಿಕೊಂಡರು. ಆಗ್ಗೆ ಬಾವಾಜಿಗುರು ದಾಸಪ್ಪನ ಮೋರೆ ನೋಡಿ–

ಗುರು :– ಅರೆ ದಾಸ ತುಮ್ ಹಮಾರೆ ಸಾಮುನೆ ಝೂಟಾ ಪ್ರತಿಜ್ಞೆಕರಕೆ ಇಸ ಸಮಯ ಸಂಸಾರಿ ಬನೋಗೆ ? ಎಂದು ಬೆದರಿಸಿದರು.

ದಾಸಪ್ಪ ಸುಮ್ಮಗೆ ನಿಂತನು, ಬಂಧುಗಳು ಈ ದೈನ್ಯವೃತ್ತಿಯನ್ನು ನೋಡಿ ಬಾವಾಜಿ ಗುರುವಿಗೆ ಮನಸ್ಸಿನಲ್ಲಿ ಅಂತಃಕರುಣ ಬಂದಿತು. ನಾಲ್ಕು ವರ್ಷದಲ್ಲಿ ದಾಸಪ್ಪನ ದಿನಾಚರಣೆ ನೋಡಿ ಆತನಲ್ಲಿರುವ ಭಕ್ತಿ ವೈರಾಗ್ಯಕ್ಕೆ ಮೆಚ್ಚಿ ಮುಂದೆ ಈ ದಾಸನು ಒಳ್ಳೇಜ್ಞಾನಿ ಶ್ರೇಷ್ಠನಾಗಿ ನಮ್ಮ ಗುಂಪಿನಲ್ಲಿ ಮಹಾ ಯಶಸ್ವಿಯಾಗುವನೆಂದು ತಿಳಿದ ಆ ಗುರುವು:– ಅರೇ ದಾಸ ತುಮ ತೋ ಕಭಿ ಝೂಟ ನಹಿ ಬೋಲತೆ ಸಚ್ಚಾಕಹೋ ತುಮ್ಹಾರಾ ಮನೋವೃತ್ತಿ ಅಬ ಕ್ಯಾ ಹೈ ಎನ್ನಲು–

ದಾಸಪ್ಪನು :– ಕಭಿ ಮೇರೆ ಚಿತ್ತವೃತ್ತಿ ನಹಿ ಬದಲತಾ. ಗುರು ಸೇವಾ ಕರತೆ ಹುಯೇ ಆಪಕೆ ಚರಣ ದರ್ಶನ ಕರತಾ ರಂಹುಗಾ.

ಗುರು :– ಸಚ್ಚೇಭಕ್ತಕಾ, ಯುಹ ದೃಢವಿಶ್ವಾಸ ಹೈ ಭಗವತ್ ತುಮಪರ ಕೃಪಾಕರೆ ಇಷ್ಟೆನ್ನುವದರಲ್ಲಿ ಜನನಿ ಜನಕರು ಬಂಧುಗಳು ಬಹು ದೈನ್ಯವತ್ತಿಗಳಾಗಿ ಬೇಡಿಕೊಳ್ಳಹತ್ತಿದರು. ಆಗ್ಗೆ ಜ್ಞಾನಿಶ್ರೇಷ್ಠನಾದ ಬಾವಾಜಿಗುರು.

ಗುರು :– (ತನ್ನ ಜ್ಞಾನದೃಷ್ಟಿಯಿಂದ ನೋಡಿ) ಅಚ್ಛಾ ಪ್ರಾರಬ್ಧ ಅನುಭೋಕ್ತವ್ಯ ಅಭಿ ಹೈ. ಪರಮಾತ್ಮಾಕೆ ಇಚ್ಛಾನುಗುಣಸೆ ಚಲನಾ ಹಮಾರಾ ಕರ್ತವ್ಯ ಹೈ. ಅರೇ ದಾಸ–ತುಮ ಇನಕೆ ಸಾಥ ಜಾವ–ಸಂಸಾರ ವೃತ್ತಿಮೆ ಪದ್ಮಪತ್ರ ಜಲಮೆ ರಹೆ ಜೈಸಾ ರಹಕರ ಸಂಸಾರ ತರಣಕರೋ. ಪರಮಾತ್ಮಾಕು ಕಭಿ ನ ಭೂಲೋ ಚಲೋ, ಚಲೋ ಪಹಿಲೇ ಮಾತಾಪಿತೃಕೆ ಸೇವಾ ಸಂತೋಷ ಕರೋ ಭಗವತ್ ಕೃಪಾ ತುಮಪರ ಹೋಜಾಯಗಾ.

ಎಂದು ಆಜ್ಞಾಪಿಸಲು ಅಚ್ಚಾಗುರುಜಿ ಎಂದು ನಮಿಸಿ ಗುರು ವಾಜ್ಞೆ ಕೈಕೊಂಡು ಜನನಿ ಜನಕರ ಸಂಗಡ ಊರಿಗೆ ನಡೆದನು. ಸ್ವರೂಪೋದ್ಧಾರಕರಾದ ನಾರದ ಮಹರ್ಷಿಗಳೇ, ಬಂದು ಬೈರಾಗಿ ರೂಪದಿಂದ ಸಕಲ ಸನ್ಯಾಸಿ ಧರ್ಮಗಳನ್ನು ಪ್ರೇರಿಸಿದರೆಂದು ಆರ್ಯವಚನದಲ್ಲಿ ನಂಬಿಕೆ ಇಡಲು ಕಿಂಚಿತ್ತಾದರೂ ಸಂದೇಹವಿಲ್ಲ.

"ನಿತ್ಯ ಬ್ಯಾಸರದಲೆ ವ್ರತಗಳು ಉಪವಾಸವಮಾಡುತ। ರಾಶಿ ರಾಶಿ ಜನರ ಕೂಡಿ ದೇಶಚರಿಸುತ ॥ ವ್ಯಾಲೆ ಕಾಶಿಬಿಟ್ಟು ಸೇತುರಾಮೇಶನ್ನ ಹುಡುಕುತಾ ॥ ೨ ॥ ತಿರುಗಿ ತಿರುಗಿ ಚೀಕನಾಪರಿಗೆ ಬಂದನು ಕಂಡು। ಗುರುತು ಹಿಡಿದು ಆ ಕ್ಷಣದಲಿ! ಕರದು ಪೈದರು। ಪರಮ ಸಂತೋಷ ದಿಂದ ಭರಿತರಾದರು। ವ್ಯೆ। ನೆರದ ಶೋಭನಾದಿಗಳನು ತ್ವರಿತ ಮಾಡ್ದರು ಎಂಬೊದೆ ಮೂಲಾಧಾರ.

ಇಂತು ದಾಸಪ್ಪನು ಹದಿನಾರುವರುಷ ಪ್ರಾರಂಭಿಸಿ ನಾಲ್ಕು ವರುಷ ಉತ್ತರಯಾತ್ರೆ ಚರಿಸಿ ಪುನಃ ಸಂಸಾರದಲ್ಲಿ ಕಾಲಕ್ಷೇಪ ಪ್ರಾರಂಭ.

## ದಾಸಪ್ಪನವರ ಸಂಸಾರವೃತ್ತಿ

"ಎರಡೆಂಟುವತ್ಸರದ ತರುಳ ಪ್ರಾಯದಲಿಂದ। ಸರುವತೀರ್ಥ ಕ್ಷೇತ್ರಮಿಂದು। ವಿಂಶತಿವ। ತ್ಸರಕೆ ತಿರುಗಿನ್ನುಬಂದು॥ ವರಮಾತೃ ಪಿತೃಸಹೋದರರ ಸಹವಾಗಿ। ಬೆರತು ಮಾನವರಂತೆ ಸಂಸಾರ ವೃತ್ತಿ ಯಲಿ। **ಎರಡೇಳುವರುಷ 'ಇರುತಿದ್ದ**ು ಮೆಲ್ಲನೆ। ಹರಿವರಕೃಪೆಯು ಆಗೆ ತಿಳಿದು" ॥ ೨ ॥ (ಹಯವದನ ವಿಠ್ಠಲರು) ಮತ್ತು "ವಾರಣಾಸಿ ಯಾತ್ರೆ **ಧೀರತನದಲಿ ಪೋಗಿ ಮೂರೊಂದುವತ್ಸರಕೆ** ತಿರುಗಿ ಬಂದು। ಸೇರಿಯಾದವಗಿರಿಯ ಧಾರುಣಿಯೊಳಗೆ **ಈರಾರುವತ್ಸರಯಿದ್ದು।** ಮರಳಿ **ಪೋ**ದರುಗಯಕೆ" ॥ ೨ ॥ (ಹಯವದನ ವಿಠ್ಠಲರು) ಸಂಸಾರ ವೃತ್ತಿಯು "**ತಪಸೆ ಸಂಸಾರೆಂದು ಅರಿದನ್ನ**" (ಗೋಪಾಲದಾಸರು) ಮತ್ತು "ವಿನಯಾತಿಶಯದಲ್ಲಿ ಗುರುವರ್ಯರಾ ಸೇವೆ ಘನವಾಗಿ ಮಾಡಿ ಮುದದಿ। ತನುವೆತ್ತಿವರಸರಿತ ತೀರದಾ **ಅಣುಬದರಿ।** ಜನಶ್ರೇಷ್ಠರೊಳು

ಹರಿಯದಾಸಪೆಸರಿಲಿ ಬಂದು। ಘನಯಾದವಾದ್ರಿ ಪಟ್ಟಣದೊಳಗೆ ಯಿದ್ದು ಬಗೆ। ಜನನಿ ಅನುಜಾತುಸಹಿತ ॥ ೨ ॥ ಕೆಲವುದಿನ ಸಂಸಾರ ಗಲಭೆಯೊಳು ಇರುತಿರ್ದು। ಜಲದೊಳಗೆ ಅಂಬುಜವು ವಿಳಿತವಾಗಿರ್ದ ತೆರ। ಹಳಿದುದುಷ್ಟಾಸಿಯನು ಕಳೆದು ಕಡುಮುಮತೆಯನು। ಪುಳಕೋತ್ಸಹಮನದಿತಾಳಿ ॥ ಜಲದೊಳುತ್ತಮವಾದ ಭಾಗೀರಥಿಯಾತ್ರಿ। ಛಲಬಕುತಿಯಿಂದಲಿ ಮಾಡಿ ಮೋದದಿಹರಿಯ। ಹಲವುಬಗೆಲೀಲೆಯನು ಹರುಷದಿಂದಲಿ ಇನ್ನು ತಿಳಿದು ಗುರುಕರುಣಬಲದಿ ॥ ೩ ॥ (ವೇಣುಗೋಪಾಲದಾಸರು)

"ತಿರುಗಿ ತಿರುಗಿ ಚೀಕಲಾಪರಿಗೆ ಬಂದನು ಕಂಡು। ಗುರುತು ಹಿಡಿದು ಆಕ್ಷಣದಿಕರೆದು ವೈದರು। ಪರಮುಸಂತೋಷದಿಂದ ಭರಿತರಾದರು। ಮೈನೆರದ ಶೋಭನಾದಿಗಳನು ತ್ವರಿತಮಾಡ್ದರು ॥ ೩ ॥ ನಿತ್ಯ ಸಂಸಾರದಲ್ಲಾಸಕ್ತರಾಗುತ ದೊಡ್ಡ। ಹತ್ತು ಯಂಟುಗ್ರಾಮುವನ್ನು ವತ್ತಿ ಆಳುತಾ ॥ ಗುತ್ತಿಗೆಯ ಹೊತ್ತರೊಕ್ಕ ವ್ಯಾಲೆಬೀಳುತ। ಇನ್ನು। ಎತ್ತ ಸೇರಲೆಂದು ಭಾಗಿರಥಿಗೆ ಹೋಗುತ ॥ ೪ ॥ ಎಂದು ( ಕೇಶವ ವಿಠಲರು ) ಹೇಳಿದ್ದಾರೆ.

ಈ ಎಲ್ಲ ಅಪರೋಕ್ಷಿಜ್ಞಾನಿಗಳು ದಾಸರಾಯರ ಶಿಷ್ಯರು ದಾಸರ ಕಾಲದಲ್ಲಿದ್ದವರು ಕಂಡು ಕೇಳಿ ಮನನಮಾಡಿ ನಿಜವಾದ, ದಿನಚರಿಯ ವನ್ನು ತೋರಿರುವ ಮಾರ್ಗಾವಲಂಬಿಗಳಾಗಿಯೇ ದಾಸಪ್ಪನವರ ೧೬ ವರ್ಷ ಸಂಸಾರ ವೃತ್ತಿಹೇಗೆಯಿತ್ತೆನ್ನುವ ವಿಚಾರ ಮಾಡುವದು ಒಳ್ಳೇದು ದಾಸಪ್ಪನು ಹಿಂದೆ "ಎರಡೆಂಟುವತ್ಸರದ ತರುಳಪ್ರಾಯ" ಪ್ರಾಯದಲ್ಲಿರುವಾಗ್ಗೆ ಆರ್ಥಿಕಪರಿಸ್ಥಿತಿಯಿಂದ ಮಾನಸೀಕಕ್ಷೋಭೆಗಳುಂಟಾಗಿ, ವೈರಾಗ್ಯತತ್ಪರನಾಗಿ ದೇಶಾಂತರಹೊರಟು, ಬಾವಾಜಿಗಳಲ್ಲಿಬೆರತು, ಬಾವಾಜಿವೇಷವನ್ನು ತಾಳಿ ಪೂರ್ವಸುಕೃತದಿಂದ ಕಾಶಿಕ್ಷೇತ್ರಸಂದುರುಶನ ಪವಿತ್ರವಾದ ಮಂಗಳಾಂಗೆಯ ಗಂಗಾಸ್ನಾನದಿಂದ ಬಹಿಶುದ್ಧಿಯಾಗಿ ಮನೋಭಿಮಾನಿಯಾದ ವಿಶ್ವನಾಥನ ದರ್ಶನದಿಂದ ಮನಸ್ಸು ಮತ್ತು ಪರಿಶುದ್ಧವಾಗಿ, ಶ್ರೀ ಹರಿಯಾದ ಬಿಂಧುಮಾಧವನ ಸೇವಾಪರಾಯಣ

ವಾಯಿತು. ದೇಶಾಟನದಿಂದ ಧರ್ಮಕರ್ಮಗಳ ಸೂಕ್ಷ್ಮಪರಿಚಯ ವಾಯಿತು. ನಾಲ್ಕುವರುಷ ಸತ್ತೀರ್ಥಸೇವಾ ಸಜ್ಜನಸಮಾಗಮ ಹರಿನಾಮ ಕೀರ್ತನೆ ಶುದ್ಧಶೀಲರಾಗಿಪ್ಪ, ಶುದ್ಧಾಂತಃಕರಣಾನುಭವದಿಂದ ಮೊದಲಿದ್ದ ಋಜುಮಾರ್ಗವು ಪೆಚ್ಚಿತು.

ರಾಮೇಶ್ವರಯಾತ್ರೆಯ ನಿಮಿತ್ಯ ದಕ್ಷಿಣದೇಶವಾದ ಸ್ವಗ್ರಾಮಕ್ಕೆ ಬರಲು ಗುರುತುಹಿಡಿದು ದಾಸಪ್ಪನನ್ನು ವತ್ಸಾಯದಿಂದ ಮನೆಗೆ ಕರದು ಕೊಂಡು ಬಂದರು. ತಂದೆತಾಯಿಗಳಿಗೆ ದೇಶಾಂತರವಾಗಿದ್ದ ಮಗನನ್ನು ನೋಡಿ ಪರಮಾನಂದವಾಯಿತು. ಮಗನನ್ನು ಬಿಗಿದಪ್ಪಿ ಆನಂದ ಬಾಷ್ಪಗಳನ್ನು ಸುರಿಸಿದರು ಮಗನಾದ ದಾಸಪ್ಪನ ಮೈಮೇಲೆ ಕೈಯಾಡಿಸಿ ಬಿಗಿದಪ್ಪಿ ಆನಂದಭರಿತರಾದರು. ದಾಸಪ್ಪನಿಂದ ಎಲ್ಲ ತೀರ್ಥಯಾತ್ರೆ ಮಹಿಮೆ ತಿಳಿದರು. ಆತನ ನಡವಳಿಕೆಯಿಂದ, ದಾಸಪ್ಪನ ಮನವು ವೈರಾಗ್ಯದಿಂದ ತೀರ್ಥಯಾತ್ರಾದಲ್ಲಿ ರತವಾಗಿ ಮುಂದೆ ಈತನು ನಮ್ಮನ್ನು ಬಿಡುವನೆಂದು ತಿಳಿದರು. ಮೊದಲೇ ಅರಳಮ್ಮನವರ ಸಂಗಡ ಯೋಗ್ಯ ವಿವಾಹವಾಗಿತ್ತು.

( ದಾಸಪ್ಪನವರ ಅನುಜರಾದ ಹಯವದನ ವಿ॥ರು ಸಾಕಿ ಮುಂಜಿ ಮದುವೆಯುಮಾಡಿ ಎಂದು ಹೇಳಿದ್ದಾರೆ. ಹಿಂದೆ ದಾಸಚರಿತ್ರೆ ಬರೆದ ಒಬ್ಬರು ಮದುವೆ ಕಾಶಿಯಿಂದ ಬಂದನಂತರ ಮಾಡಿದರೆಂದು ಹೇಳುವದು ಸರಿಯಾದ್ದಲ್ಲ ) ಈ ನಾಲ್ಕು ವರುಷ ದೇಶಸಂಚಾರ ಕಾಲದಲ್ಲಿಯೇ ಶ್ರೀ ಕು. ಸೌ. ಅರಳಮ್ಮನವರು ಪುಷ್ಪವತಿಯಾಗಿದ್ದರು. "ಮೈನೆರದ ಶೋಭನಾದಿಗಳನ್ನು ಮಾಡ್ದರು" ಎಂದು ಕೇಶವವಿಠಲರು ಹೇಳಿದಂತೆ. ಯೋಗ್ಯವಾದ ಕಾಲವರಿತು, ಬಾವಾಜಿಗಳ ವೇಷತೆಗಸಿ, ಮಂಗಳ ಸ್ನಾನಾದಿಗಳನ್ನು ಮಾಡಿಸಿ, ಬಡವರಾದರೂ ಎಲ್ಲ ಬಂಧುಗಳೊಡನೆ ಕೂಡಿ, ಶುಭಮುಹೂರ್ತದಲ್ಲಿ "ಗರ್ಭದಾನ ಪುಣ್ಯಾಹವಾಚನ ಮಂತ್ರೋಕ್ತರೀತ್ಯಾ ಹೋಮವನ್ನು ಮಾಡಿಸಿ ಶಾಸ್ತ್ರ ಮರ್ಯಾದೆಯಂತೆ ಫಲ ಶೋಭನವನ್ನು ಮಾಡಿ ದಾಸಪ್ಪನನ್ನು ಕುಟುಂಬಿಕನನ್ನಾಗಿ ಮಾಡಿದರು.

## ಗ್ರಹಧರ್ಮದಲ್ಲಿ ದಂಪತಿಗಳ ಚರ್ಯ

ಚಿಕ್ಕ ವಯಸ್ಕನಾದರೂ ದಾಸಪ್ಪನು ನಿರ್ಮಲಾಂತಃಕರಣನು ಹರಿಗುರುಗಳಲ್ಲಿ ಭಕ್ತಿರತನು. ಮಾತಾಪಿತೃಗಳ ಸೇವೆಯಲ್ಲಿ ತತ್ಪರನೂ ಅತಿಥಿ ಅಭ್ಯಾಗತರ ಪೂಜಾಸ್ವಶಕ್ತತೆ ನಿರತನೂ, ಭೂತದಯಾಪರನೂ, ಸತ್ಯ ಧರ್ಮರತನೂ, ಸತ್ಯಶೋಧಕನೂ, ಸತ್ಯವಚನಿಯೂ, ಮೃದು ವಿನಯವಚನಿಯೂ, ಗೃಹಧರ್ಮವನ್ನರಿತವನೂ, ಭೂತದಯಾಪರನಾಗಿ ದ್ದಂತೆ, ಸತಿಯಾದ ಪತಿವ್ರತಾಶಿರೋಮಣಿ ಅರಳಮ್ಮನವರಾದರೂ ಪತಿ ಭಕ್ತಿಯುತಳೂ, ಪತಿಧರ್ಮಪರಾಯಣಳೂ, ಪತಿ, ಪತಿಹಿತೈಷಿಗಳು ಅತ್ತೆಮಾವಂದಿರ ಸೇವಾದಲ್ಲಿ ತತ್ಪರಳಾಗಿ ಮಿತಭಾಷಣೆಯಾಗಿ ಗ್ರಹ ಧರ್ಮವನ್ನರಿತು ಹಿರಿಯರ ಆಜ್ಞೆಯಕಿಂತ ಮೊದಲಿಗೆ ಸಕಲ ಗ್ರಹ ಕಾರ್ಯವನ್ನು ಮಾಡಿ ಗಂಡ ಅತ್ತೆಮಾವಂದಿರ .ಸಂಪೂರ್ಣಪ್ರೀತಿಗೆ ಪಾತ್ರಳಾಗಿದ್ದಳು. ಪ್ರತ್ಯುತ್ತರವನ್ನು ಕೊಡುತ್ತಿರಲಿಲ್ಲ.

ಗಂಡನು ಬಡವನೆಂದು ಭಾವಿಸದೇ ಕೊಂಡೆಯಾಗಿ, ಚಂಡಿತನ ಒಹಿಸದೇ ಮನಸ್ಸಿಗೆ ಕಂಡಂತೆ ವರ್ತಿಸದೇ ಪತಿಯ ತೋಂಡಳಾಗಿದ್ದಳು. ಇತರ ಭಂಡಾಟ ಸಂಸಾರಿಕರನ್ನು ಮಂಡೆ ಬಾಗಿಸಿ ಸಂಸಾರ ಪುಂಡಾಟದ ಭಂಡಮನವನ್ನು ಹಿಂಡಿ ಹಿಪ್ಪಿ ಮಾಡಿ, ಪುಂಡರೀಕಾಕ್ಷನ ಪಾದದಲ್ಲಿ ಮನದಿಂಡುಗೆಡುವ ಆರ್ಯ ಸ್ತ್ರಿ ಹಿಂಡಿನ ನಡಾವಳಿಕೆಯಾಗಿತ್ತು.

ಗ್ರಹಕರ್ಮಕಲಾಪದಲ್ಲಿಯೇ, ಸ್ತ್ರೀಯರಿಗೆ ತಕ್ಕ ಸ್ವಾತಂತ್ರ್ಯ ವಾದರೂ, "ಗೃಹಕರ್ಮವ ಪರಮೋತ್ಸಹದಲಿ ಮಾಡುತ ಮೂಜಗದ। ಮಹಿತಸೇವೆ ಇದೇ ಎನುತ । ಅಹರಹರ ಭಗವಂತಗರ್ಪಿವರು" ಎಂದು ಸಕಲ ಕರ್ಮವು ಪತ್ಯಂತರ್ಗತ ಪರಮಾತ್ಮನ ಸೇವೆ ಎಂದು ತಿಳಿದು ವರ್ತಿಸುವ ಸ್ತ್ರೀವೃಂದವು ಕಾಲಗತಿಯಿಂದ ಕಣ್ಮರೆಯಾಯಿತು. ದಾಸಪ್ಪ ನಂಥ ದಾಸ್ಯಭಾವತಿಳಿದ ಪುರುಷರೇ ಇಲ್ಲವಾದಮೇಲೆ "ಅರಳಮ್ಮನವ ರಂತಹ ಸ್ತ್ರೀಯರನ್ನು ಕಾಣುವದೆತ್ತ. ಸ್ತ್ರೀ ಸ್ವಾತಂತ್ರ್ಯಯುಗದಲ್ಲಿ ಗೊಡ್ಡುಧರ್ಮಲೇಖನಕ್ಕೆ ಬೆಲೆಗೊಡುವರಾರು ಬೆಲೆಗೊಟ್ಟರೂ ತಿಳಿದು ಆಚರಣೆಗೆ ತರುವರಾರು ? ಇದಾದರೂ ಕಾಲನಾಮಕ ಹರಿಯಾಜ್ಞೆ

ಕಲಿಪ್ರಾಬಲ್ಯವನ್ನರಿತು ಕಾಲಕ್ಕೆ ಮನಸೋಲದೇ ನಡೆಯುವ ದಂಪತಿಗಳೇ ಧನ್ಯರು.

ದಾಸಪ್ಪನು ಬಡವನಾದಾಗ್ಯೂ ಆತನ ಮನವು ಬಡವಾಗಲಿಲ್ಲ. ಬಡತನಬಾಧೆಗೆ ಒಳಗಾಗಲಿಲ್ಲ. ಸಂಸಾರದಲ್ಲಿ ನಿರತನಾಗಿ ತಂದೆ ತಾಯಿಗಳ ಸೇವೆ, ಅತಿಥಿಅಭ್ಯಾಗತರ ಸೇವೆ ಇದ್ದ ಬಡತನದಲ್ಲಿಯೇ ಮಾಡುವನು. ಸೋಮಾರಿಯಾಗಿರದೇ ಕೋಳಿ ಕೂಗದಮುನ್ನೆ ಏಳು ವನು. ಶುಚಿಯಾಗಿ ಹರಿಧ್ಯಾನವನ್ನು ಮಾಡುವನು. ಪ್ರಾತಃಸ್ನಾನಾದಿ ಗಳನ್ನು, ನಿರ್ಮಾಲ್ಯದೇವತಾರ್ಚನೆ ಪಿತೃತಾರ್ಪಣಾದಿಗಳನ್ನು ಮುಗಿಸಿ ಕೊಂಡು ಗ್ರಹಕರ್ಮದಲ್ಲೆರತನಾಗುವನು. ಪತ್ನಿಯಾದ ಅರಳಮ್ಮನವರು ಪತಿ ಏಳದ ಮುಂಚೆ ಎದ್ದು ಮುಖಪ್ರಕ್ಷಾಲನಂತರ ಕುಂಕುಮವನ್ನಿಟ್ಟು ತುಲಸಿಗೋ ನಮಸ್ಕರಿಸಿ ಅಂಗಳ ತಳಿಯನ್ನು ಹಾಕಿ ರಂಗವಾಲಿಯಿಂದ ಗೋಪದ್ಮಗಳನ್ನಿಟ್ಟು ಅಂಗಳವನ್ನು ಸೃಂಗರಿಸಿ ಮನೆಕೆಲಸದಲ್ಲಿ ನಿರತ ಳಾಗಿ ಸ್ನಾನಾದಿಗಳನ್ನು ಮಾಡಿ ಪತಿಯ ಸ್ನಾನ್ಹಿಕಕ್ಕೆ ಅನುಕೂಲ ಳಾಗಿರುವಳು.

ದಾಸಪ್ಪನು ತಂದಕಾಳನ್ನು ಶುದ್ಧವಾಗಿಮಾಡಿ ಪಾಕಮಾಡುವಳು. ಒಂದು ದಿನ ಜೋಳದ ಅನ್ನವೇ ಸರಿ. ಒಂದು ದಿನ ಸಜ್ಜೆರೊಟ್ಟೆ, ಒಂದು ದಿನ ನವಣೆ ಅನ್ನವೇ ಆಗಲಿ, ಶುದ್ಧವಾಗಿ ಅಡಿಗೆಯನ್ನು ಮಾಡು ವಳು. ಮೇಲೆ ಸಾಧನಿಗೆ ಚಣ್ಣಣಿಯೋ ಬೇಳೆಹುಳಿಯೋ ಇದ್ದರೂ ಸರಿಯೇ ಇಲ್ಲವೇಇಲ್ಲ. ಉಪ್ಪು ಅನ್ನ ನೀರು ಅನ್ನ ಅಡವಿಯೊಳಗೆ ಬೆಳೆದ ತಪ್ಪಲಪಲ್ಲೆ ತಂದು ನೈವೇದ್ಯಕ್ಕೆ ಸಿದ್ಧಪಡಿಸುವಳು. ಮೈದು ನಂದರಿಗೂ ಅತ್ತೆಮಾವಂಧರಿಗೂ ಸ್ನಾನಾದಿಗಳನ್ನು ಮಾಡಿಸುವಳು. ದಾಸಪ್ಪನು ಮಾಧ್ಯಾನ್ಹಿಕ ಸ್ನಾನ ದೇವತಾರ್ಚನೆ ಮುಗಿಸಿ ನೈವೇದ್ಯ ಮಾಡಲು ಬಂದ ಅತಿಥಿಗಳಿಗೆ ತುತ್ತನ್ನವನ್ನಿತ್ತು ಗಂಡ ಅತ್ತೆಮಾವಂದಿ ರನ್ನು ಮೈದುರನ್ನು ಕುಳ್ಳಿರಿಸಿ ಒಳ್ಳೇ ಪ್ರೀತಿಯಿಂದ ಬಡಿಸಿ ಉಣ್ಣಿಸಿ ತೃಪ್ತಿಬಡಿಸುವಳು ತಾನು ಮಿಕ್ಕದ್ದುಣ್ಣುವಳು. ರಾತ್ರಿ ಹರಿಭಜನೆಯಲ್ಲಿ ತತ್ಪರರಾಗಿ ಕೆಲವುದಿನ ಕಾಲ ಕಳೆದರು. ಅಷ್ಟರಲ್ಲಿ ತಂದೆಗಳಾದ

ಶ್ರೀನಿವಾಸಪ್ಪನವರು ಕಾಲವಶರಾದರು. ಮಾಡತಕ್ಕ ಕ್ರೀಯಾದಿಗಳನ್ನು ಮಾಡಿ ಪಿತೃಯಜ್ಞ ಮುಗಿಸಿದರು. ಸಂಸಾರದಲ್ಲಿ ಬಹುಕಷ್ಟಗಳು ಬಂದೊದಗಿದವು. ಹೊಟ್ಟೆ–ಬಟ್ಟೆಗೆ ಇಲ್ಲದೆ ಮರುಗಬೇಕಾದಿತು. ವೃದ್ಧಮಾತೆ ಶುಶ್ರೂಷೆಯು ಮೊದಲಧರ್ಮವಾಗಿತ್ತು. ಆಗಿನ ಕಾಲದಲ್ಲಿ ಗ್ರಾಮಕ್ಕೆ ಒಬ್ಬ ಶಾನಭೋಗ ಕುಲಕರ್ಣಿಗೌಡನೆಂಬ ಕಟ್ಟಳೆ ನಿಯಮ ವಿದ್ದಿಲ್ಲ. ವರ್ಷಾಗ್ರಾಮುಗಳು ಗುತ್ತಿಗಿಗೆ ಸರಕಾರದಿಂದ ಕೊಡುವರು. ಇಷ್ಟು ಹಣಕ್ಕೆಂದು ಗುತ್ತಿಗೆ ಹೊತ್ತವರು ಗ್ರಾಮದಲ್ಲಿ ತೆರಿಗೆ ವಸೂಲ ಮಾಡಿ ಸರಕಾರಕ್ಕೆ ಹಣತುಂಬುವರು. ಉಳಿದ ರೊಕ್ಕವೆಲ್ಲ ಗುತ್ತಿಗಿ ಹೊತ್ತ ಗುತ್ತೇದಾರದೇ–

ಇಂಥ ಕಾಲದಲ್ಲಿ ಹೊಟ್ಟೆಯ ಸಲುವಾಗಿ ದಾಸಪ್ಪನ ವಿಚಾರವು ಗ್ರಾಮುಗಳ ಗುತ್ತಿಗೆ ಭಾರಕಡಿಗೆ ಲಕ್ಷ ಹೊರಟಿತು. ಸರಕಾರಿ ಅಧಿ ಕಾರಿಗಳನ್ನು ದರ್ಶಿಸಿ ಕಾಲಕ್ಲಪ್ತದಲ್ಲಿ ಹೋಗಿ ಕ್ರಮೇಣ ಒಂದೊಂದು ಗ್ರಾಮ ಗುತ್ತಿಗಿ ಹಿಡಿಯುವರು. ರೊಕ್ಕ ವಸೂಲ ಮಾಡುವರು, ಸರ ಕಾರಕ್ಕೆ ರಕಂ ಭರ್ತಿಮಾಡುವರು, ಇದು ಹೊಟ್ಟೆಗೆ ಸಾಲದಾಯಿತು. ಗ್ರಾಮಗಳ ಗುತ್ತಿಗೆ ಹೆಚ್ಚುತ್ತ ೧೦+೮=೧೮ ಗ್ರಾಮುಗಳನ್ನು ಗುತ್ತಿಗೆಯ ಮೇಲೆ ಹಿಡಿದು ಗ್ರಾಮವನ್ನಾಳುತ್ತಲಿರಲು ಕೆಲವರ್ಷದಲ್ಲಿ ಗುತ್ತಿಗೆ ರೊಕ್ಕವು ವಸೂಲಾಗದೇ ಮೈ ಮೇಲೆ ಬಂದು ಸರಕಾರ ನಿರ್ಭಂಧ ಕ್ಕೊಳಗಾದರು. "ದೊಡ್ಡ ಹತ್ತು ಎಂಟು ಗ್ರಾಮುವನ್ನು ವತ್ತಿಆಳುತಾ। ಗುತ್ತಿಗೆಯ ಹೊತ್ತ ರೊಕ್ಕ ಮ್ಯಾಲೆ ಬೀಳುತ ಇನು ಎತ್ತಸೇರಲೆಂದು ಭಾಗೀರಥಿಗೆ ಪೋಗುತ" ಎಂಬ ಅಪರೋಕ್ಷಜ್ಞಾನಿಗಳ ವಚನದಂತೆ.

ಧೈರ್ಯಶಾಲಿಗಳಾದರೂ ದಾಸಪ್ಪನವರು ತನ್ನ ಆತ್ಮಬಲ ಸಂಯ ಮನ ಮಾಡುತ್ತ ಅಂತರಾತ್ಮನ ಪ್ರೇರಣೆಯಂತೆ ಗುರು ಕೃಪೆ ಕಾಲಬಲ ವನ್ನರಿತು, ಜನನಿ ಅನುಜರ ಸಹಿತ ಯಾದವಗಿರಿ( ಆದವಾನಿಯಲ್ಲಿದ್ದು ) ಕಾಲಕೆಲವು ಕಳೆದರು. ಹೀಗೆ ಈರಾರುವರುಷ ೧೨ ವರುಷ ಗುತ್ತಿಗಿಮಾಡಿ ಮುಂದೆ ಎರಡು ವರುಷ ಆದವಾನಿಯಲ್ಲಿ ಸಂಸಾರ ವೃತ್ತಿಯಲ್ಲಿ ಪದ್ಮ ಪತ್ರದಲ್ಲಿದ್ದಂತೆ ಇದ್ದು, ಭಾಗೀರಥಿಗೆ ಪೋದರೆಂತಲೂ ಅಥವಾ ಗುರು

ವನುಗ್ರಹ ಆಗುವವರೆಗೆ ೨ ವರುಷ ಹರಿಯನ್ನು ಕಾಣದ ಸಂಸಾರಕ್ಲೇಶ ದಲ್ಲಿದ್ದರೊ ? ದಾಸರ, ಎರಡೂ ವಚನಗಳಿಗೆ ಸರಿಯಾದ ಸಂಗತಿ ನಮ್ಮಂಥ ಅಜ್ಞರಿಗೆ ತಿಳಿಯದು ಆದರೂ ಒಟ್ಟಿನಮೇಲೆ (೧೪) ವರ್ಷ ಸಂಸಾರ ಯಾತ್ರೆಯಲ್ಲಿ ಕಷ್ಟಬಟ್ಟು (೩೪) ನೇ ವರುಷ ಭಾಗೀರಥಿ ಯಲ್ಲಿ ಗುರುಕೃಪೆಯಾದದ್ದು ನಿಜ.

ಅಹೋ ದಾಸಪ್ಪ ಎಂಥೆಂಥ ಕಷ್ಟಕ್ಕೊಳಗಾದರು. ಪೂರ್ವಜನ್ಮದ ಕರ್ಮ ಆರಿಗಾದರೂ ಬಿಡದು, ಎಂಬ ದಾಸರವಚನ "ಅವಶ್ಯಮನು ಭೋಕ್ತವ್ಯಂ ಕೃತಂ ಕರ್ಮಂ ಶುಭಾ ಶುಭಂ" ಎಂಬುದು ಆರಿಗೂ ತಪ್ಪದು. ಪೂರ್ವದಲ್ಲಿ ಭಗವಂತನ ಎದಿಗೆ ಒದೆದ ಮಹಾಪಾಪ ಕೃತ್ಯ ಪುಣ್ಯ ಬೀಜವಾದರೂ, ಭೃಗುಋಷಿಗೆ ಜನ್ಮಜನ್ಮದಲ್ಲಿ ತಪ್ಪಲಿಲ್ಲ. ಅಜ್ಞಾನವ್ಯಾಧಯೋನಿ ಪ್ರಾಪ್ತವಾಯಿತು. ಅನೇಕ ಜನ್ಮಗಳನ್ನು ಧರಿಸಿ ಕಷ್ಟಪಟ್ಟ ಪುರಂದರದಾಸರ ಕಾಲದಲಿ ಆಕಳಕರುವಾದ ಪಶುಯೋನಿ ಬಂದಾಗ್ಯೂ ದಾಸರ ಕರುಣದಿಂದ ಅವರ ಕವನ ಶ್ರವಣದಿಂದ ಆಕಳ ಜನ್ಮನೀಗಿ ಅವರ ಮಗ ಭೃಗುವೇ ಮಧ್ವಪತಿಯಾಗಿದ್ದಾಗೆ ಮಹಾಪುಣ್ಯ ವಂತರಾದ ಪುರಂದರದಾಸರ ಸಂಗದಿಂದ ಅಷ್ಟು ಕಷ್ಟಗಳು ಸಂಭವಿಸ ಲಿಲ್ಲ. ೨ ನೇ ಜನುಮದಲ್ಲಿ ಈ ದಾಸಪ್ಪನು **ಶ್ರೀ ಹರಿಗೆ ಅವಮಾನ ಗೈದ ಪಾಪಲೇಶಾಂಶ ಉಳಿದದ್ದರಿಂದ** ಕಷ್ಟ ದಾರಿದ್ರ್ಯವನ್ನು ಅನು ಭೋಗಿಸಬೇಕಾದಿತು. ಇದು ಪ್ರಾರಬ್ಧ ಕರ್ಮಬಿಡದು. ಶ್ರೀ ಗೋಪಾಲ ದಾಸರ ವಚನ ಮರೆಯುವಂತಿಲ್ಲ. ಕೆಲವು ದಿನ ಸಂಸಾರ ಗಲಭೆಯಲ್ಲಿ ಇರುತಿರ್ದರು, ಹೇಗಂದರೆ ಜಲದೊಳಗೆ ( ಪದ್ಮ ) ಕಮಲವು ಇದ್ದರೂ ಆ ನೀರಿನ ಸಂಬಂಧವಾಗದೇ ಇದ್ದಂತೆ ಸಂಸಾರದಲ್ಲಿದ್ದರೂ ನಿರ್ಲಿಪ್ತ ರಾಗಿದ್ದರು. ದ್ರವ್ಯದಿ ದುಷ್ಟಾಶೆಯನ್ನು ಕಳೆದವರು, ಬಂಧು ಬಳಗದಲ್ಲಿ ಮಮತಾಪ್ರೀತಿಯನ್ನು ಕಳೆದವರು, ಸಂತತವಾಗಿ ಅಂತರಂಗದಿ ಹರಿ ಯನ್ನು ಧ್ಯಾನಿಸುತ್ತ ಪುಳಕೋತ್ಸವದಲ್ಲಿ ನಿರತರಾಗಿ ಜಲದೊಳಗೆ ಉತ್ತಮವಾದ ಭಾಗೀರಥಿ ನದಿಯನ್ನು ಛಲಭಕುತಿಯಿಂದಲಿ ಸೇವಿಸಿ, ಸಂತೋಷದಿಂದ ಹರಿಯ ಲೀಲಾಗುಣಗಳನ್ನು ಮನದಲ್ಲಿ ಕೊಂಡಾಡುತ್ತ ಇನ್ನು ಕೃಪೆಯಾಗುವದೆಂಬ ಸೂಚನೆ ತಿಳಿದು ಎರಡನೇ ಸಲ ಕಾಶಿ

ಯಾತ್ರೆಗೆ ಏಕಾಕಿಯಾಗಿ ಹೊರಟರೇ ಹೊರತಾಗಿ ಸಂಸಾರ ಕ್ಲೇಶಕ್ಕೊಳಗಾದ ಮನುಜರಂತೆ ಅಜ್ಞಾನದಿಂದ ಪ್ರಾಣ ಪರಿತ್ಯಾಗ ಮಾಡಬೇಕೆಂದು ಕಾಶಿಗೆ ಹೊರಟವರಲ್ಲವೆಂದು ಶ್ರೀ ಗೋಪಾಲದಾಸರ ವಚನವನ್ನು ಇನ್ನೊಮ್ಮೆ ಗಟ್ಟಿಯಾಗಿ ಹೇಳಿ ಹೇಳುವದೇ ದಾಸರ ಸೇವೆ.

ಗುರುಕೃಪೆಪಡೆಯಲು ದಾಸಪ್ಪನು ಮೇಲೆ ಸಂಸಾರ ಮಾನವರಂತೆ ತೊಳಲಿದರೂ ಸಂಸಾರವೃತ್ತಿ ತಪಸೆ ಎಂದು ತಿಳಿದು ಅಂತರಾತ್ಮನ ಪ್ರೇರಣೆಯಿಂದ ಭಾಗೀರಥಿಗೆ ಒಬ್ಬರೇ ಹೊರಟರು.

## ದಾಸಪ್ಪನು ವಿಜಯದಾಸರಾದುದು

ಸಂಸಾರವು ದುಃಖಮಯವೂ ಅಸಾರವೂ ಎಂದು ತಿಳಿಯದ ಹೊರತಾಗಿ ವಿಷಯ ವೈರಾಗ್ಯ ಹುಟ್ಟುವದಿಲ್ಲ. ವಿವಿಧ ಸಾಂಸಾರಿಕ ಕಷ್ಟನಷ್ಟಗಳನ್ನು ಅನುಭೋಗಿಸಿದ ಮೇಲೆಯೆ ವಿಷಯ ವೈರಾಗ್ಯ ಹುಟ್ಟುವದು. ಈ ಮನುಜ ವೇಷಧಾರಿಯಾದ ದಾಸಪ್ಪನು ಸಂಸಾರದಲ್ಲಿ "ಪದ್ಮಪತ್ರಮಿವಾಂಭಸಾ"ದಂತೆ ಇದ್ದರೂ ಪ್ರಾರಬ್ಧಕರ್ಮಭೋಗ ತೀರಿಸಲು ಇಷ್ಟು ಕಷ್ಟಗಳನ್ನು ಅನುಭೋಗಿಸಬೇಕಾಯಿತು. ದಾಸನಾಗಲು ಅಶೇಷಜನ್ಮದ ಪುಣ್ಯ ಒದಗಿ ಬರಬೇಕು. ದೃಢ ನಂಬಿಕೆ ಇರಬೇಕು. ಮಾನಾಪಮಾನ ಸಹಿಸಬೇಕು. ಶೀತೋಷ್ಣಗಳನ್ನು ಸಮನಾಗಿ ಭಾವಿಸಬೇಕು. ಜಿಹ್ವಾಗುಹ್ಯ ಚಾಪಲ್ಯಗಳನ್ನು ಬಿಡಬೇಕು. ಸೋತ್ತಮರ ನಿಂದಾ ಕನಸಿನಲ್ಲಿ ಸಹ ಮಾಡಕೂಡದು. ಭೂತದಯಾಪರನಾಗಿರಬೇಕು. ಕಾಪಟ್ಯರಹಿತನಾಗಿರಬೇಕು. ಇತ್ಯಾದಿ ಸದ್ಗುಣಗಳು ದಾಸಪ್ಪನಲ್ಲಿ ಕ್ರಮೇಣ ಅಭಿವ್ಯಕ್ತವಾಗಹತ್ತಿದ್ದವು.

ಈ ಸದ್ಗುಣಾಭಿವ್ಯಕ್ತತೆಯು ಗುರುಕೃಪಾಕಟಾಕ್ಷ ತೋರಲು ಸೂಚಿಸಿದಂತೆ; ದಾಸಪ್ಪನು ಗುತ್ತಿಗೆ ಹೊತ್ತು ರೊಕ್ಕ ವೈಮೇಲೆ ಬರಲು ಸರಕಾರದವರಿಗೂ ಇತರರಿಗೂ ಅರಿಯದಂತೆ ಉತ್ತರದೇಶ ಸಂಚಾರಕ್ಕೆ ಹೊರಟನು. ಆಗಿನಕಾಲ ಮಾರ್ಗದಲ್ಲಿ ಕಳ್ಳರ ಉಪದ್ರವ ಬಹಳ. ರೇಲು ಮೋಟಾರುಗಳಿದ್ದಿಲ್ಲ. ಕಾಲುನಡಿಗೆಯಿಂದ ಕಾಶಿಯಾತ್ರೆಗೆ ಗುಂಪುಗುಂಪಾಗಿ ಜನರು ಹೊರಡುವರು. ಮಾರ್ಗದಲ್ಲಿ ಶ್ರೀಹರಿನಾಮ

ಸಂಕೀರ್ತನೆ ಮಾಡುತ್ತ ಏಕಭುಕ್ತರಾಗಿ ಸುಖಪ್ರವಾಸಗೈಯ್ಯುತ್ತ ಸುಮಾರು ೩-೪ತಿಂಗಳಿಗೆ ಕಾಶಿಗೆ ಮುಟ್ಟುವ ನಿಯಮದಂತೆ ದಾಸಪ್ಪನು ಕಾಶಿಯಾತ್ರಿಗೆ ಏಕಾಕಿಯಾಗಿ ಹೊರಟನು. ಮಾರ್ಗದಲ್ಲಿ ಚೋರರು ತಾಕಿ ಅಭಿಮಾನಕ್ಕೆ ಕಾರಣವಾದ ಕೈಯಲ್ಲಿದ್ದ ತಂಬಿಗೆ, ಹೊದ್ದ ಛಿದ್ರ ವಸ್ತ್ರವು ಸಹ ಅಪಹರಿಸಿದರು. ಅಭಿಮಾನ ಕಾಯಲು ಉಟ್ಟ ಜೀರ್ಣ ವಸ್ತ್ರ ಒಂದುಳಿಯಿತು. ಈ ಜೀರ್ಣ ಮಲಿನ ವಸ್ತ್ರವೇ ಲಿಂಗದೇಹವು. ಇದು ಹರಿಪ್ರಸಾದದಿಂದ ಬ್ರಹ್ಮನಸಂಗಡ ವಿರಜಾಸ್ನಾನದಿಂದ ಪೋಗುವದು. ದಾಸಪ್ಪನು ಕಳವಳಗೊಳ್ಳಲಿಲ್ಲ. "ತನುಬಿಗೆ"ಯು ಹೋಯಿತು. ವಿಷಯಾಚ್ಛಾದಿಕೆ ಮುಸುಕಿನಲ್ಲಿ ಅಡಗಿದ ನಾನೆಂಬೋ ಅಹಂಕಾರ ರೂಪ ''ತನುಬಿಗೆ'' ಹೇ ದೇವರೇ ಕಳ್ಳರಿಂದ ಅಪಹರಿಸಿದೆ. ಎಲ್ಲಾ ಒಳ್ಳೇದಾಯಿತೆಂದು ಗ್ರಾಮೇಕರಾತ್ರೆ ಸಂಚರಿಸುತ್ತ ೪-೫ ತಿಂಗಳಲ್ಲಿ ಭಾಗೀರಥಿ ತಟವಾದ ಕಾಶಿಕ್ಷೇತ್ರಕ್ಕೆ ಮುಟ್ಟಿಕೊಂಡನು.

ತೀರ್ಥಯಾತ್ರೆ ಕಾಲುನಡಿಗೆಯಿಂದಲೇ ಮಾಡಿದರೆ ಪೂರ್ಣ ಪುಣ್ಯ, ಕುದುರೆ ಬಂಡಿಯಲ್ಲಿ ಯಾತ್ರೆ ಮಾಡಿದರೆ ನಾಲ್ಕಾಣೆ ಪುಣ್ಯ, ಹ್ರಾಸ್ ಎತ್ತಿನ ಬಂಡಿಯಲ್ಲಿ ಯಾತ್ರೆ ಚರಿಸಿದರೆ ಅರ್ಧ ಪುಣ್ಯ ಕಡಿಮೆ, ಉಗೆಬಂಡಿಗಳಲ್ಲಿ ಚರಿಸಿದರೆ ಯಾತ್ರಿಯಫಲವೇ ಇಲ್ಲ. ಕಂಡಿತು ಫಲವೆಂದು ಶಾಸ್ತ್ರನಿಯಮದಂತೆ ಹಿಂದಿನ ಜನರ ಯಾತ್ರೆಯಾಗಿತ್ತು. ಇಂದು ಷೋಕಿಗಾಗಿ, ದೇಶ ಪರ್ಯಟನವಾಗಿದೆ.

ಪರದೇಶದಲ್ಲಿಯೂ ಸಷ ಏಕಾಕಿ ಛಿದ್ರ ಏಕವಸ್ತ್ರ ಧರಿಸಿದವನ ತಂಬಿಗೆ ಸಹ ಹೋದಮೇಲೆ ಇಂಬುಕೊಡುವರಾರು ? ಆದರೆ ತನಿ= ಸಂಪೂರ್ಣನಾದ ಶ್ರೀ ಹರಿಯ ತನಿ=ಬಹಳವಾದ ಬಿಗೆ=ಕರುಣಾಕವಚವಾದ ತಂಬಿಗೆ ಮಾತ್ರ ದಾಸಪ್ಪನನ್ನು ಕಾಪಾಡಿತು.

ಅಯ್ಯೊ ಹರಿದಾಸರಿಗೆಷ್ಟು ಕಷ್ಟಗಳನ್ನು ಕೊಡುವಿಯೋ ಶ್ರೀ ಹರಿಯೆ ? ಬಂಗಾರವನ್ನು ಕಾಶಿ ಕಾಶಿ ಬಡೆದು ಬಡೆದು ಒರೆಗಲ್ಲಿಗೆ ಹಚ್ಚಿ ತಿಕ್ಕಿ ಬೆಲೆಯನ್ನು ಕಟ್ಟುವ ಅಕ್ಕಸಾಲಿಗನೋ ನೀನು. ಚೊಕ್ಕ ಬಂಗಾರ ಗುಣವನ್ನರಿತು ಮಾರುವ ಚಿನಿವಾರನೋ ನೀನು. ಎಂಥ ನಿಷ್ಕರುಣಿಯೋ ? ದಾಸರೆಲ್ಲ ಬಡ ಕುಲಕರ್ಣಿಯರ ಮನೆತನದಲ್ಲಿ

ಪುಟ್ಟ ಬಡತನ ಅನುಭೋಗಿಸಿ ಕಷ್ಟಗಳಗೊಳಗಾಗಿ ದೃಢನಂಬಿಕೆಯಿಂದ ನಿನ್ನ ಪಾದ ಹಿಡಿದವರು, ವಿದ್ವಾಂಸರಾದ ಮರ್ಯಾದಸ್ಥ ಮನೆತನದ ಆಚಾರ್ಯರ ಮನೆಯಲ್ಲಿ ಜನಿಸಿ ಗರ್ವಿಕೆತನತಾಳ್ದ ದಾಸಪ್ಪನಲ್ಲ ಕೂಸಿ= ನಿಷ್ಪಾಪಿಯಾದ ಬಡ ಕೂಸಿಮಗ ದಾಸಪ್ಪನನ್ನು ಇಂತು ಪರೀಕ್ಷಿಸಿ ಕಾಡುವರೇ ? ದಾಸಪ್ಪನಂಥ ಕಷ್ಟ ಅನುಭೋಗಿಸಿದವರಾರಿಲ್ಲ.

ಅಂತೂ ಇಂತು ದಾಸಪ್ಪನು ಕಾಶಿಗೆ ಮುಟ್ಟಿಕೊಂಡನು. ಅನುಜರಾದ **ಹಯವದನ ವಿಠಲರು** ಪದ ೬ (ನುಡಿ ೫೬ ರಲ್ಲಿ) "ಮತ್ತೆ ಪೊರಟರು ಉತ್ತಮ ಶ್ಲೋಕ ಹರಿಪೆತ್ತ ಗಂಗೆಯ ಸ್ನಾನ, ಗಯದಲ್ಲಿ ಪಿಂಡವ। ನಿತ್ತ ಮರಳಿ ಬಂದು ವಾರಣಾಸಿಯಲ್ಲಿ। ಉತ್ತಮರ ಸಂಗದಿಂದ। ನಿತ್ಯಸ್ನಾನ ಸಂಧ್ಯಶುಚಿಯಾಗಿ ಮಲಗಿರಲು। ಸತ್ಯವಾಗಿ **ಸ್ವಪ್ನದಲಿ ನರಹರಿ ಪಡೆದ। ಪುತ್ರನೆಬ್ಬಿಸಿದಂತೆ ದಾಸರ ರೂಪಿನಲಿ।** ಹತ್ತಿಗರೆದು ಕರುಣದಿ ॥ ೫ ॥ ಸುರನದಿಯ ದಾಟಿಸಿ ಆಚೆಯಲಿ ಇರುತಿಪ್ಪದು। ವರವ್ಯಾಸ ಕಾಶಿಯಪುರದ ದೊರೆಯಾದ। ಸಿರಿವಾಸುದೇವ ಬಲು। ಸುರರ ಸಂದಣಿಯೊಳಗೆ ಮೆರವುತಲಿ ಕುಳತಿರಲು। ಭರದಿಂದ ತೋರಿಸಿ ಶಿರವಾಗಿ ತುತಿಸೆನುತ। ಕರದು ಪೇಳಿ ಅವರ ಕರದಿಂದ ಆದರಿಸಿ। ಸರಸದಿಂದಲಿ ನೀನು ಹರಿಚರಿತೆ ಪೇಳೆನುತ ಕರುಣರಸದಿಂದರುಹಲು ॥ ೬ ॥" ಮತ್ತು–

"ಸುರದ್ವಿಜವೇಷದಿಂದಲಿ ತನ್ನ। ಸುರಗಂಗೆಯನ್ನು ಸೇವಿಸಿದನ್ನ। ಸುರಮುನಿಯಿಂದುಪದೇಶನ್ನ" ಎಂದು **ಗೋಪಾಲವಿಠಲರ ವಚನ,** ಮತ್ತು "ಅಲ್ಲಿ ಗುರುಗಳ ಧ್ಯಾನದಲ್ಲಿ ದೃಢವಾಗಿ ಮನ। ನಿಲ್ಲಿಸಿ ವರ ಪಡೆದು ನಾನಾಕುಪರಿಯು ಸಿರಿ। ವಲ್ಲಭನಮೂರ್ತಿ ಮನದೊಳು ಕಂಡು ಸುಖವನಧಿಯಲ್ಲಿ ಲೋಲ್ಯಾಡಿಕೊಳುತ" **ವೇಣುಗೋಪಾಲ ವಿಠಲರು** (ಪುಟ ೨೭) ಮತ್ತು–

"ಕಾಶಿಯೊಳಗೆ ಮಲಗಿರಲು ಸ್ವಪ್ನಕಂಡರು ಪುರಂ। ದಾಸರೇವೆ ಬಂದು ವ್ಯಾಸಕಾಸಿಗೊಯ್ದರು। ಶ್ರೀಶನಿಂದಲಿವರಿಗೆ ಉಪದೇಶ ಕೊಡಿಸೋರು। ವಿಜಯದಾಸರೆಂದು ಕರಿಸಿರೆನ್ನ ಎಡ್ಡು ಕುಳಿ

ತರು ॥ ೫ ॥ ಕನಸಿನೊಳಗೆ ದೇವರ ದರುಶನಾಗುತ ಶ್ರೀ । ಮನಸಿಜನ ಪಿತನದಯವು ಘನಘನಾಗುತ । ಜಿನಸು ಜಿನಸು ಪದ ಸುಳಾದಿಗಳನು ಪೇಳುತ । ಆಗ । ನೆನಸಿದಾಕ್ಷಣದಲಿ ಮುಖದಿಕವಿತ ಹೊರಡುತ ॥ ೬ ॥ ಎಂದು **ಕೆಶವ ವಿಠಲರ** ವಚನ (ಪುಟ ೪೨).

ಹೀಗೆ ದಾಸರ ನಿಜವಾದ ವಚನದಂತೆ ದಾಸಪ್ಪನು ಕಾಶಿಯ ಕ್ಷೇತ್ರ ಗಂಗೆಯಲ್ಲಿ ಸ್ನಾನಮಾಡಿ, ಶ್ರೀ ಕಾಶಿ ವಿಶ್ವನಾಥ ಶ್ರೀ ಬಿಂದು ಮಾಧವ ದರ್ಶನ ಫಲದಿಂದ ಸಜ್ಜನಸಂಗ ದೊರೆಯಿತು ಸಜ್ಜನ ಸಂಗ ದಿಂದ ಗಯಾಕ್ಷೇತ್ರಕ್ಕೆ ಪೋದರು. ತಂದೆಯಾದ ಶ್ರೀನಿವಾಸಪ್ಪನವರು ವೈಕುಂಠವಾಸಿಗಳಾದ ಕಾರಣ ಶ್ರೀ ವಿಷ್ಣುಪಾದದಲ್ಲಿ ಪಿಂಡ ಪ್ರದಾನಾದಿ ಗಳನ್ನಿತ್ತರು, ಪುನಃ ಕಾಶಿಗೆ ಬಂದರು. ಉತ್ತಮರಾದ ಸಜ್ಜನ ಸಂಗ ದಿಂದ ಶ್ರೀ ಹರಿಯ ಸಲ್ಲಾಪ ಕೇಳುತ್ತ ಗಂಗಾಸ್ನಾನ ಮಾಡುತ್ತ ನಿತ್ಯ ಸ್ನಾನ ಸಂಧ್ಯಾದಿಗಳಿಂದ ಮನಃಪರಿಪಾಕವಾದಿತು.

ದಾಸನಾಗಲು ಸಜ್ಜನಸಂಗ ಬೇಕು, ಸದಾಚಾರಿಯಾಗಿರಬೇಕು, ಅಂತಃಬಹಿಶುಚಿ ಬೇಕು. ಮನಃ ಪರಿಶುದ್ಧವಿರಬೇಕು ಗುರುಹರಿಯಲ್ಲಿ ಭಕ್ತಿ ವಿಷಯ ವಿರಕ್ತಿ ಇದ್ದರೆ ತತ್ವದೇವತೆಗಳು ಪ್ರಸನ್ನರಾದರೆ ವಾಯುನ ಒಲಿಮೆ ವಾಯುದ್ವಾರಾಂ ಶ್ರೀಹರಿಯೊಲಿಮೆ, ಎಷ್ಟೋ ಜನ್ಮಕಷ್ಟಪಡ ಬೇಕು. ಕುಕರ್ಮತ್ಯಾಗ ಮಾಡಬೇಕು. ತಿಥಿತ್ರಯ ನಿಯಮ ಬೇಕು. ಮೇಲಾದ ಗುರುಸೇವಾ ಬೇಕು. ಇಷ್ಟು ನಿಯಮಗಳಿರಲು, ಈಗ್ಗೆ ತಂತಿ ಟಪಾಲ ಮೇಲೆ "ಹರಿದಾಸಾಂಕಿತವನ್ನು" ಪಡೆದು ಕಾವಿಶಾಠಿ ಯನ್ನು ಧರಿಸಿದ ಬೌಧಸನ್ಯಾಸಿಗಳಂತೆ ವರ್ತಿಪ ಆಷಾಢ ಭೂತಿಗಳಿಗೆ ಹರಿ ಓಲುಮೆ ಎಂತೋ ? ನಾನು ದಾಸನಾಗಿದ್ದೇನೆ ನನಗೆಲ್ಲಿ ದೋಷ ವೆಂದು ಸ್ನಾನವಿಲ್ಲದೇ ಪಾನ, ಹೊಗೆಸೊಪ್ಪು ಸೇವಿಸುವ ನರಮಾನವನು ನಿಜವಾದ ದಾಸನೇ ? ನಮ್ಮ ದಾಸಪ್ಪನು ಅಂಥವನಲ್ಲ.

ಗಂಗಾಸ್ನಾನದಿಂದ ಮಲಹಿಂಗಿತು. ಸಜ್ಜನ ಸಂಗದಿಂದ ಮನಃ ಪರಿಪಾಕವಾಯಿತು, ಮನೋಭಿಮಾನಿ ದೇವತೆಗಳೆಲ್ಲ ತುಷ್ಟರಾದರು. ಜ್ಞಾನಪ್ರದರಾದ ನಾರದರೆ ಒಂದಂಶದಿಂದ ದಾಸಪ್ಪನಲ್ಲಿ ಅವತರಿಸಿದ

ವಾಯ್ವಂಶ ಶಂಭೂತರಾದ ಪುರಂದರರಾಯರಲ್ಲಿದ್ದ ವಾಯುದೇವನು ಸಂಪ್ರೀತನಾದನು. ( " ನಾರದೋ ವಿಷ್ಣುಸೇವಾರ್ಥಂ ವಾಯುರಾವೇಶತೋಽಜನಿ" ) ಎಂಬುದು ನಿಜ. " ಗುರುವೊಲಿದರೆ ಹರಿಯೊಲಿವ" ಎಂಬದು ತೋರಿತು.

ಒಂದು ದಿನ ದಾಸಪ್ಪನು ನಿತ್ಯಸ್ನಾನ ಸಂಧ್ಯಾ ಭಗವದ್ಭಜನ ಸಜ್ಜನ ಸಮಾಗಮದಲ್ಲಿ ನೆಸಗಿ ಕಾಶಿ ಕ್ಷೇತ್ರವಾದ ಮಣಿಕರ್ಣಿಕಾ ಘಾಟ ಗಂಗೆಯ ತೀರದಲ್ಲಿ ಮಲಗಿದ್ದನು. ದಣಿದ ಮನುಜಗೆ ಸಾಕಷ್ಟು ನಿದ್ರೆಯು ಬೇಗಹತ್ತಿತು, ಆಗ್ಗೆ ದಾಸಪ್ಪನಿಗೆ ಬೆಳಗುರ್ಝಾಂವ ಒಂದು ಉತ್ತಮವಾದ ಸ್ವಪ್ನವಾದಿತು.

**ಸ್ವಪ್ನದಲ್ಲಿಯೇ ದಾಸಪ್ಪನಿಗೆ ಅಂಕಿತಪ್ರದಾನ,** ಶ್ರೀ ಹರಿಯು ಸ್ವಪ್ನದಲ್ಲಿ ಶ್ರೀ ಪುರಂದರದಾಸ ರೂಪಿನಲ್ಲಿ ಬಂದು, ಮಲಗಿದ್ದ ಮಗನನ್ನು ಬಹು ಪ್ರೀತಿಯಿಂದ ತಂದೆಯು ಎಚ್ಚರಿಸುವಂತೆ ಎಚ್ಚರಿಸಿ ಗಂಗಾನದಿಯ ಆಚೆಯ ಮಡದಲ್ಲಿರುವ, ಶ್ರೀ ವೇದವ್ಯಾಸದೇವರು ಇರುತಿಪ್ಪ ವ್ಯಾಸಕಾಸಿಗೆ ಕರಕೊಂಡು ಹೋದರು. ( ನದಿಯ ತರಣ ಸ್ವಪ್ನದಲ್ಲಿ ಉದಕನೋಡುವದು ಮಂಗಲಕರವಾದುದು ) ಅಲ್ಲಿ ಶ್ರೀ ವ್ಯಾಸದೇವರು ಸಾಕ್ಷಾತ್ತಾಗಿ ದೇವತೆಗಳ ಸಂದಣೆಯಲ್ಲಿ ಕುಳಿತು, ಆ ದೇವತೆಗಳಿಂದ ಸೇವಾ ಕೈಕೊಳ್ಳುತ್ತಿದ್ದನು. ದೇವನಾರದ ಗಂಧರ್ವಾದಿಗಳ ಗಾಯನ ನಡೆದಿತ್ತು. ಶ್ರೀ ಹರಿಯಾದ ವೇದವ್ಯಾಸದೇವರ ಸಂದರ್ಶನ ಮಾಡಿಸಿ, ದಾಸಪ್ಪನ ಕಡಿಯಿಂದ ನಮಸ್ಕಾರ ಮಾಡಿಸೆ, ಕೈಜೋಡಿಸಿ ನಿಂದಿರಲು, ಆಗ ಪುರಂದರದಾಸರೂಪಿ ಹರಿಯು ದಾಸಪ್ಪನ ಸಕಲ ಸಂಚಿತಾಗಾಮಿ ಪಾಪರಾಶಿಯನ್ನು ಕಳಿದನು. ಮತ್ತು ಪರಮಶುದ್ಧ ಮನಸ್ಕನಾದ ದಾಸಪ್ಪನಿಗೆ ತೈತರೇಯ ಉಪನಿಷಿತನಲ್ಲಿ ಪೇಳಿರುವಂತೆ ಶಾಂತಿಯನ್ನು ಪೇಳಿ ಸಕಲ ಮಂತ್ರೋಪದೇಶವನ್ನು ಮಾಡಿದನು. ನಾಲಿಗೆಯ ಮೇಲೆ " ವಿಜಯ "ವೆಂಬೋ ಬೀಜಾಕ್ಷರವನ್ನು ಬರೆದು ವಿಜಯವಿಠ್ಠಲನೆಂಬೋ ಅಂಕಿತ ಪ್ರದಾನಮಾಡಿ ನೀನು ಇದೇ ಅಂಕಿತದಿಂದ ಲೇವೆ ಕವನವನ್ನು ಮಾಡಿ ಲೋಕರನ್ನು

ಉದ್ಧರಿಸೆಂದು ವರವನ್ನು ಕೊಟ್ಟನು. ಮತ್ತು ದಾಸ ದೀಕ್ಷೆಗೆ ಅನು ಕೂಲವಾದ ಮುಖ್ಯ ಚಿನ್ಹವಾದ (ಒಂದು ಚಿಕ್ಕ ಸಪ್ತತಾರಾಯುಕ್ತ ತಂಬೂರಿಯನ್ನು ಕೊಟ್ಟನು ಎಂದು ಹಿರಿಯರ ವಚನ ಇಂದಿಗೂ ಅದು ಚಿಪ್ಪಗಿರಿಯಲ್ಲಿದೆ. ಪುನಃ ಉತ್ತರ ಶಾಂತಿ ಹಾಕಿಸಿ ನೀನು ವಿಜಯದಾಸ ರೆಂದು ಲೋಕದಲ್ಲಿ ಪ್ರಸಿದ್ಧನಾಗು. ನಿನ್ನನು ಸೇವಾಮಾಡಿ ನಂಬಿದ ಜನರು ಸದ್ಗತಿಯನ್ನೈದಲಿ ಎಂಬ ಸದ್ವಾಕ್ಯಗಳೆಂಬೊ ಅನೇಕ ವರ ದಿಂದ ಸಂತೈಸಿ ಅನುಗ್ರಹಿಸಿದನು. ಗುರ್ವನುಗ್ರಹ ಆದೊಡನೆ ದಾಸ ಪ್ಪನು ಪುಳುಕಾಂಕಿತನಾಗಿ ಶ್ರೀ ಹರಿಯನ್ನು ನತಿಸಿ ನುತಿಸಿದನು. ಗುರುಗಳ ದ್ವಾರಾ ಶ್ರೀ ಹರಿಯ ದರ್ಶನವಾದಿತು. ತಮ್ಮ ಹೃದಯ ದಲ್ಲಿ ಬಿಂಬರೂಪಿ ಶ್ರೀ ಹರಿಯ ಸಂದರ್ಶನವಾಯಿತು. ಆನಂದ ಸಮುದ್ರದಲ್ಲಿ ಈಶಾಡಹತ್ತಿದನು.

ಬೆಳಗುಝಾಂವ, ಆಗ್ಗೆ ಎಚ್ಚರಿಕೆಯಾಯಿತು, ಸ್ವಪ್ನದಲ್ಲಿ ನೋಡಿ ದಷ್ಟು ಸಕಲವೂ ಸತ್ಯವಾದಿತು. ಮುಖ ಪ್ರಕ್ಷಾಲನೆಯನ್ನು ಮಾಡಿ ಕೊಂಡು ಶ್ರೀ ಹರಿಗುರುಗಳ ಪಾದಸ್ಮರಣೆಯನ್ನು ಮಾಡಿ ಆನಂದದಿಂದ ಅನಾಯಾಸವಾಗಿಯೇ ಗುರುಗಳ ಸ್ತೋತ್ರಮಾಡಲು ಪ್ರಾರಂಭಿಸಿದರು. ಅವರ ಬಾಯಿಂದ ಹೊರಟ ನುಡಿಗಳೇ ಕವನಗಳಾಗಹತ್ತಿದವು. ದೇಹ ಕಾಂತಿಯೂ ಸ್ಫೂರ್ತಿಯು ಹೆಚ್ಚಾಗಿತ್ತು. ಮೊದಲಿಗೆ ಅವರು (ಸುಳಾದಿ ೪ ಪುಟ ೫ ರಲ್ಲಿ ಕೊಟ್ಟ) "ದಾಸ ಪುರಂದರನ ಪಾದವನ್ನು ಪೊಂದಿ ದೆನು। ಏಸುಜನ್ಮದ ಪುಣ್ಯರಾಶಿ ಫಲಿಸೋ ಎನಗೆ। ಕಾಶಿಗಾಗದವನು ಸಾಸಿರಕೆ ಬೆಲೆಯಾದೆ" ಎಂದು ಹೇಳುತ್ತ ಮುಂದೆ ಮಟ್ಟತಾಳದಲ್ಲಿ—

**"ಇಂದಿನ ದಿನವಾನಂದದಲ್ಲಿ ನಾವು। ಇಂದಿನದಿನವು। ಪುರಂದರ ದಾಸರು ಇಂದುವಿನಂತೆ। ಬಂದೆನ್ನ ಕಣ್ಣು ಮುಂದೀಗ ಸುಳಿ ಯಲು। ಸಂದರುಶನದಿಂದ ದಣಿದೆ। ನಾ। ರಂದ ವರದ ಪುರಂದ ವಿಜಯ ವಿಠಲನ ಕರುಣಾಸಿಂಧುವಿನೊಳಗೆ ನಾ ಪೊಂದಿದೆ ಮಿಂದೆನೊ ॥ ೨ ॥**

ಮುಂದೆ ತ್ರಿವಿಡಿತಾಳದಲ್ಲಿ ತಮ್ಮ ಹಿಂದು ಇಂದು ಮುಂದಿನ ಜನ್ಮ ಸಂಗತಿಯನ್ನು ಹೇಳುತ್ತ "ಗುರುಕೃಪೆಯಿಂದಲಿ ಅರಿದೆ ಈ

ತಿರದಿಂದ ಪರಮಾತ್ಮ ವಿಜಯವಿಠ್ಠಲನಂಘ್ರಿ ಸೇರಿದೇನೆ" ಎಂದು ಗುರುಗಳನ್ನು ಕೊಂಡಾಡಿದರು. ಮತ್ತು

( ಸುಳಾದಿ (೫) ಪುಟ ೬ ರಲ್ಲಿ ಕೊಟ್ಟ )

ಗುರುದಾಸರಾಯರೆನಗೆ ದಾಸತ್ವನೀಡೋಕ್ರಮ ಕರುಣದಿಂದಲ್ಲಿ ವ್ಯಾಸಕಾಸಿಯಲ್ಲಿ ಎಂಬುವದು ಎರಡನೇ ಸುಳಾದಿಯಾಗಿ ಹೇಳಿದರು. ಸುಸ್ವರವಾದ ಈ ಎರಡು ಸುಳಾದಿಗಳನ್ನು ಕೇಳಿ ಬದಿಯಲ್ಲಿದ್ದ ಜನರು ಬೆರಗಾದರು. ಇದೇನು ದಾಸಪ್ಪನ ಚರಿಯವೇ ಬದಲಾಯಿತೆಂದು ಹೊಗಳಿದರು.

ಬೂದಿಮುಚ್ಚಿದ ಕೆಂಡದಂತಿರುವ, ಈ ಜನ್ಮದ ಅಜ್ಞಾನಾಖ್ಯ ಬೂದಿಯು ವಾಯು ಅನುಗ್ರಹವೆಂಬ ಗಾಳಿಯಿಂದ ಹೋಯಿತು. ಒಳಗಿದ್ದ ಅಗ್ನಿಯ ತೇಜಃಪುಂಜವು ಮತ್ತು ತೇಜೋಮಯವಾಗಿ ತೋರಿತು. ಋಷಿಗಳು ಅಂತಃಪ್ರಕಾಶಕರು ಏನೋ ಕೆಲವು ಪ್ರಾರಬ್ಧ ನಿಮಿತ್ಯ ಆವಕರವಾದ ಅಜ್ಞಾನವು ದೂರಾಗಿ, ನೈಜವಾಗಿದ್ದ ಜ್ಞಾನ ತೇಜಸ್ಸು ಹೆಚ್ಚಾಯಿತೇ ಹೊರತಾಗಿ ಹೊಸದಾಗಿ ಬಂದದ್ದಲ್ಲವಾದರೂ ಮನುಜದೇಹದಲ್ಲಿ ಗುರುಸೇವಾ ಗುರು ಉಪದೇಶವಿಲ್ಲದವಿನಾ ಗತ್ಯಂತರ ವಿಲ್ಲೆಂಬುವದು, ಅಂಕಿತವು ಮುಖ್ಯವಾದುದೆಂದು ಅಜ್ಞರಿಗೆ ಸಾಧನ ದಿಂದ ಜ್ಞಾನಲಭಿಸದೆಂದು ಸತ್ಯಮಾಡಿದ ತೋರಿದ ದಾಸಪ್ಪನವರು; ಇಂದು ವಿಜಯದಾಸರಾಗಿ ಪ್ರಖ್ಯಾತಿಯಾದರು.

ಈ ಜನ್ಮವೇ ಬೇರೆಯಾಯಿತು. ಗುರು ಹರಿಯ ಕರುಣವಾದ ಮೇಲೆ " ಇನ್ನೇನಿನ್ನೇನು " ?

" ಎಚ್ಚುತ್ತ ನೋಡೆ ಸಿರಿ ಅಚ್ಯುತನ ಮಹಿಮೆಯನು, ಬಿಚ್ಚು ವಾದರಿದೆರಿದೆನು । ಹೆಚ್ಚು ಸಂತೋಷದಲಿ । ಕೊಚ್ಚಿಪೋದವು ಮನದಿ ಹೆಚ್ಚಿದ್ದ ಪಾಪಗಳು । ಸಚ್ಛಚಿತ್ತದಲಿ ಹರಿಯ ॥ ನಿಚ್ಚಮನ ಬಂದಂತೆ ಸಚ್ಚರಿತ ಸಿದ್ಧಾಂತ । ಅಚ್ಚಸುಖತೀರ್ಥಮತ । ನೆಚ್ಚಿ ಕವನವ ಪೇಳಿ । ಸುಚ್ಚುಮನವುಳ್ಳವರ ತಿದ್ದಿ ಜ್ಞಾನ ಭಕುತಿ । ಮುಚ್ಚುಗಾಣಿಕೆನಿತ್ತರು । ೭ ॥ (ಪದ ೬ ಪುಟ ೯) ದಾಸರ ಅನುಜರಾದ **ಹಯವದನ ವಿಠ**

**ಲರು ಹೇಳಿದಂತೆ** ದಿನೇ ದಿನೇ ದಾಸರಮಹಿಮೆ ಲೋಕದಲ್ಲಿ ವ್ಯಾಪಿಸ ಹತ್ತಿತು. ಮೂಲ ಭೃಗುಋಷಿಗಳ ಕೀರ್ತಿ ಬ್ರಹ್ಮಾಂಡ, ಬಹಿ ಬ್ರಹ್ಮಾಂಡದಲ್ಲಿ ವ್ಯಾಪಿಸಿದ್ದು, ಇಂದು ಈ ಜನುಮದಿ ಭೂಲೋಕದಲ್ಲಿ ವ್ಯಾಪಿಸಿದದ್ದು ಏನಚ್ಚರಾ !

ಸ್ವಪ್ನವು ಸ್ವಪ್ನಗತ ವಸ್ತುವು ಸತ್ಯವೆಂದು ಸಿದ್ಧಮಾಡಿ ತೋರಿದ ಭಗವಂತನ ಮಹಿಮೆ. ಆ ಸ್ವಪ್ನಗತವಾದ ವೈಕಾರಿಕ ದೇಹಧಾರಣ ಮಾಡುವ ಸುಪರ್ವಾಣ ದೇವತೆಗಳ ಮುಂದುವರಿಸಿ ತೈಸಜನಾಮಕ ಭಗವಂತನು ಸ್ವಪ್ನವ್ಯಾಪಾರ ಮಾಡಿಸುವನು. "ಪುಣ್ಯಕ್ಕೆ ಸುಪರ್ವಾಣ ದೇವತೆಗಳು ಹೊಲ್ಲೆಗೆ ದೈತ್ಯಾದಿ ರೂಪಗಳಿಂದ ತೋರಿಸುವ ಬೆಡಗು ತೈಸನ ಆಧೀನ. ಸ್ವಪ್ನಲಬ್ಧ ಸಪ್ತತಾರಾ ಬಹು ಚಿಕ್ಕ ತಂಬೂರಿಯನ್ನು ನೋಡಿ ಜನರು ಬೆರಗಾದರು. ಇದು ದೇವಲೋಕದ ವೀಣೆಯುಯೆಂದು ಕೊಂಡಾಡಿದರು. ಇಂದಿಗೂ ಶ್ರೀ ಮಂತ್ರಾಲಯ ಪ್ರಭುಗಳು ಸೇವಾ ಗೈದ ಕೆಲ ಭಕ್ತರಿಗೆ ಸ್ವಪ್ನದಲ್ಲಿ ಫಲಮಂತ್ರಾಕ್ಷತೆ ಕೊಟ್ಟದ್ದು, ಎಚ್ಚತ್ತ ನಂತರ ಪ್ರತ್ಯಕ್ಷ ಸಿದ್ಧವಾಗಿ ತೋರುವದು ಕಾಣ್ಣಾರೆ ನೋಡಿದ್ದೇವೆ. ಆಗಿನ ಕಾಲದಲ್ಲಿಯೂ ಎಷ್ಟೋ ಜನರು ನಂಬಿಕೆ ಇಡದೆ ಆಕ್ಷೇಪ ಮಾಡುವರಿದ್ದೇ ಇದ್ದರು. ಅಹೋ, ಪುರಂದರದಾಸ ಕಾಲವೆಲ್ಲೆ ? ಇಂದಿಗೆ ಸುಮಾರು ೧೫೦ ವರ್ಷಗಳ ಮೇಲಾದಿತು. ಆ ಪುರಂದರ ದಾಸರು ಇಂದು ಸ್ವಪ್ನದಲ್ಲಿ ಬಂದರಂತೆ, ಉಪದೇಶ ಅಂಕಿತ ವೀಣಾ ಪ್ರದಾನ ಮಾಡಿದರಂತೆ, ಇತ್ಯಾದಿ ವಾಕ್ಯಗಳಿಂದ ಹೀಯಾಳಿಸ ತೊಡಗಿದರು. ಶ್ರೀ ವಿಜಯದಾಸರ ಕಿವಿಗೆ ತಟ್ಟಿತು. ಆಗ್ಗೆ ಪುನಃ ಗುರುಗಳ ಸ್ತೋತ್ರ ಮಾಡಿದರು. (ಪುರಂದರದಾಸರು ಪುಸ್ತಕ ಪ್ರಕಟನೆ ೧, ಸುಳಾದಿ ೩೫, ಪುಟ ೩೯–೪೦ರಲ್ಲಿ ಅಚ್ಚಾಗಿದೆ) "ಗೋತ್ರ ಪ್ರವರೋಚ್ಚಾರಣೆ"ಯೆಂಬ ಸುಳಾದಿಯಲ್ಲಿ ಶ್ರೀ ದಾಸರ ಮಹಿಮೆ ವರ್ಣಿಸುತ್ತ ಶ್ರೀ ವಿಜಯದಾಸರು ಅಟ್ಟತಾಳದಲ್ಲಿ–

**" ಎಲ್ಲೆ ಉಪದೇಶ ಎಲ್ಲಿ ಆವರ ಕಾಂಬುವದು ಮತ್ತಾವಲ್ಲಿ ! ಎಲ್ಲೆ ವರ್ತಮಾನ ಅವರೆಲ್ಲಿ ನೀನೆಲ್ಲಿ ! ಎಲ್ಲಿ ಕಾಲದವರು ಎಲ್ಲಿ ಈ ದಿವಸವು ! ಎಲ್ಲಿಯು ಮತಿಯುಂದು ಪೋಗಲಾಡದಿರಿ ! ಬಲ್ಲವರಿಗೆ**

**ಇದು ಯಥಾರ್ಥವೆನಿಪುದು । ಸೊಲ್ಲು ಪೇಳುವೆ ಕೇಳು ಸಜ್ಜನರು ದಿನಂಪ್ರತಿ । ಎಲ್ಲಿ ಕಾಶಿಗೆ ಸರ್ವ ದೇವಾದಿಗಳು ಬಂದು । ನಿಲ್ಲದೆ ಮಣಿಕರ್ಣಿಕೆಯಲ್ಲಿ ಸ್ನಾನವಮಾಡಿ । ಎಲ್ಲ ಸತ್ಪುಣ್ಯಪುರುಷರು ಸಂಚರಿಪರು । ಅಲ್ಲಿಗೆ ಪೋದಾಗ ಎನ್ನ ಗುರುಗಳ ಕರುಣ । ವಲ್ಲಡಿಗೆ ಸ್ತುತಿಸಿ ಪೇಳಲಳವಗೆ । ಬಲ್ಲಿದರೊಡಿಯ ಶ್ರೀ ವಿಜಯ ವಿಠ್ಠಲನಂಘ್ರಿಪಲ್ಲವ ಪೂಜಿಸುವ ಭಾಗ್ಯವೆ ದೊರಕಿತು ॥** ಎಂದು ಪೇಳಿ ಅಂದೂ ಇಂದೂ, ಮುಂದಿನ ಜನರ ಸಂಶಯಗಳನ್ನು ದೂರು ಮಾಡಿರುವರು. ಇಷ್ಟೇ ಅಲ್ಲ, ಮುಂದೆ ಆದಿ ತಾಳದಲ್ಲಿ–

“ ಅಂಕಿತವಂದೆ ಬ್ಯಾರೆ ವಿಜಯನಾಮವಲ್ಲದೆ ಶಂಕಿಸದಿರಿ ಜನರು ಮಿಗಿಲಾದದ್ದೆಲ್ಲ ಸಮ । ಕೊಂಕುಗಳೊಂದಿಲ್ಲ ದಾಸರು ನುಡಿಸಿದಂತೆ ಅಂಕುರವಾಗುತಿದೆ ಎನ್ನಿಂದ ಮಾಳ್ಪ ಕೃತಿ । ಟಂಕಶಾಲೆಯೊಳು ಮುದ್ರೆ ಗಾರನು ತನ್ನ । ಕಿಂಕರನ್ನು ಕರೆದು ಹಣ ಹೊನ್ನಿಗೆ ನೀನೇ । ಡೊಂಕಾಗ ದಂತೆ ಮುದ್ರೆ ಹಾಕೆಂದತೆರನಯ್ಯಾ । ಮಂಕು ಮಾನವ ನಾನು ಅವ ರಾಜ್ಞದವನಾಗಿ । ಶಂಕೆ ಇಲ್ಲದೆ ಬಹು ಕೀರ್ತನೆ ಪೇಳುವೆ । ಪಂಕಜ ಪತಿ ನಮ್ಮ **ವಿಜಯ ವಿಟ್ಠಲರೇಯ । ಸೋಂಕಿದಾಕ್ಷಣವೆ ಸರ್ವಾ ಭೀಷ್ಟಿಯಾಗುವದು ॥೪॥** ಹೀಗೆ ಹೇಳಿ ಮುಂದೆ ಜತೆಯಲ್ಲಿ “ ಉಭಯಜನಕೆ ವಿಜಯ ಕೊಡುವನು ತಡೆಯದೆ । ವಿಭುವೆ ವಿಜಯ ವಿಠಲ ತನ್ನವರಿಗೆ ಪ್ರಾಣ ॥೫॥

ಇಂದು ಶ್ರೀ ಪುರಂದರದಾಸರಲ್ಲಿ ನಿಂದು ವಿಜಯ ವಿಟ್ಠಲ ಮಹಿಮೆ ತೋರುವ ತಮ್ಮ ಅನುಭವವನ್ನು ವಿವರಿಸಿ ಭಕ್ತರಿಗೆ ಉಪದೇಶಿಸಿದರು.

**ಈ ವಿಜಯ ವಿಟ್ಠಲ**ವೆಂದೇ ದಾಸಪ್ಪನಿಗೆ ಪುರಂದರದಾಸರು ಸ್ವಪ್ನದಲ್ಲಿ ಅಂಕಿತ ಏಕೆ ಕೊಟ್ಟರೆಂದರೆ ಶ್ರೀ ಹರಿಯ ಅನಂತನಾಮ ಗಳಿದ್ದರೂ ಶ್ರೀ ವಿಜಯ ಶಬ್ದವು ಬಹು ಅನ್ವರ್ಥಕವಾದುದು. ಶ್ರೀ ಮಟ್ಟಿಕಾಕೃತ್ಪಾದರ ಶಿಷ್ಯರು ಶ್ರೀ ವಿದ್ಯಾಧಿರಾಜರು ಶ್ರೀ ವಿಷ್ಣು ಸಹಸ್ರ ನಾಮಕ್ಕೆ ಶ್ರುತ್ಯರ್ಥ ಬೋಧಕವಾದ ಸರಸ ಟಿಪ್ಪಣಿ ಮಾಡಿರುವರು. ಆದರಲ್ಲಿ “ಸ್ವಮಹಿಮ್ನಾ ಜಗದ್ವಿಜಮತ **ಇತಿ** ವಿಜಯಃ ॥” ಸ್ವಮಹಿಮೆ

ಯಿಂದ ರಮಾಬ್ರಹ್ಮಾದಿ ಸಕಲ ಜಗತ್ತು ಗೆಲ್ದು ಸ್ವತಂತ್ರನಾದ ಹರಿಯು ಸಕಲರಲ್ಲಿ ವ್ಯಾಪಾರ ಮಾಡಿಸುವ ಕಾರಣ **ವಿಜಯ**ನೆಂದು ಅಥವಾ "ವಿಶಿಷ್ಟೋ ಜಯೋ ಯಸ್ಯೇತಿವಾ ವಿಜಯಃ" ಎಂದು. ಹಿಂದು ಇಂದು ಮುಂದೆ ತ್ರಿಕಾಲಾಬಾಧಿತನಾಗಿರದೆ, ಯಾರಿಂದೂ ಯಾವ ಕಾಲದಲ್ಲಿ ಸೋಲದವನಾಗದೆ ವಿಶಿಷ್ಟವಾದ ಹೆಚ್ಚಿನ ಜಯ ಉಳ್ಳವನು. ಜಯ ಪ್ರದನು ಯಾವಾತನಿರುವನೋ ಆತನೇ ವಿಜಯನೆಂದು ಸಾರ್ಥಕ್ಯ ವಾದುದು. ಇದೇ ಅನುಭವದಿಂದಲೇ ದಾಸರು ಮೇಲಿನ ಸುಳಾದಿ ಯಲ್ಲಿ **ವಿಜಯ ವಿಟ್ಠಲ** ಸೋಂಕಿದಾಕ್ಷಣವೇ **ಸರ್ವಾಭಿಷ್ಟೆಯಾಗುವ ದೆಂದುದೆ** ಸಾಕ್ಷಿ.

ಇನ್ನು ವಿಠಲನೆಂದು ಯಾಕೆಂಬ ಪ್ರಶ್ನೆ ಕೆಲವರದು ಸಾಮಾನ್ಯ ವಾದದು. ''ವಿಟ್ಠಲ, ವಿಠಲ'' ಎರಡೂ ಶಬ್ದವು ಶ್ರೀ ಕೃಷ್ಣ, ವಿಷ್ಣು, ಪಂಢರಪುರಿ ಪಾಂಡುರಂಗ ವಿಠಲ ದೇವರ ನಾಮುಗಳು. ಈ ಭೂಲೋಕ ದಲ್ಲಿ ಶ್ವೇತಾದ್ವೀಪ ಅನಂತಾಸನ, ವೈಕುಂಠವಿದ್ದಂತೆ; ಪಂಢರಪುರ, ಉಡುಪಿ, ತಿರುಪತಿ ಮೂರು ಸ್ಥಾನಗಳಿವೆ. ಒಬ್ಬನೇ ಹರಿಯು ಮೂರು ರೂಪನಾಗಿ- ಪಂಢರಿಯಲ್ಲಿ ವಿಟ್ಠಲ ಶಬ್ದವಾಚ್ಯ **ಶಬ್ದಬ್ರಹ್ಮನಾಗಿಯೂ** ಉಡುಪಿಯಲ್ಲಿ ಶ್ರೀಕೃಷ್ಣ **ಅನ್ನಬ್ರಹ್ಮನಾಗಿಯೂ,** ತಿರುಪತಿಯಲ್ಲಿ ವೆಂಕಟನು **ನಾದಬ್ರಹ್ಮನಾಗಿಯೂ** ಭಕ್ತರ ಇಷ್ಟಾರ್ಥಗರೆವನು. ಉಡುಪಿ ಯಲ್ಲಿ ಅನ್ನಜೀವನಪ್ರದನಾಗಿಯೂ, ವೆಂಕಟಗಿರಿಯಲ್ಲಿ ನಾದದ್ರವ್ಯ ಇಚ್ಛಿಸಿದ ಮುಕ್ತಿಪ್ರದನಾಗಿಯೂ, ಪಂಢರಪುರದಲ್ಲಿ ಶಬ್ದಬ್ರಹ್ಮ, 'ಶಬ್ದ' ಹರಿನಾಮೋಚ್ಚರಣೆ ಮಾಡುವರಿಗೆ ಜ್ಞಾನಪ್ರದನಾಗಿಯೂ, ಮೂರು ರೂಪಗಳಿಂದ ಕ್ರೀಡಿಸುವನು. ಇದು ಪುರಾಣ ವಚನಗಳಲ್ಲದೇ ನಂಬದೇ ಇರತಕ್ಕ ಜನರಿಗೂ ಸಹ ಈಗ್ಗೆ ಪ್ರತ್ಯಕ್ಷ ಗೋಚರವಾಗಿದೆ. ಪಂಢರೀ ವಿಠಲ ವಿಟ್ಠಲನೆಂದರೆ-

**"ವಿದಾನ್ ಜ್ಞಾನಶೂನ್ಯಾನ್ ಜ್ಞಾನಂ ಪ್ರತಿಲಾತಯತೀತಿ ವಿಟ್ಠಲ"**ನೆಂದು ಜ್ಞಾನಿಗಳ ವಚನವೇನಂದರೆ- ಅಜ್ಞಾನ ದಿಶೆಯಲ್ಲಿ ಇರುವ ಜ್ಞಾನಶೂನ್ಯರನ್ನು ಜ್ಞಾನವನ್ನು (ತಿಳುವಳಿಕೆಯನ್ನು) ಕೊಟ್ಟು ಸುಜ್ಞಾನಿಗಳನ್ನು ಮಾಡುವನಾದಕಾರಣ ಪ್ರತಿಯೊಬ್ಬ ದಾಸರಿಗೆ ಪೂರ್ವ

ಪರಂಪರೆ ಗುರುಗಳಿಂದ ದತ್ತವಾದುದು. ವಿಠಲಾಂಕಿತವು ಶ್ರೀರಂಗ ವಿಟ್ಠಲ, ಶ್ರೀ ಪುರಂದರ ವಿಟ್ಠಲ, ಶ್ರೀ ವಿಜಯ ವಿಟ್ಠಲವೆಂದು ಯೋಗಿಕ ವಾಗಿ ಅಂಕಿತಪ್ರದಾನ ಗುಟ್ಟೆಂದು ಹಿರಿಯರಿಂದ ಕೇಳಿದ್ದು ಇಂದು ನೆನಪಿಗೆ ದಾಸರು ತಂದರು. ಇದು ನಿಜವಾಗಿದ್ದರೆ ಸರಿ; ಬೇರೆ ಏನಾದರೂ ಎರಡನೇ ಅರ್ಥ ಗುಟ್ಟು ಇದ್ದರೆ ತಜ್ಞರು ತಿಳುಹಿದಲ್ಲಿ ಉಪಕೃತನಾಗುವೆ.

ಇದೇ ಕಾರಣದಿಂದಲೇ ಶ್ರೀ ವಿಜಯದಾಸರಿಗೆ ಲೋಕದಲ್ಲಿ ವಿಜಯವಾಗುತ್ತಲೇ ಬಂದಿತು. **"ಅರಸು ಮುಟ್ಟಿದರೆ ದಾಸಿ ರಂಭೆ ಯಾಗುವಂತೆ"** ಮತ್ತು **"ಪರಶು ಸೋಂಕಲು ಲೋಹ ಚಿನ್ನ ವಾದಂತೆ"** ಶ್ರೀಹರಿಯು ಸಂದರುಶನವಿತ್ತು ಬಿಂಬನಾಗಿ ಹೃದಯದಲ್ಲಿ ಪೊಳೆಯಲು ವಿಜಯಪ್ರದನಾದ ಹರಿಯ ಮಹಿಮೆಯಿಂದ ತ್ರಿಲೋಕದಲ್ಲಿ ವಿಜಯದಾಸರಿಗೆ ಎಲ್ಲಿ ನೋಡಲು ಜಯವು.

ಜನರ ಮನ್ನಣೆ, ಜಪಮಾಡಿ ಕುಳಿತ ಕಾಲದಲ್ಲಿಯೂ ಸಹ ದಾಸರಿಗೆ ನಮಿಸಿ; ದ್ರವ್ಯ ವಸ್ತ್ರಾಭರಣ ಕಾಣಿಕೆಗಿಂತ ಮೊದಲು ತಂಬಿಗೆ ಯನ್ನು ಕಳೆದುಕೊಂಡ ದಾಸಪ್ಪನಿಗೆ ವಿಜಯವಾದ ತಂಬಿಗೆ ಥಾಲಿ ಪಂಚಮುದ್ರಿ ಗೋಪಿಚಂದನ, ದೇವರು, ದೇವರ ಪೆಟ್ಟಿಗೆ, ಪೂಜಾ ದ್ರವ್ಯಗಳೆಲ್ಲ ವಿಜಯನು ಒದಗಿಸಿ ಕೊಟ್ಟನು. ಸೇವೆಗೆ ಶಿಷ್ಯರು, ದೇವರ ನೈವೇದ್ಯಕ್ಕೆ ತಕ್ಕ ಸಾಹಿತ್ಯ, ವಸ್ತ್ರ ದ್ರವ್ಯಾದಿಗಳು ಜನರು ಕಾಣಿಕೆ ಯಾಗಿತ್ತು ದಾಸರ ಸಂದರ್ಶನ ಪ್ರಾರಂಭವಾದಿತು. ಸ್ವಪ್ನವು ಅಕ್ಷರಸಹ ವಾಗಿ ನಿಜವಾಗಹತ್ತಿತು. ಬಡದಾಸಪ್ಪನನ್ನು ಮರೆತೆ ಬಿಟ್ಟರು. ಶ್ರೀ ವಿಜಯದಾಸರೆಂದೇ ಕರೆಯಲಾರಂಭಿಸಿದರು. ಅವರ ಬಾಯಿಂದ ಬಂದ ಮಾತುಗಳೇ ವೇದವಾಕ್ಯಗಳಾದವು. ಕಾಶಿದೇಶದಲ್ಲಿದ್ದ ಪಂಡಿತರುಗಳೆಲ್ಲ ದಾಸರನ್ನು ಸಂದರ್ಶಿಸಿ ಕೆಲವರು ಜ್ಞಾನ, ಕೆಲವರು ಅರ್ಥ ಸಂಪಾದಿಸಿ ಕೊಂಡರು. ಬಂದ ದ್ರವ್ಯವೆಲ್ಲ ದಾನ, ಪದಾರ್ಥಗಳೆಲ್ಲ ಅಂದಿನ ದೇವರ ನೈವೇದ್ಯದಲ್ಲಿಯೇ ವ್ಯಯ. ದಾಸರ ತ್ಯಾಗವೂ ದಾನವೂ ಲೋಕ ಪ್ರಸಿದ್ಧಿಯಾಯಿತು. ಶ್ರೀ ವಿಜಯದಾಸರ ಸಂಸ್ಥಾನವೇ ಏರ್ಪಟ್ಟಿತು. ಆಗಿನವ್ಯಾಳ ಕಾಶಿ ಮಹಾರಾಜನವರೆಗೆ ದಾಸರ ಕೀರ್ತಿಯು ತಟ್ಟಿ,

ದಾಸರ ಮಹಿಮೆ ಈಕ್ಷಿಸಲು ಕಾಶಿ ಮಹಾರಾಜರು ಪಾದಚಾರಿಯಾಗಿ ಬಂದು ದಾಸರ ಸಂದರ್ಶನ ಲಾಭವನ್ನು ಪಡೆದು ವಿದ್ವದೋತ್ತಮರಿಗೆ ಮಾಡುವ ಮರ್ಯಾದೆ ಮೇನೆ, ಪಲ್ಲಕ್ಕಿ, ವಾಹನ ವಸ್ತ್ರಾದಿಗಳನ್ನರ್ಪಿಸಿ ಕೃತಾರ್ಥನಾದನು. "ಕಿಮುಲಭ್ಯಂ ಭಗವತಿ ಶ್ರೀನಿಕೇತನೆ" ಎಂದು ಸ್ಮರಿಸಹತ್ತಿದರು.

ಕೆಲವು ದಿನ ಹೀಗೆ ಬಹು ಸನ್ಮಾನಿತರಾಗಿ ಕಾಶಿ ದೇಶದಲ್ಲಿ ವಾಸಮಾಡಿದರು. ಸಜ್ಜನರ ಉದ್ಧಾರಾರ್ಥವಾಗಿ ಮುಂದೆ ನಾಗು. ದೇಶ ಸಂಚಾರ ಬೆಳಿಸೆಂದು ಶ್ರೀ ಹರಿಯಾಜ್ಞೆಯನ್ನು ತಿಳಿದು ಕಾಶಿಯಿಂದ ದಕ್ಷಣಯಾತ್ರಾ ಬೆಳಸಿದರು.

## ವಿಜಯದಾಸರು ಕಾಶಿಯಿಂದ ದಕ್ಷಣ ದಿಶಿಗೆ ತೆರಳಿದ್ದು

ದಾಸರು ವಿಜಯಂಗೈಸಿದುದು ದೇಶವೆಲ್ಲಾ ಹಬ್ಬಿತು. ಇಷ್ಟರಲ್ಲಿ ವಿಜಯದಾಸರ ಮಹಿಮೆ. ಆಸೇತು ಹಿಮಾಚಲ ಪರಿಯಂತ ವ್ಯಾಪಿಸಿತು. ಊರಿಂದ ಊರಿಗೆ ಬರುವ ಮಾರ್ಗದಲ್ಲಿ ಜನರು ದಾಸನನ್ನು ಮೊದಲಿಂದ ಮೊದಲೆ ಸಂದರ್ಶಿಸಿ ನಮ್ಮೂರಿಗೆ ದಯಪಾಲಿಸಿ ನಮ್ಮ ಗ್ರಾಮಕ್ಕೆ ದಿಗ್ವಿಜಯಮಾಡಿ ಉದ್ಧರಿಸಿರೆಂದು ಪ್ರಾರ್ಥಿತರಾಗಿ ಜನರಿಂದ ರಾಜಮನ್ನಣೆಯನ್ನು ಹೊಂದುತ್ತಾ ಅವರ ಇಷ್ಟಾರ್ಥಗಳನ್ನು ಪೂರೈಸುತ್ತಾ, ನಿತ್ಯ ಭಜನಾಕ್ರಮದಿಂದ ಶ್ರೀ ಹರಿಯನ್ನು ನೂತನ ನೂತನ ಪದ ಪದ್ಯ ಸುಳಾದಿಗಳಿಂದ ಸ್ತೋತ್ರ ಗೈಯುತ್ತಾ, ದಿಗ್ವಿಜಯಗೈಸಿದರು. ಎಲ್ಲೆಲ್ಲಿ ಏನು ಮಹಿಮಾ ತೋರಿದರೆಂಬ ಸಾಕಷ್ಟು ಆಧಾರವಿಲ್ಲ. ಒಟ್ಟಿನ ಮೇಲೆ ಬಹು ಸನ್ಮಾನಿತರಾಗುತ್ತ ಮೇನೆ ಪಲ್ಲಕ್ಕಿ ಶಿಷ್ಯವೃಂದ ವೈಭೋಗದೊಡನೆ. ಆಕಳು ತನ್ನ ಕರುವನ್ನು ಹುಡಿಕಿಕೊಂಡು ಬಂದಂತೆ ಶಿಷ್ಯವರ್ಗವನ್ನು ಸಂತೈಸಲು ಆದವಾನಿಗೆ ಬಂದರು, ಜನರಿಗೆ ಆನಂದ.

## ಆದವಾನಿಯಲ್ಲಿದ್ದ ಭಗವದ್ಭಕ್ತರು

ಆ ಕಾಲದಲ್ಲಿ ಆದವಾನಿ ನವಾಬನಲ್ಲಿ ತಿಮ್ಮಣ್ಣನೆಂಬುವರು ದಿವಾನಗಿರಿ ಮಾಡುತ್ತಿದ್ದರು. ಧರ್ಮಬುದ್ಧಿಯುಳ್ಳವರು ತ್ಯಾಗಿಗಳು

ಸಜ್ಜನ ಪೋಷಕರಾಗಿದ್ದರು. ಆಕಾಲ ಶ್ರೀ ವಿಜಯದಾಸರು ಆದ ವಾನಿಗೆ ವಿಜಂಯಗೈಯ್ಯದ ಪೂರ್ವದಲ್ಲೆ ಶ್ರೀ ಭಾಗಣ್ಣದಾಸರು ತಾಯಿ ತಮ್ಮಂದಿರ ಸಹಿತ ಅನೇಕ ಕಷ್ಟಗಳನ್ನನುಭೋಗಿಸಿ, ಯಾದವಗಿರಿಗೆ ಬಂದು ಸತ್ಪಾತ್ರನಾದ ತಿಮ್ಮಣ್ಣನ ಆಶ್ರಯ ಮಾಡಿದ್ದರು. ಜಾತಾ ಪರೋಕ್ಷಿಗಳಾದ ಭಾಗಣ್ಣದಾಸರು ಸುಖ ಪ್ರಾರಬ್ಧರೂ, ತ್ರಿಕಾಲದರ್ಶಿ ಗಳೂ ಆಗಿರುವರಲ್ಲದೇ ದೇಶ ದೇಶದ ಜನರು ಇವರ ಹತ್ತಿರಕ್ಕೆ ಬರಲು ಅವರ ಮನಸ್ಸಿನಲ್ಲಿದ್ದುದೆಲ್ಲಾ ಮತ್ತು ಆಗತಕ್ಕದ್ದೆಲ್ಲಾ ಶ್ರೀಶನಾಜ್ಞೆ ದಿಂದ ಹೇಳುತ್ತ ಜನರ ಮನೋಭಿಲಾಷೆ ಪೂರೈಸುತ್ತಿರುವರು. ಇದ ರಿಂದ ಜನರು ಅನೇಕ ವಿಧವಾದ ಕಾಣಿಕೆಗಳನ್ನರ್ಪಿಸುತ್ತಿದ್ದರು. ಭಾಗಣ್ಣ ದಾಸರು ಪೂರ್ವಜಾತಾಪರೋಕ್ಷಿಗಳಾದ ಕಾರಣ ವೆಂಕಟಕೃಷ್ಣನೆಂಬೊ ಅಂಕಿತದಿಂದ ಪದಸುಳಾದಿಗಳನ್ನು ಮಾಡುತ್ತ ಹರಿಯಗುಣ ಕೊಂಡಾ ಡುತ್ತ, ಜನರಿಗೆ ಹಿಂದುಮುಂದಿನ ಜನ್ಮದವಾರ್ತೆ ಹೇಳುತ್ತಲಿದ್ದರು.

" ಧಾತ್ರಿಯೊಳು **ಯಾದವಗಿರಿಯು** ಸ। ತ್ಪಾತ್ರ ತಿಮ್ಮಣ್ಣನೆಸು ತಲಿ। ತೀರ್ಥಯಾತ್ರಿಯನೆವನದಿಂದಾ ಕ್ಷೇತ್ರದಲಿ ವಾಸಮಾಡುತ ॥೨೮॥ ದೇಶ ದೇಶದ ಜನರುಗಳು ಬಂದು ವಾಸವಾಗಿ ಇಪ್ಪರು। ಶ್ರೀಶನಾಜ್ಞದಿ ಅವರ ಮನೋಭಿಲಾಷೆ ಪೂರೈಸುತಿಪ್ಪರು ॥ ೨೯ ॥ ವೆಂಕಟಾಕೃಷ್ಣೆಂದು ಪದಗಳಿಗಂಕಿತವು ನೀಡುತಲಿರೆ ॥ ವೆಂಕಟೇಶನ ದಾಸವರ್ಯರು ವಿಜಯ ಗೈದು ಬರುತಿರೆ ॥ ೩೦ ॥ ಎಂದು ಭಾಗಣದಾಸರ ಚರಿತ್ರೆ ಪದದಲ್ಲಿ ಅವರ ತಮ್ಮಂದಿರಾದ ರಂಗದಾಸರು (ತಂದೇ ಗೋಪಾಲ ವಿಠಲರು) ತಾವು ಕಣ್ಣಾರೆ ನೋಡಿದ್ದು ವರ್ಣನಮಾಡಿರುವರು ಇದು ನಿಜವಾದ ಸಂಗತಿ.

ಶ್ರೀ ವಿಜಯದಾಸರು ಆದವಾನಿಗೆ ಬಂದು ಸಂಪ್ರದಾಯದಂತೆ ಪ್ರಾಣದೇವರ ಗುಡಿಯಲ್ಲಿಳಿದರು. ನವಾಬನ ಆತಿಥ್ಯವು ತಿಮ್ಮಣ ನವರ ದ್ವಾರಾ ನಡೆಯಿತು. ಭಾಗಣ್ಣನು ಅಂಗಡೆಯಿಟ್ಟು ತನ್ನ ಪೂರ್ವ ಜನ್ಮ ಈ ಜನ್ಮದ ಸುಕೃತವನ್ನು ಮಾರುವನೆಂಬುದು ತಿಳಿದ ಜ್ಞಾನಿ ಗಳಾದ ದಾಸರು ಭಾಗಣ್ಣನಿದ್ದೆಡೆಗೆ ಪೋಗಿ ಜನಗದ್ದಲದಲ್ಲಿಯೇ ಕುಳಿ

ತರು. ಭಾಗಣ್ಣನು ಅನೇಕ ಜನರಿಗೆ ಅವರ ಪೂರ್ವಾಜನ್ಮಸಂಗತಿ ಹೇಳುತ್ತಡ್ಡಲಿದ ದಾಸರು ಪ್ರವೇಶಮಾಡಿ ಕುಳಿತಾಕ್ಷಣವೆ ಭಾಗಣ್ಣನ ಅಪರೋಕ್ಷವೆಲ್ಲ ತಿರೋಭಾವವೈದಿತು. ಭಾಗಣ್ಣನು ಗಾಬರಿಗೊಂಡನು ಆಗ್ಗೆ ವಿಜಯದಾಸರು ಇದೇನು ಅಂಗಡಿ ಬಿಚ್ಚಿಕೊಂಡು ಕುಳಿತಿದ್ದಿ ಯಪ್ಪಾ ಸಾಕುಮಾಡು ಎಂದು ಹೇಳಿದಕೂಡಲೇ ಭಾಗಣ್ಣನ ಮೈಯಲ್ಲಾ ಜುಮ್ಮೆಂದು ದೊಡ್ಡವರಿಂದ ನನ್ನ ಉದ್ಧಾರಕಾಲ ವದಗಿತೆಂದನು. ಆಗ್ಗೆ ಒಳ್ಳೇ ಮುಹೂರ್ತದಲ್ಲಿ ಶ್ರೀ ವಿಜಯದಾಸರು.

## ಭಾಗಣ್ಣನವರಿಗೆ ಉಪದೇಶ ಅಂಕಿತಪ್ರದಾನ

ಪ್ರದಾನ ಕೊಟ್ಟರು. "ದಾಸವರ್ಯರು ಕಂಡು ಇವರಿಗುಪದೇಶ ವನು ಮಾಡಲಾಕ್ಷಣ। ಏಸುಜನ್ಮದ ಸುಕೃತವೆನುತಲಿ ಲೇಸುಲೇಸೆಂದು ಮೆರದನಾ" ॥ ೩೧ ॥ (ತಂದೆ ಗೋಪಾಲ ವಿಠಲರು).

ಶ್ರೀ ವಿಜಯದಾಸರು, ಭಾಗಣ್ಣನು ಒಳ್ಳೇ ಸುಕೃತಿ ಉಪದೇಶಕ್ಕೆ ಯೋಗ್ಯನೆಂದು ತಿಳಿದು, ಗೋಪಾಲ ವಿಠ್ಠಲನೆಂದು ಅಂಕಿತಪ್ರಧಾನ ಮಾಡುವಾಗ್ಗೆ, "ಗೋಪಾಲ ವಿಠಲ ನಿನ್ನ ಪೂಜೆಮಾಡಿದೆನೊ ಕಾಪಾಡು ಈ ಮಾತನು। ಆಪಾರ ದಿವಸದಲಿ ಕೂಡಿದವನವ್ಯಾಲೆ। ನೀ ಪ್ರೀತಿ ಯನು ಮಾಡಿ ನಿಜದಾಸರೊಳಗಿಡು ॥ ಪಲ್ಲ ॥ ಎಂದು ೩ ನುಡಿ ಪದ ವನ್ನು ಮಾಡಿದ್ದಾರೆ. (ಪದ ಹಿಂದೆ ಕೊಟ್ಟದೆ) ಈ ಭಾಗಣ್ಣನು ಬಹು ಸುಗುಣಿಯು, ಭಗವದ್ಭಕ್ತನು ಅಲ್ಲದೆ ಪಂಡಿತನು ಶ್ರುತಿಶಾಸ್ತ್ರ ಪುರಾಣ ಇತರ ಮಿಕ್ಕ ಗ್ರಂಥಗಳನ್ನು ನಿರಂತರದಲ್ಲಿ, ಅಭ್ಯಾಸ ಮಾಡಿರುವನು. ಅನೇಕ ಬಾರೆ ನಾನಾ ತೀರ್ಥಯಾತ್ರೆಗಳನ್ನೂ ನಾನಾ ವಿಧವಾದ ಧರ್ಮಗಳನ್ನೂ, ಬಹು ಪುಣ್ಯತಮವಾದ ವ್ರತಗಳನ್ನು ಮಾಡಿ, ದೇಹ ಶುದ್ಧವಾಗಿದೆ. ನಿನ್ನ ಸ್ತೋತ್ರಗಳಿಂದ ಮನಃಪರಿಪಾಕವಾಗಿದೆ. ಉನ್ನತವಾದ ತಪಸ್ಸು ಮೌನವ್ರತಾದಿಗಳನ್ನು ಮಾಡಿದ್ದಾನೆ. ಇಂಥ ಮಹಾ ಪುಣ್ಯವಂತನಾದ ನಿನ್ನ ಭಕ್ತನೆಂದು ತಿಳಿದು ನಿನ್ನ ಪ್ರೇರಣೆ ಯಂತೆ ಇವಗೆ ಉಪದೇಶಮಾಡಿದ್ದೇನೆ. ಸಂತತ ಜೀವರಲ್ಲಿರುವ ಅಚ್ಯುತನಾಮಕ ಹರಿಯೇ ನಿನ್ನ ಕರುಣಾರಸಕ್ಕೆ ಎಣೆ ಗಾಣೆ ನಿನ್ನಲ್ಲಿದ್ದ

ನೇಮನ ಕರ್ತ್ರಾರ್ತ್ವವೇನೊ ತಿಳಿಯದು ಎನಗೆ ಕೊಂಡಾಡಲು ಶಕ್ತಿ ಸಾಲದು, ಮುಖ್ಯವಾಗಿ ಭಕ್ತರಿಗೆ ಯಥಾರ್ಥಜ್ಞಾನವನ್ನಿತ್ತು ಈ ಕ್ಷೋಣಿಯಲ್ಲಿ ಮಾನವರಲ್ಲಿ ಇವನೊಬ್ಬನು ಜ್ಞಾನವಂತನೆಂಬ ವಿಚಿತ್ರ ವನ್ನು ತೋರಿ ನಿನ್ನ ಭಕ್ತರನ್ನು ರಕ್ಷಿಸಿ ಧನ್ಯರನ್ನು ಮಾಡುವ ಹರಿಯೆ ಈ ಪರಿಯಿಂದ ನಿನ್ನ ಭಕ್ತರ ಕೀರ್ತಿ ಯಶಸ್ಸು ಲೋಕದಲ್ಲಿ ಪಸರಿಸುವ ನಿನ್ನ ಮಹಿಮೆಯು ವಿಚಿತ್ರ. ಪ್ರತಿಕ್ಷಣಬಿಡದೆ ನಿನ್ನನು ತಮ್ಮ ಹೃತ್ಕಮಲ ದಲ್ಲಿ ಧ್ಯಾನಮಾಡತಕ್ಕ ದೇವತೆಗಳಿಗೆ ಬೆಡಗು ತೋರುತಿದೆ. ಹೇ ಸ್ವಾಮಿ (ಭಾಗಣ್ಣನ ಬಿಂಬ) ಮೂರ್ತಿಯಾದ ಗೋಪಾಲ ವಿಠಲನೆ ನಿನ್ನ ಪ್ರೇರಣೆಯಿಂದ ಶಾಸ್ತ್ರಮರ್ಯಾದೆ ಪ್ರಕಾರ ಅಂಕಿತವನ್ನು ನಾನಿತ್ತ ಕಾರಣ ಮನ್ನಿಸಿ, ಈ ಕಿಂಕರನಿಗೆ ಲೌಕಿಕದ ಡೊಂಕುತನನಡತೆ, ಎಂದರೆ ಲೋಕದ ಜನರಿಗೆ ಅವರರಿಗೆ ಆಗುವ ಮುಂದಿನ ಚರಿತೆ ಗಳನ್ನು ಹೇಳಿ ಪುಣ್ಯಹ್ರಾಸ ಮಾಡಿಕೊಳ್ಳುವದು. ಮತ್ತು ಇತರ ಲೌಕಿಕ ವ್ಯಾಪಾರವನ್ನು ಬಿಡಿಸಿ ಅನೇಕ ಜನುಮದಲಿಪ್ಪ ಪಾಪರಾಶಿ ಗಳನ್ನು ದೂರಗೈಸು. ಇತರ ಸಂಶಯವಿಲ್ಲದಂತೆ ಪರಿಶುದ್ಧ ಜ್ಞಾನ ದಲ್ಲಿಡು. ಈತನಿಂದ ಕಾವ್ಯಗಳಪೇಳಿಸು ಇತರರ ಬಾಧೆ ಸಂಕಟಗಳು ಬರಧಾಂಗೆ, ಮನೋವೃತ್ತಿ ಕೆಡದೆ ಶುದ್ಧ ಜ್ಞಾನವನ್ನು ಕಾವ್ಯಗಳ ಪ್ರೇರಿಸುವ ಮತಿಕೊಟ್ಟು, ಸಲಹುವನು ನೀನು ಇಂದಿನ ಪರಿಯಂತ ವಾಗಿ "ವೆಂಕಟಕೃಷ್ಣ" ಎಂಬ ಅಂಕಿತದಿಂದ ಭಾಗಣ್ಣನವರಿಂದ, ಕಾವ್ಯಗಳನ್ನು ಪ್ರೇರಿಸಿ ನುಡಿಸಿದ ವೆಂಕಟಕೃಷ್ಣ ನಾಮಹರಿಯೆ ನೀನೆ ಎನ್ನ ಬಿಂಬನಾದ ವಿಜಯ ವಿಠಲನೇ ನೀನಿತ್ತ ಅಂಕಿತದ ಅಂಕುರ ಪಲ್ಲೈಸಿ ಬೆಳದು, ಫಲಪ್ರಾಪ್ತಿಯಾಗಲೆಂದು ಶ್ರೀ ಹರಿಯನ್ನು ಪ್ರಾರ್ಥಿಸಿ ಅಂಕಿತವನ್ನು ಇತ್ತರು. ಇಂತು ಗುರುಗಳಿಂದ ದತ್ತವಾದ ಅಂಕಿತವೆ ಫಲಕಾರಿಯಾಗುವದು. ಇದೇ ದಾಸರಪದದ ಅರ್ಥ.

ಹೀಗೆ **"ಕ್ಷಯನಾಮ ಸಂವತ್ಸರದ ಮಾರ್ಗಶಿರ ಶುದ್ಧ ತ್ರಯೋದಶಿ ಶುಕ್ರವಾರ ಅಶ್ವಿನಿನಕ್ಷತ್ರ ಹನುಮಂತದೇವರ ವ್ರತ ಸಂಗಮ ಕಾಲವು"** (ಈ ಶುಭದಿನದಲ್ಲಿ ಗೋಪಾಲದಾಸರಿಗೆ ಅಂಕಿತ ಪ್ರದಾನ ಮಾಡಿದರೆಂದು, ಚಿಪ್ಪಗೇರಿಯ ಹಳಿಯ ಒಹಿಯಲ್ಲಿ ಈ ಪದದ

ಅಡಿಯಲ್ಲಿ ಬರದಿರುವರು ) ಯಾದವಗಿರಿ ( ಆದವಾನಿಗೆ ಶ್ರೀ ವಿಜಯ ದಾಸರು ಆಗಮಿಸಿ, ಕಾಲಕ್ಲಪ್ತದಲ್ಲಿ ಶ್ರೀ ವ್ಯಾಸರಾಜರಿಂದ ಪ್ರತಿಷ್ಠತ ವಾದ "ಮಂಗರಾಯ" ಪ್ರಾಣದೇವರ ಸನ್ನಿಧಿಯಲ್ಲಿಯೇ ಅಂಕಿತ ಪ್ರದಾನ ಮಾಡಿದರೆಂದು ಹಿರಿಯರ ವಚನಕ್ಕೆ "ತಂದೆ ಗೋಪಾಲ ವಿಠ ಲರ ವಾಕ್ಯವೇ ಆಧಾರವಾಗಿದೆ."

ಇಂಥವೆಲ್ಲ ಸಂಶೋಧನಾತ್ಮಕ ಚರಿತ್ರೆಯನ್ನು ಅಲ್ಲಗಳೆದು ಮನ ಬಂದಂತೆ ಊಹೆಗಳನ್ನು ಕಲ್ಪಿಸಿ ಗೋಪಾಲದಾಸರು ಕಾಶಿಯಾತ್ರೆಗೆ ಹೋಗಿದ್ದಾಗೆ ಅಲ್ಲಿ ವಿಜಯದಾಸರ ದರ್ಶನವಾಗಿ ಅಂಕಿತ ಪ್ರದಾನ ಮಾಡಿದರೆಂದು ನಿರಾಧಾರವಾದದುದೆಂದು ತೋಚುತ್ತದೆ. ಇವರಂತೆ ಅನೇಕ ತಪ್ಪು ಕಲ್ಪನೆಗಳನ್ನು ಮಾಡುತ್ತ ತಿಳಿಯದ ಜನರಿಗೆ ಮೋಸ ಮಾಡಿದ ಪಾಪ ಬರುತ್ತದೆ. ಇಷ್ಟೇಅಲ್ಲ ಸುಳ್ಳಾಡಿದ ಹೆಚ್ಚಿನ ಪಾಪವೂ ಸಂಭವಿಸುವದು, ಐ ತಿ ಹಾ ಸಿ ಕ ವು ನಿಜವಾಗಿರಬೇಕು. ಸಾಕಷ್ಟು, ಆಧಾರ ಬೇಕು.

ಹೀಗೆ ಗೋಪಾಲದಾಸರು ಶ್ರೀ ವಿಜಯದಾಸರಿಗೆ ಮೊದಲನೆಯ ಶಿಷ್ಯರಾದರು. ಶ್ರೀ ವಿಜಯದಾಸರ ಜೊತಿಗೆ ಯಾವಾಗಲೂ ಇರ ಲಾರಂಭಿಸಿದರು. ಶ್ರೀ ವಿಜಯದಾಸರಲ್ಲಿ ವಿಚಿತ್ರ ಗುರುಭಕ್ತಿತೋರುತ್ತ ಸೇವಾಮಾಡುತ್ತಿರುವ ಭಾಗಣ್ಣನವರ ದ್ವಾರವೇ ಅನೇಕ ತಮ್ಮ ಮಹಿಮೆ ಯನ್ನು ತೋರಹತ್ತಿದರು.

## ದಾಸರ ಮಾತೃ ಸಹೋದರರು ಆದವಾನಿಗೆ ಬರುವಿಕೆ

ದಾಸಪ್ಪನು ದೇವರ ಅನುಗ್ರಹಕ್ಕೆ ಪಾತ್ರನಾಗಿ ವಿಜಯದಾಸ ರೆಂಬೊ ಖ್ಯಾತಿಯನ್ನು ಹೊಂದಿ ಆದವಾನಿಗೆ ಬಂದಿರುವನೆಂಬೊ ವಾರ್ತೆ ಕೇಳಿ ನಿಷ್ಪಾಪಿಯಾದ ಕೂಸಮ್ಮ ಅವರಿಬ್ಬರ ತಮ್ಮಂದಿರು ಕೇಳಿ ಆನಂದ ಭರಿತರಾದರು. ಪತಿಭಕ್ತಿಯುಳ್ಳ ಪತಿವ್ರತೆಯಾದ ಶ್ರೀ ಸೌ॥ ಅರಳಮ್ಮ ನವರ ಆನಂದಕ್ಕೀಡಿಲ್ಲದಂತಾಯಿತು. ದಾಸಪ್ಪನು ಎರಡನೇ ಸಲ ಹೇಳದೆ ಕೇಳದೆ ಮನೆ ಬಿಟ್ಟು ನಡೆದನೆಂಬೊ ದೊಡ್ಡ ಚಿಂತೆಯೊಂದು. ಅದರಲ್ಲಿ ಬಡತನ ಬ್ರಹ್ಮೇತಿಯ ಕಾಟವು. ದಾಸಪ್ಪನ ಈ ವಾರ್ತೆಯು

ಕೇಳಿ ಮುದಭರಿತರಾಗಿದ್ದರೂ ಶ್ರೀ ವಿಜಯದಾಸರ ಸೂಚನೆಯಂತೆ ಆದವಾನಿಗೆ ಬಂದರು.

ಮಗನನ್ನು ನೋಡಿದೊಡನೆ ವೃದ್ಧಮಾತೆಯ ಆನಂದವು ಉಕ್ಕೇರಿತು. ವಿಜಯದಾಸರು ಮಾತೆಯ ಚರಣಕ್ಕೆರಗಿ ನಮಿಸಿದರು. ತಾಯಿಯು ಮಗನನ್ನು ಮುದ್ದಿಸಿ ಬಿಗಿದಪ್ಪಿದಳು. ಪತಿಭಕ್ತಿಯುತಳಾಗಿ ನಮಿಸಿದ ಅರಳಮ್ಮನವರನ್ನು ಸಂತೈಸಿದರು. ಪಿತೃಭಕ್ತಿಯುತರಾದ ಅನುಜರನ್ನು ಮುದಬಡಿಸಿ ಆನಂದದಲ್ಲಿ ಎಲ್ಲರೂ ಕೂಡಿ ಕೆಲವು ಕಾಲ ಆದವಾನಿಯಲ್ಲೆ ವಾಸಮಾಡುತ್ತ ಸಜ್ಜನರನ್ನು ಉದ್ಧಾರಮಾಡಿ ಭಗವಂತನ ಮಹಿಮೆ ತೋರಿದರು.

## ದಿವಾನ ತಿಮ್ಮಣ್ಣನವರಿಗೆ ಉಪದೇಶ

ಲೌಕಿಕ ಮಹಾಪದವಿಯಲ್ಲಿ ಆದವಾನಿ ನವಾಬನ ದಿವಾನ ತಿಮ್ಮಯ್ಯನವರೆಂದು ಗೌರವಾರ್ಥವಾಗಿ ಅಯ್ಯನೆಂದು ಜನರು ಕರೆಯುತ್ತಿದ್ದರು. ತಿಮ್ಮಯ್ಯನವರಿಗೆ ವಿಜಯದಾಸರಲ್ಲಿ ಅತ್ಯಂತ ಭಕ್ತಿ, ಒಂದು ದಿನ ಶ್ರೀ ವಿಜಯದಾಸರು ಗೋಪಾಲದಾಸರು ಇಬ್ಬರೆ ಇರುವಾಗಲೇ ತಾವು ಒಬ್ಬರಿಗೆ ತಿಳಿಯದಂತೆ ಬಂದು ನಮಸ್ಕಾರಮಾಡಿದರು. ಆಗಲೇ ವಿಜಯದಾಸರು ಮುಗುಳುನಗೆಯಿಂದ “ಪಂಗನಾಮದ ತಿಮ್ಮಣ್ಣನವರೆ” ಎಲ್ಲವೂ ಕುಶಲವೇ ಎಂದು ಸಂಬೋಧಿಸಿದರು. ಮಹಾಸ್ವಾಮಿ ತಮ್ಮ ಕೃಪೆಯೆಂದುಪೇಳುತ್ತ ದಾಸರ ಮೃದುವಚನಾನುಗ್ರಹದಿಂದ ತಿಮ್ಮಂಣನವರಿಗೆ ತಮ್ಮ ಪೂರ್ವಜನ್ಮದ ಮಾತು ಸ್ಫೂರ್ತಿಯಾಯಿತು. ಭಗವಂತನು ತನ್ನ ಭಕ್ತರಲ್ಲಿರುವ ಮಹಿಮೆ ಪ್ರಕಟಿಸಿ ಭಕ್ತರು ಮಹಾಪುರುಷರು ದೊಡ್ಡವರೆಂದು ಲೋಕದಲ್ಲಿ ಖ್ಯಾತಿಮಾಡಿ, ಉದ್ಧರಿಸುವನು. ತಿಮ್ಮಣ್ಣನವರು ಪೂರ್ವಜನ್ಮದಲ್ಲಿ ಮೂರುನಾಮ (ಪಂಗನಾಮ) ದ ಶ್ರೀ ವೈಷ್ಣವಕುಲದಲ್ಲಿ ಜನಿಸಿ, ವೇಲಾಪುರದಲ್ಲಿ ಅಪರೋಕ್ಷಜ್ಞಾನಿಗಳಾದ ವೈಕುಂಠದಾಸರಾಗಿದ್ದರು. ಶ್ರೀ ಪುರಂದರದಾಸರು ಶ್ರೀ ಸ್ವಾದಿವಾದಿರಾಜರ ಕಾಲದ ಅನೇಕ ಇತಿಹಾಸಗಳಿವೆ. ಹೀಗೆ ಪೂರ್ವಜನ್ಮದ ಸ್ಮರಣೆಗೆತಂದು ಬಹು ವಿನಯದಿಂದ, ಈ ಬಡಭಕ್ತನನ್ನು ಉದ್ಧಾರ

ಮಾಡುವದೆಂದು ಶ್ರೀ ಗೋಪಾಲದಾಸರ ದ್ವಾರಾ ಕೇಳಿದರು ಆಗ್ಗೆ ಆಗಲಿ, ಕೆಲವುಕಾಲ ಮೇಲೆ ದೇವರು ಅನುಗ್ರಹಿಸುವನೆಂದು ಶ್ರೀವಿಜಯ ದಾಸರು ಆಶೀರ್ವದಿಸಿದರು. ಈ ಪಂಗನಾಮದ ವೈಕುಂಠದಾಸರು ಪ್ರಾರ್ಥಾಂಶರು. ಹಿಂದಿನ ಜನುಮದ ಪುಣ್ಯದಿಂದ, ಸುಖಪ್ರಾರಬ್ಧಿ ಗಳಾಗಿ ಈಗ ಈ ದೇಶದಲ್ಲಿ ಜನಿಸಿ ನವಾಬನ ದಿವಾನರಾಗಿದ್ದರು. ಇವರಲ್ಲಿ ಕಿಂಚಿತ್ತಾದರೂ ಗರ್ವಿಕೆತನ, ಸ್ಪರ್ಧೆ, ಈರ್ಷಾ, ಅಸೂಯ ಗಳಿರಲಿಲ್ಲ. ಸಜ್ಜನರನ್ನು ದ್ವೇಷಿಸುತ್ತಿರಲಿಲ್ಲ. ಮನಃ ಪರಿಪಾಕವಾದ ತಿಮ್ಮಣ್ಣನವರನ್ನು ಇಂದು ಶ್ರೀ ವಿಜಯದಾಸರು ಪಂಗನಾಮದ ತಿಮ್ಮಣ್ಣನವರೆಂದು ಕರೆದುದೆ ಶ್ರೀ ಹರಿ ಸತ್ಯಮಾಡಿ ಅಂದಿನಾರಭ್ಯ ಲೋಕದಲ್ಲಿ ಪಂಗನಾಮದ ತಿಮ್ಮಣ್ಣನವರೆಂದು ಪ್ರಸಿದ್ಧಿಯಾಯಿತು

ಹೀಗೆ ಕೆಲವು ದಿನ ಹೋದವು. ದಿವಾನಗಿರಿಯ ಮಂತ್ರಿಗಳ ಮನಸ್ಸು ಬಹು ಕರಗಿತು. ಆಗಾಗ್ಗೆ ಶ್ರೀ ದಾಸರ ಸಂದರ್ಶನ ತೆಗೆದು ಕೊಳ್ಳುತ್ತ ಇರುವರು. ಸದುಪದೇಶ ಕೇಳುತ್ತಿರುವರು. ಆದರೆ ನನ್ನ ಉದ್ಧಾರ ಕಾಲವೆಂದೋ ಎನ್ನುತ ಮನದಲ್ಲಿ ಆತುರರಾಗಿರುವರು. ಲೌಕಿಕದಲ್ಲಿ ಕೆಲವು ತೊಂದರೆಗೊಳಗಾಗಿದ್ದನು.

ಎಷ್ಟೋ ದಿನಗಳಾದವು. ದಾಸರ ದೃಷ್ಟಿ ನನ್ನ ಮೇಲೆ ಬೀಳ ವೆಂದು ಚಿಂತಿಸುತ್ತಾ ಇದ್ದನು. ದಾಸರು ಇರುವ ಮನೆ ಬೇರೆಯಾಗಿತ್ತು. ಅಲ್ಲಿ ಬಚ್ಚಲಮನೆ ಬೇರೆ ಸ್ನಾನ ಮಾಡಿದ ನೀರು ದಡ್ಡಿಯಲ್ಲಿ ಹೋಗಿ ನಿಲ್ಲಲು ಒಂದು ದೊಡ್ಡ ತಗ್ಗು "ಬಚ್ಚಲಗುಂಡಿ" ಎನ್ನುವರು. ತಿಮ್ಮಣ್ಣ ನವರು ತಾನು ದೊಡ್ಡವನೆಂಬ ಅಹಂಕಾರ ಮರೆದು ದಾಸರು ಸ್ನಾನ ಮಾಡುವ ಸಮಯ ಸಾಧಿಸಿ, ದೊಡ್ಡ ಮಹತ್ಮರು ಮಿಂದೋದಕದಲ್ಲಿ ಮಜ್ಜನ ಸಮಯ ದೊರಕಿತೆಂಬೋ ಆನಂದದಿಂದ, ಸ್ನಾನದ ನೀರಿನಲ್ಲಿ ಮುಳುಗಿ ಸ್ನಾನಗೈದು ಬಚ್ಚಲ ಮೋರೆಯ ಸಮೀಕ್ಕೆ ಬಂದು ಊಂವು ಊಂವು ಹೂಂವು ಶಬ್ದ ಮಾಡುತ್ತ ದಾಸರೇ ಕರುಣ ಮಾಡಿ ಬಡ ಭಕ್ತನನ್ನು ಉದ್ಧರಿಸಿರೆಂಬ ಆರ್ತಸ್ವರವು ಸ್ನಾನಮಾಡುವ ದಾಸರ ಕಿವಿಗೆ ಬಿದ್ದಿತು. ಇಂಗಿತ ತಿಳಿದರು.

ಆದರೆ ಲೋಕ ಜನರಂತೆ ನೋಡರೆಪ್ಪಾ, ಬಚ್ಚಲಗುಂಡಿಯಲ್ಲಿ ಯಾರೋ ಬಿದ್ದಿರುವರೋ ಏನೋ ಮುಸುಗುವ ಸಪ್ಪಳ ಕೇಳುತ್ತದೆಂದು ಹೇಳಲು, ಶಿಷ್ಯರು ಹೋಗಿ ನೋಡುತ್ತಾರೆ, ದಿವಾನ ಪಂಗನಾಮದ ತಿಮ್ಮಣ್ಣನು ಜಲದಲ್ಲಿ ಮುಳುಗಿದ್ದಾನೆ. ಕಣ್ಣು ಮುಚ್ಚಿದ್ದಾನೆ. ವಿಜಯ ದಾಸರ ಪಾದಭಜನೆ ಮಗ್ನನಾಗಿರುವದನ್ನು ನೋಡಿ, ಇಬ್ಬರು ಕೈ ಹಿಡಿದು ಮೇಲಕ್ಕೆಬ್ಬಿಸಿ, ದಾಸರ ಅಪ್ಪಣೆಯಾಗಿದೆ ಬರಬೇಕೆಂದು ಮನೆಯ ಒಳಗೆ ಬರಬೇಕೆಂದು ಕರೆತರಲು ಪುನಃ ಆಗ್ಗೆ ದಾಸರು ತಿಮ್ಮಣ್ಣನ ಮನಃಪರಿಪಕ್ವಕಾಲ ಬಂದೊದಗಿದೆ. ನಾನು ದಿವಾನ ನೆಂಬುವ ಮದವಳಿದಿದೆ. ಇನ್ನು ಯೋಗ್ಯ ಕಾಲವಿದೆಂದು ದೇವರಿಗೆ ಅಭಿಷೇಕಕ್ಕೆ ಸಿದ್ಧವಾದ ತುಂಬಿಟ್ಟ ಕೊಡದಲ್ಲಿದ್ದ ಜಲದಿಂದ ತಾವೇ ತಿಮ್ಮಣ್ಣನಿಗೆ ಸ್ನಾನ ಮಾಡಿಸಿ, ಮೈಯೊರಸಿ, ಉಡಲಿಕ್ಕೆ ಒಣಗಿದ ದೋತರವನ್ನು ಕೊಟ್ಟರು. ವಸ್ತ್ರ ಉಟ್ಟು, ಊರ್ಧ್ವಪುಂಡ್ರ ಮುದ್ರೆ ಗಳಿಂದ ಶೋಭಿತನಾದನು. ಇತ್ತ ದಾಸರ ಅಹಸ್ನೀಕ ಮುಗಿಯಿತು. ದೇವರ ಪೂಜಾ ನೈವೇದ್ಯಗಳಾದವು. ದೇವರಿಗೆ ಮಂಗಳಾರ್ತಿ ಸಹ ವಾಗಿ ಆಯಿತು. ತಿಮ್ಮಣ್ಣನು ಇದನ್ನೆಲ್ಲ ನೋಡಿಪ್ಪರೂ ಇಂದು ಆ ದೃಷ್ಟಿಯೇ ಬೇರೆಯಾಯಿತು. ಜನರಿಗೆಲ್ಲ ಸೋಜಿಗ. "ಬಡವರೆ ಗೋಪಾಲಕರು. **ಅಡವಿಯೊಳು ಇದ್ದರೆ ಧೊರಿಗಳು**" ಎಂಬ ವಚನ ದಂತೆ ಶ್ರೀ ವಿಜಯದಾಸರು ಮಹಾರಾಜೇಶ್ವರನಾದ ಶ್ರೀ ಕೃಷ್ಣನ ಭಕ್ತರು ಬಡವರಾದರೂ ಲೋಕದ ರಾಜರಿಗೆಲ್ಲ ರಾಜರು. ಒಬ್ಬ ಚಕ್ರಾಧಿಪತಿಯ ಪೂರ್ಣಾನಂದವು. ಮುಕ್ತಿಯೋಗ್ಯನಾದ ಒಬ್ಬ ತೃಣ ಜೀವನ ಆನಂದಕ್ಕೆ ಸರಿ ಎನಸನು. ಎಂಬ ವಚನದಂತೆ ತಿಮ್ಮಣ್ಣ ದಿವಾನರೆಂದು ಅಂಜಿ ಮರ್ಯಾದೆ ಮಾಡಿದರೆ? ಇಲ್ಲ ಈತನೊಬ್ಬ ಹರಿಯ ಭಕ್ತ. ಇವನ ಈ ಜನ್ಮದಲ್ಲಿ ಉದ್ಧಾರಕಾಲ ಒದಗಿದೆಂಬ ಹದವನ್ನರಿತು ಶ್ರೀ ವಿಜಯದಾಸರು ಇದು ಸುಸಮಯವಿದೆ, ಮಳೆ ಚನ್ನಾಗಿ ಆದವ್ಯಾಳ್ಯಾ ಹೊಲಕ್ಕೆ ಗೊಬ್ಬರವು ಹಾಕಿ ಬೀಜ ಬಿತ್ತಲು ಹಸಿಯು ಯೋಗ್ಯವಾದಂತೆ ತಿಮ್ಮಣ್ಣನ ಅಂತಃಕರಣವು ಕರಗಿದೆ. ಹರಿಪರನಾಗಿ ಹರಿಭಕ್ತರಲ್ಲಿ ಭಕ್ತಿ ಪುಟ್ಟುವದು ಪರಮ ದುರ್ಲಭವೆಂದು

ಭಾವಿಸಿ, ಶ್ರೀ ಹರಿಯನ್ನು ಮೂರು ನುಡಿಯಿಂದ ಪ್ರಾರ್ಥಿಸಿ ಅಂಕಿತ ಪ್ರದಾನ ಮಾಡಿ ಉಪದೇಶಗೈದರೆಂಬ ಐತಿಹ್ಯ ಮೋಹನದಾಸರ ಪರಂಪರೆ ವೃದ್ಧರೂ ಭಗವದ್ಭಕ್ತರಾದ ವೈ. ವಾಸಿ ವೆಂಕೋಬದಾಸರಿಂದ ೩೫–೪೦ ವರುಷ ಹಿಂಡೆ ಕೇಳಿದ್ದು ಇಂದು ಸ್ಮೃತಿಗೆ ತಂದಿತ್ತ ದಾಸರ ಮಹಿಮೆ ನಿಜ. ಹೀಗೆ ಆಪ್ತ ವಚನಕ್ಕೆ ಆಧಾರ ಬೇಕು. (ಇವರ ಮನದಾಸೆ ಪದ ೩೬ರಲ್ಲಿ ೩೪–೩೫ರಲ್ಲಿ ಹೊರಸೂಸುತ್ತದೆ.) ಆಗ್ಗೆ ಶ್ರೀ ವಿಜಯದಾಸರು ಶ್ರೀ ಹರಿಯನ್ನು ತುತಿಸಿ ಅಂಕಿತವಿತ್ತ ಬಗೆ ಏನಂದರೆ–

"ವೇಣುಗೋಪಾಲ ವಿಠಲರೇಯ ನಿನ್ನ ಪದರೇಣು ನಂಬಿದ ಮಾನವ । ಏನು ಅರಿಯದಲಿಪ್ಪ ನೀನೊಲಿದು ಹರುಷದಲಿ ಜ್ಞಾನ ಭಕುತಿಯು ಕೊಡುವದು ಹರಿಯೆ ||ಪಲ್ಲ||

ಮುಂದೆ ಮೂರು ನುಡಿಗಳಲ್ಲಿ ಶ್ರೀ ಹರಿಯೇ ಈ ತಿಮ್ಮಣ್ಣನು ಪರದೈವವು ಹರಿಯೆಂದು ಚಿಕ್ಕಂದಿನಾರಭ್ಯ ಹಿಂದಿನ ಜನ್ಮದಿಂದ ಪುಣ್ಯ ದಿಂದ ತಿಳದಿದ್ದಾನೆ. ನಿನ್ನನು ನಂಬಿದ್ದಾನೆ. ಅನೇಕ ವಿಧದಿಂದ ಮನ ದಲ್ಲಿ ಸ್ಮರಣೆ ಮಾಡುತ್ತಲಿರುವನು. ಈ ವ್ಯಾಳ್ಯ ಈತನಿಗೆ ನೀನು ಸರ್ವೋತ್ತಮನೆಂಬ ಜ್ಞಾನ ತಾರತಮ್ಯದಿಂದ ಮಾರ್ಗವನ್ನು ತೋರಿ ಇವನ ಜ್ಞಾನ ಭಕ್ತಿಯು ಕೀರ್ತಿ ವಿಸ್ತಾರ ಮಾಡೈಯ್ಯಾ ಎಂದು ಹರಿ ಯನ್ನ ದೈನ್ಯದಿಂದ ಪ್ರಾರ್ಥಿಸುತ್ತಾ ಮುಂದೆ– ಹೇ, ಕರುಣಾಸಾಗರ ನಾದ ಹರಿಯೆ, ನಿನ್ನ ಶರಣು ಪೊಕ್ಕು ಭಕ್ತನನ್ನ ಕರಪಿಡಿದು ಪಾಲಿ ಸಯ್ಯಾ, ಎಂದು ಮತ್ತೂ ಪ್ರಾರ್ಥಿಸುತ್ತ ಇವನು ಲೌಕಿಕನು. ಆತನ ಈ ಲೌಕೀಕ ಕಾರ್ಯಗಳೆಲ್ಲ ನಿನ್ನ ಸೇವೆ ಎನಿಸಿ ವೈದಿಕಗಳಾಗಲಿ. ಗುಣ ಪೂರ್ಣ ಸಾಕಾರನಾದ ಹರಿಯೆ, ನಿರಾಕಾರನೆಂದು ನಿನ್ನಭಸಿಪ ದುರುಳ ಯವನರಿಂದ ಇವನಿಗೆ ಬಂದ ವಿಪತ್ತನ್ನು ಪರಿಹರಿಸು. ಆ ವಿಪತ್ತಗಳಿಂದ ಬಂದ ಕಷ್ಟವನ್ನು ಇವನ ಮನಸ್ಸಿಗೆ ತಾಕದಂತೆ ರಕ್ಷಿಸು. ಕಾಮಧೇನು ಕಲ್ಪವೃಕ್ಷಕ್ಕೆ ಆಶ್ರಯನಾಗಿ ವರಕೊಡುವ ಹರಿಯೆ, ಸಂತತ ನೀನೇಬೇಕು. ನಿನ್ನ ವಿನಹಾ ಅನ್ಯರು ಗತಿಕರಲ್ಲವೆಂದು ನಂಬಿದವನಿಗೆ ಶುಭವಾಕ್ಯದಲಿ ಸಂತೈಸಿ ಕರುಣಿಸು. ಹರಿಯೇ ಇವನೊಬ್ಬನ ಪೆಸರುಗೊಂಡು ಬೆನ್ನೈ

ಸುವದಿಲ್ಲ ತಡವ್ಯಾಕೆ ಸ್ವಾಮಿ, ನಿನ್ನ ಭಕ್ತರಾದ ಸರ್ವ ಸಜ್ಜನರನ್ನು ಊರ್ವಿಯೊಳಗಿಟ್ಟು, ಈ ನಿರ್ವ್ಯಾಜದ ಭಕ್ತರನ್ನು ಕಾಪಾಡು. ಗರ್ವಿಷ್ಟ ಜನಗೋಸುಗ ನಾನು ಪ್ರಾರ್ಥಿಸುವನಲ್ಲ. ಯೋಗ್ಯರಿಗೆ ಸರ್ವಕಾಲ ದಲ್ಲಿ ಕೃಪೆಮಾಡೆಂದು, ಸರ್ವರಾಧಾರಿಯಾಗಿರುವ ಎನ್ನ ಬಿಂಬನಾದ ವಿಜಯ ವಿಠಲನೆ ರಕ್ಷಿಸೈಯ್ಯಾ, ಕಾಪಾಡು. ರುದ್ರಾದಿದೇವತೆಗಳು ತುತಿ ಸಲು ನೀ ಕಾಣಿಸಿಕೊಳದಿರುವ ಹರಿಯೆ ನಾನೊಬ್ಬ, ನಿನ್ನ ತುತಿಸಿ ಸಂತೋಷ ಪಡಿಸುವನೇ? ಈ ಭಕ್ತನನ್ನು ಕಾಪಾಡು ಎಂದು ಪ್ರಾರ್ಥಿಸಿ ಅಂಕಿತಪ್ರದಾನ ಮಾಡಿ ಉಪದೇಶ ಮಾಡಿದರು ಅಂದಿನಿಂದ "ವೇಣು ಗೋಪಾಲದಾಸರೆಂದು ಪ್ರಸಿದ್ಧರಾದರು. ನವಾಬನಿಂದ ಬಂದ ಆಪತ್ತು ಪರಿಹೃತವಾದಿತು. ದಾಸರ ಆಜ್ಞೆಯಂತೆ ಲೌಕಿಕದಲ್ಲಿದ್ದು, ಎಲ್ಲವೂ ಹರಿಸೇವೆಯೆಂದು ತಿಳಿದು ತಿಮ್ಮಣ್ಣನು ವರ್ತಿಸಹತ್ತಿದನು. ದಾಸರ ವಚನವನ್ನು ಶ್ರೀ ಹರಿಯು ಸತ್ಯಮಾಡಿ ಕಾಪಾಡಿದನು. "ಮತ್ತೆ ಹೊರಟು ಆದವಾನಿ ಸ್ಥಳಕೆ ಬಂದರು । ಏನು ಹತ್ತು ಜನರಿಗೆ ಹೇಳಿದ ವಾಕ್ಯ ಸತ್ಯವೆಂದರು ಸುತ್ತು ಮುತ್ತು ನೂರಾರು ದಾಸರು ನೆರೆದರು । **ಆನಿಸತ್ತಿಗಿ ಪಲ್ಲಕ್ಕಿಯುವರ ಶಿಷ್ಯರಾದರು ।"**

ಇನ್ನು ದಾಸರು ಅನೇಕ ಮಹಿಮೆ ತೋರುತ್ತ ಪದ ಸುಳಾದಿ ಗಳನ್ನು ರಚಿಸುತ್ತ ಕೆಲವುದಿನ ಆದವಾನಿಯಲ್ಲಿಯೇ ಇದ್ದರು.

ದಿವಾನ ತಿಮ್ಮಣ್ಣನಯ್ಯನವರೆ, ಶಿಷ್ಯರಾಗಿ ಪ್ರತಿನಿತ್ಯ ದಾಸರ ಭಜನೆ ಸಾಯಂಕಾಲ ಬರಹತ್ತಿದನ್ನು ನೋಡಿ ಗುಂಪುಗುಂಪಾಗಿ ಸಾವಿ ರಾರು ಜನರುಗಳು ಬರಹತ್ತಿದ್ದರು. ಭಜನೆಯಲ್ಲಿ ಶ್ರೀ ವಿಜಯದಾಸರು ತಮ್ಮ ಅಮೃತವಾಣಿಯಿಂದ, ನೂತನನೂತನ ಪದಸುಳಾದಿಗಳನ್ನು ರಚಿಸಿ ಹೇಳುವರಲ್ಲದೇ ಅವುಗಳ ಅರ್ಥ, ಮರ್ಮಧರ್ಮಗಳು ವಿಶದ ವಾಗಿ ಎಲ್ಲ ಜನರಿಗೆ ತಿಳಿಯುವಂತೆ ಬೋಧಿಸುವರು. ಸಾಮಾನ್ಯವಾದ ಜನರಿಗೆ ಸಹ ಬೋಧೆಯಾಗುತ್ತ ನಡೆಯಿತು. ಮತ್ತು ಹೆಚ್ಚು ಹೆಚ್ಚಾಗಿ, ದಾಸರ ಧರ್ಮೋಪದೇಶ ಕೇಳಲು ವಿಮಲೇಯರು ಸಹ ಬರಹತ್ತಿದರು.

ದಾಸರು ಆಗಾಗ್ಗೆ ಭಗವಂತನಿದ್ದಾನೆ. ಆತನೆ ಸರ್ವಸ್ವತಂತ್ರ, ಆತನ ಪ್ರೇರಣೆ ವಿನಾ ಮರದ ಒಂದು ಎಲೆ ಸಹ ಅಲ್ಲಾಡದು ಜೀವ

ರೆಲ್ಲ ದೇವರದಾಸರು. ಶ್ರೀ ಹರಿಯು ಪ್ರತಿಬಿಂಬರು. ದೇವರು ಬ್ರಹ್ಮ ರುದ್ರಾದಿಗಳಲ್ಲಿ ನಿಂತು ಸೃಷ್ಟಿಲಯ ಮಾಡುವನು. ತಾನು ಸ್ವಯಂ ಪಾಲನ ಮಾಡುವನು. ತತ್ವದೇವತೆಗಳಿಗೆ ತನ್ನ ಶಕ್ತಿಕೊಟ್ಟು ಕಾಪಾಡು ವನು. ಅವರಿಂದ ಕಾರ್ಯಮಾಡಿಸುವನು ಪ್ರಕೃತಿಗುಣಾನುಸರಿಸಿ ತಾನು ಅವರಲ್ಲಿಯೇ ನಿಂತು ಕಾರ್ಯನಡೆಸುವನು. ಜಡ ೨೪ ತತ್ವಗಳಿಂದ ಬ್ರಹ್ಮಾಂಡ ಸೃಷ್ಟಿಸುವನು. ನಾನಾ ಬಗೆ ಯೋನಿ ೮೪ ಲಕ್ಷ ಜೀವರು ನಿತ್ಯರು ಅವರಿಗೆ ದೇಹಾದಿಗಳನ್ನು ಕೊಟ್ಟು ಸಾಧನ ಮಾಡಿಸುವನು. ಕರ್ಮವಶಾತ ಜೀವರಿಗೆ ಸಾಧನಗೋಸುಗ ಅನೇಕ ಜನ್ಮಗಳನ್ನು ಕೊಡುವನು. ಜೀವರುಗಳಿಗೆ ಒಂದೇ ಜನ್ಮವಲ್ಲ.

ಅಪೇಯಪಾನ, ಅಗಮ್ಯಾಗಮನ ಸರ್ವಥಾ ಮಾಡಬಾರದು. ಮತ್ತು ಅಹಿಂಸಾ ಧರ್ಮವು ಪರಮುಖ್ಯವಾದದ್ದು. ಒಬ್ಬರನ್ನು ಬಡಿದು ಹೊಡಿದು ಪ್ರಾಣ ತೆಗೆದುಕೊಳ್ಳಬಾರದು. ಹಿಂಸಾಕೃತ್ಯ ಮಾಡಿ ಮಾಂಸಾದಿಗಳನ್ನು ಭಕ್ಷಿಸಬಾರದು. ಇಷ್ಟೇ ಹಿಂಸಾ ಅಲ್ಲ, ಪರರಿಗೆ ಶ್ರಮಕೊಡುವದು ಕೆಟ್ಟಮಾತನಾಡಿ ಅವರನ್ನು ನೊಂದಿಸುವದು ಹೀಯಾಳಿಸುವದು, ಕೆಟ್ಟ ದೃಷ್ಟಿಯಿಂದ ನೋಡಿ ಪರರ ಮನಸ್ಸಿಗೆ ತಾಪಕೊಡುವದು, ಅವರ ವಸ್ತು ಅಪಹರಿಸುವದು. ಊಟಕ್ಕೆ ನೀಡಿ ಕೆಟ್ಟಮಾತುಗಳಾಡುವದು ಸಹ ಇತ್ಯಾದಿಗಳನ್ನು ಬಿಡಬೇಕು. ಪರರಿಗೆ ಉಪದ್ರವಾಗದಿದ್ದ ಸತ್ಯವಚನವನ್ನು ಯಾವಾಗಲೂ ಆಡಬೇಕು. ನೀತಿ ಯಿಂದ ನಡೆಯಬೇಕು. ಕೋಪತಾಪಗಳನ್ನು ದೂರುಮಾಡಬೇಕು ಇತ್ಯಾದಿ.

ಆಗಿನಕಾಲದಲ್ಲಿ ಪರಮತೀಯರಾದ, ಮುಸಲ್ಮಾನ ಶೈವರೆ ಮೊದ ಲಾದ ಧರ್ಮಪ್ರಚಾರ ಹೆಚ್ಚಾಗಿ ಜನರಿಗೆ ಬಹುಕಾಟವಾಗಿತ್ತು ಕ್ರಮೇಣ ಬೋಧಿಸುತ್ತ ಧರ್ಮಪ್ರಚಾರಮಾಡಿ ಈ ಬಗೆಯ ನಾನಾ ಪದಗಳನ್ನೂ ಸುಳಾದಿಗಳನ್ನೂ ರಚನಾ ಮಾಡಿದರು. ಇದೇ ಧರ್ಮಪ್ರಚಾರ ಕೆಲಸವಾದಿತು.

ಆಗ್ಗೆ ಶಿಟ್ಟು ಮಹಾಕೆಟ್ಟದು ಹೊಲೆಯರ ಗುಣವುಳ್ಳದ್ದು ಶಿಟ್ಟು ಕಳೆಯಲು ಬೇಕು ಸ್ತ್ರಿ ಪುರುಷರು ನಡವಳಿಕೆಯಲ್ಲಿರಬೇಕು. ಎಂಬ

ಉಪದೇಶಕ್ಕೆ, ಹೊಲೆಯ ಮತ್ತು ಹೊಲತಿ ಸುಳಾದಿಗಳು ಮಾಡಿದ್ದಾರೆ ಹೊರತಾಗಿ, ಜನ್ಮತಾ ಕರ್ಮತಾ ನಿತ್ಯ ನೀಚರಾದವರ ಹೊಲೆಯರ ಉದ್ಧಾರಗೋಸುಗ ಮಾಡಿಲ್ಲ. ಮತ್ತು–

ಹಬ್ಬಗಳು ನಮ್ಮ ಹಿಂದೂ ದೇಶದಲ್ಲಿ ಬಹಳವಾಗಿವೆ. ಅವುಗಳಲ್ಲಿ ಊಟವುಪಚಾರ ಸಂಭ್ರಮದಲ್ಲಿ ನಾನಾವಿಧವಾಗಿ ಸಾಲವಾದರೂ ಮಾಡಿ ಹಬ್ಬ, ಮದುವೆ ಮಾಡುವರು. ಮತ್ತು ಹೆಂಗಸರ ಕಾಟಕ್ಕಾಗಿ ಋಣಭಾರಮಾಡಿಕೊಂಡು ಒಡವೆ ವಸ್ತುಗಳನ್ನು ಮಾಡಿಸುವದು ಬಹು ಅಧರ್ಮವಾದದು.

ಹಬ್ಬವೆಂದರೆ ಹೇಗೆ? ಮನಃಶಾಂತನಾಗಿ ಸದ್ಗುಣವುಳ್ಳವನಾಗಿ ನೀತಿಮಾರ್ಗದಿಂದ ಹರಿಯ ಸದ್ಗುಣಗಳನ್ನು ಭಜಿಸುವದೇ ಹಬ್ಬವು. ಇದೆ ಹಬ್ಬೂಟವು. ಸ್ತ್ರೀಯರು ಪತಿಭಕ್ತಿ ಪರಾಯಣರಾಗಿ ಸದ್ಗುಣಗಳನ್ನು ತಿಳಿದು ಆಚರಿಸುವದು ಪರಮಾತ್ಮನನ್ನು ಕೊಂಡಾಡುವದು ಒಂದೊಂದು ಸದ್ಗುಣಗಳನ್ನು ಒಡವೆ ವಸ್ತು ಬಂಗಾರ ಮುತ್ತುಗಳಿಗೆ ಸಮಾನವಾದ ಒಡವೆ, ಆಭರಣಗಳು ಇಂಥ ಸದ್ಗುಣಶೀಲರಾಗಿ ಕೆಡದ ಆಭರಣಗಳನ್ನಿಡುವದೇ ಮುಖ್ಯಧರ್ಮ, ಮತ್ತು ಸಾಲವು ಮಹಾ ಕೆಟ್ಟದು ಸಾಧನಕ್ಕೆ ಮಹಾ ವಿರೋಧವಾದ ಧರ್ಮಋಣ ಸರ್ವಥಾ ಮಾಡಬಾರದೆಂದು ಋಣವಿಮೋಚನ ಸುಳಾದಿಯನ್ನೂ ಮತ್ತು ಅನೇಕ ಧರ್ಮಗಳನ್ನು ಬೋಧಿಸಲು ಅನೇಕ ಸುಳಾದಿಗಳನ್ನು ಪದಗಳನ್ನು ರಚಿಸಿರುವ, ಧರ್ಮ ಪ್ರಚಾರಕರ ಮಹಾತ್ಮರ ಕಾರ್ಯವೇ ಮುಖ್ಯವಾಗಿ ಇವೆ ಇರುವವು. ಅನೇಕ ಧರ್ಮಗಳನ್ನು ಬೋಧಿಸುವ ಸಾಧನಭಾಗ ಸುಳಾದಿಗಳು (ಪ್ರಕಟನೆ ೭–೮) ನೋಡಿ ತಿಳಿದು ಸಾಧಕರಿಗೆ ಉತ್ತಮ ಸಾಧನ ಜಾಣರು ಗಾಳಿಬಂದಾಗಲೇ ತೂರಿಕೊಳ್ಳಿರಿ.

ಇದರಂತೆ ತಾರತಮ್ಯ, ಭಗವಂತನ ಸೃಷ್ಟಿ ಕ್ಷೇತ್ರ, ಮಹಿಮಾ, ಶ್ರೀ ಹರಿಯ ಪ್ರಾರ್ಥನಾ ಉಪಾಸನಾ, ದೇವರೆ ಸ್ವತಂತ್ರನೆಂಬ ಪ್ರಮೇಯ ದೇವರ ಸ್ತೋತ್ರ ಈ ಪ್ರಕಾರವಾದ ಎಷ್ಟೋ ಪದ ಸುಳಾದಿ ಉಗಾಭೋಗರಚಿಸುತ್ತ ಧರ್ಮಪ್ರಚಾರಗೈದು ದೇಶದಲ್ಲಿ ಶಾಂತಿನೆಲೆ

ಗೊಳಿಸಿದ ಯುಗ ಪುರುಷರು. ಎಲ್ಲ ಸಜ್ಜನರಿಗೆ ಉಪಯೋಗವಾಗ ಲೆಂದೆ ಪದ ಸುಳಾದಿಗಳನ್ನು ರಚಿಸಿದ್ದಾರೆ. ಇಂಥವು, ಒಬ್ಬರಿಗೋಸುಗ ಸಾಧನವೆಂತಲ್ಲ, ಆ ಕಥೆಗಳು ನಮಗೆ ಗೊತ್ತಿಲ್ಲ. ನಮ್ಮ ಮನೋ ಕಲ್ಪನೆಗಳನ್ನು ಬೆಳಸಿ ತಪ್ಪುಮಾರ್ಗ ಹಿಡಿಯುವದು ಮತ್ತು ಹೆಚ್ಚಿನ ತಪ್ಪು

ಹೀಗೆ ಧರ್ಮಸ್ಥಾಪನಾ ರೂಪವಾದ ಅನೇಕ ವಿಧವಾದ ಕಷ್ಟ ಗಳನ್ನು ದೂರೋಡಿಸಿ, ದೇಶದೇಶದಲ್ಲಿ ಸಾಮಾನ್ಯ ಧರ್ಮವನ್ನು ಬೀರಿ ಶಾಂತಿಗೊಳಿಸಿದ ಮಹಾನುಭಾವರು ನಮ್ಮ ವಿಜಯದಾಸರು. ಬಹು ಕರುಣಾಳುಗಳು ಮಹಾರಾಜಾಧಿರಾಜರು.

ಹೀಗೆ ದಿನೆದಿನೇ ಧರ್ಮಪ್ರಚಾರ ಕಾರ್ಯ ಹೆಚ್ಚಾಗಿ ನಡೆಸುತ್ತ ದೇಶದೇಶದ ಜನರನ್ನು ಸಂದರ್ಶಿಸಿ ಅವರಿಗೆ ಭೇಟಿಕೊಟ್ಟು ಉದ್ಧರಿಸಲು ಅವತರಿಸಿದ ದಾಸರೂ ತಾವಿದ್ದ ಭೂಮಿಯೇ ಧರ್ಮಕ್ಷೇತ್ರಗಳಾಗಿದ್ದರೂ, ಸೂಕ್ಷ್ಮಧರ್ಮವನ್ನು ತಿಳಿದ ದಾಸರು ಭೂಲೋಕದಲ್ಲಿ ವೈಕುಂಠವೆನಿಸುವ ತಿರುಪತಿಕ್ಷೇತ್ರ ಶ್ರೀ ವೆಂಕಟನ ದರ್ಶನಾರ್ಥ ಶಿಷ್ಯವೃಂದ ಸಹಿತ ತಿರು ಪತಿಗೆ ಪ್ರಯಾಣ ಬೆಳಸಿದರು.

## ಶ್ರೀ ವಿಜಯದಾಸರ ಮೊದಲನೆಯ ತಿರುಪತಿ ಯಾತ್ರೆ

ಶಿಷ್ಯವರ್ಗಕ್ಕೆಲ್ಲ ಆನಂದ ಬಂಧು ವರ್ಗದವರೆಲ್ಲ ಆನಂದ-ಸಂಗ ಡಿಷ್ಟ ಸಜ್ಜನ ಭಕ್ತ ಯಾತ್ರಿಕರಿಗೆಲ್ಲ, ಆನಂದ-ಶ್ರೀ ಗೋಪಾಲದಾಸರಿಗೆ ದಾಸರ ಸಂಗಡ ಯಾತ್ರೆ ಚರಿಸುವದು ಮಹಾನಂದ. ಇಂಥ ಸಜ್ಜನರಾದ ಭಕ್ತರೊಡನೆ ಹರಿಗುಣಾನಂದ ಗಾನಮಾಡುತ್ತ ಭಗವದಾಜ್ಞೆಯನ್ನು ನಡೆಸುವದು ಮತ್ತು ಹೆಚ್ಚಿನ ಮಹಾನಂದ-ವಿಜಯದಾಸರಿಗೆ ಅಹೋ ನೋಡಿ ಸಜ್ಜನರನ್ನು ಸನ್ಮಾರ್ಗಕ್ಕೆ ತರಲು ಅವರಲ್ಲಿರುವ ಭೂತದಯೆ ವೆಷ್ಟೆಂದು ಹೇಳಲು ಇಂದೂ ಆನಂದ. ಮುಕ್ತಿಯಲ್ಲಿ ಆನಂದಕೊಡುವ ದಾಸರಲ್ಲಿ ಪ್ರತ್ಯಕ್ಷ ನಲಿದಾಡುವದು ಸಕಲಾನಂದ ಆನದ.೦

ಕ್ರಮೇಣ ಗ್ರಾಮೇಕರಾತ್ರಿ ವಾಸಮಾಡುತ್ತ ತಮ್ಮ ದರ್ಶನದಿಂದ ಸಜ್ಜನರನ್ನು ಉದ್ಧರಿಸುತ್ತ ಅನೇಕ ಮಹಿಮೆಗಳನ್ನು ತೋರಿದ್ದಾರೆ

ಅವು ಸರಿಯಾಗಿ ನಮಗೆ ಗೊತ್ತಿಲ್ಲ ಎಷ್ಟೋ ಜನರ ಕಷ್ಟವನ್ನು ಕಳೆದಿರುವರು. ಬಡವರನ್ನು ಭಾಗ್ಯವಂತರನ್ನಾಗಿಯೂ, ಕುರುಡರಿಗೆ ಕಣ್ಣು ಕೊಡುವದಾಗಿಯೂ, ರೋಗಿಗಳನ್ನು ನಿರೋಗಿಗಳನ್ನಾಗಿ ಮಾಡಿ ಭಕ್ತರನು ಸಂರಕ್ಷಿಸಿರುವರಲ್ಲದೆ, ಭಕ್ತರುಗಳಿಗೆ ಜ್ಞಾನೋಪದೇಶ ಮಾಡುತ್ತ ತಿರುಪತಿಗೆ ಕೆಲವು ದಿನದಮೇಲೆ ಪರಿವಾರ ಸಹಿತವಾಗಿ ದಾಸರು ಮುಟ್ಟಿಕೊಂಡರು. ಕಪಿಲತೀರ್ಥದಲ್ಲಿ ಮಿಂದು ಕಪಿಲೇಶ್ವರನ ದರ್ಶನಮಾಡಿ ಬೆಟ್ಟದಡಿ ಬಂದು ಸಾಷ್ಟಾಂಗಪ್ರಣಾಮಗಳನ್ನು ಮಾಡಿ, ಕುಳಿತು ಹರಿಗುಣ ಗಾನ ಮಾಡುತ್ತ ಬೆಟ್ಟದ ಪಾವಟಿಗೆಗಳನ್ನೇರುತ್ತ ೧೦೦ ೧೦೦ ಪಾವಟಿಗಿಗೆ ಶ್ರಮ ಪರಿಹಾರಗೋಸುಗ ಕುಳಿತು ಮಾರ್ಗ ದಲ್ಲಿ ನರಸಿಂಹದೇವರ ದರ್ಶನ ಮಾಡುತ್ತ, ಬೆಟ್ಟವೇರಿ ಅಪ್ಪ ತಿಪ್ಪನ ಬಂಗಾರ ಕಲಶವಾದ ಗುಡಿಗೋಪುರವನ್ನು ಕಂಡಾಕ್ಷಣವೇ ದಂಡ ಪ್ರಣಾಮವನ್ನು ಮಾಡಿ ಕುಳಿತು. (ವೆಂಕಟಗಿರಿಯಾತ್ರಾ ಕ್ರಮ ಸುಳಾದಿ ರಚಿಸಿದ್ದಾರೆ, ಸುಮಾರು ೩೦ ರ ಕಿಂತಲೂ ಹೆಚ್ಚು ಸುಳಾದಿಗಳಿಗೆ, ಕ್ಷೇತ್ರ ಮಹಿಮಾದಲ್ಲಿ ಸುಳಾದಿ ನೋಡಿರಿ). ವೆಂಕಟೇಶನನ್ನು ಬಹು ಸ್ತೋತ್ರಗೈದು ಮುಂದೆ ಬರುತ್ತ ಬೇಡಿ ಹನುಮಂತನದರ್ಶನ, ವೆಂಕ ಟನಗುಡಿ ಪ್ರದಕ್ಷಣ, ಸ್ವಾಮಿ ಪುಷ್ಕರಣಿಸ್ನಾನ, ಮೊದಲಿಗೆ ವರಾಹ ದೇವರ ದರ್ಶನ, ಗರುಡಗಂಭಕ್ಕೆನಮನ, ಹೀಗೆ ಪ್ರಾಕಾರತ್ರಯ ಪ್ರದ ಕ್ಷಣ–ಅಡಿಗೆ ಮನೆಯ ಅನ್ನ ಪೂರ್ಣಾದರ್ಶನ–ವಿಮಾನ ಶ್ರಿನಿವಾಸನ ಸಂದರ್ಶನಾನಂದ ಗರುಡ, ಜಯವಿಜಯಾದಿಗಳ ದರ್ಶನ–ಬಂಗಾರ ಬಾಗಿಲು ಪ್ರವೇಶ ಸಾಕ್ಷಾತ್ ಚಿನ್ಮಯ ಚಿದಾನಂದ ಸ್ವಯಂವ್ಯಕ್ತ ವೆಂಕಟನ ದರ್ಶನಾನಂದ ಮಾಡಿ ಭಕ್ತವೃಂದಕ್ಕೆಲ್ಲಾ ದಾಸರ ಸಂಗಡ ವೆಂಕಟನ ದರ್ಶಲಾಭವಾದಿತು. ಆಗ್ಗೆ ದಾಸರು ವಿಮಾನ ಶ್ರೀನಿವಾಸ ದೇವರ ಹತ್ತಿರಬಂದು ಕುಳಿತು "ನೋಡಿದೆ ನಾನೋಡಿದೆ ಮೂಡಲ ಗಿರಿಯ ವಾಸನ ನೋಡಿದೆ ಯಾತ್ರಿಯ ಮಾಡಿದೆ ಎಂಬುದಾಗಿ ೧೫ ನುಡಿಗಳಿಂದ ಯಾತ್ರಾಕ್ರಮ ಯಾತ್ರಾಫಲ ಯಾತ್ರೆಯ ಆನಂದ ಕಾಲ ವನ್ನು ಸಹ ಹೇಳಿದ್ದಾರೆ. **"ಹಿಮಋತು ಪ್ರಥಮ ಮಾಸದ ದಶಿಮಿ ಹಿಮಕರವಾರ ದಿನದಲ್ಲಿ। ಕ್ರಮದಿಂದಲಿ ಪೋಗಿ ಬಿಂಬ ಮೂರು**

**ತಿಯು ನೋಡಿದೆ"** ಎಂದು ಪೊಗಳಿದ್ದಾರೆ. ಪದ ೬೦ ಪುಟ ೪೮-೪೯) ನೋಡುವದು. ಯಾತ್ರೆಯುವ ಪ್ರಕಾರದಿಂದ ಕ್ರಮವಾಗಿ ಮಾಡಿದರೆ ಫಲಬರುವದೆಂದು ಸಜ್ಜನ ಉದ್ಧಾರಾರ್ಥವಾಗಿ ತೋರಿದ್ದಾರೆ. ಶ್ರೀ ವೆಂಕಟೇಶನ ತಿರುಪತಿಯಾತ್ರೆ ಅನೇಕಸಾರೆ ಮಾಡಿದ್ದಾರೆ. ಅಗ್ಗೆ ಶ್ರೀ ವೆಂಕಟಪತಿಯು ಕನಸಿನಲ್ಲಿಯೂ, ಮನಸಿನಲ್ಲಿಯೂ, ಬಹಿರಂಗದಲ್ಲಿ ಪ್ರತ್ಯಕ್ಷನಾಗಿ ನಾನಾ ವಿಧಲೀಲೆಗಳನ್ನು ತೋರಿದ್ದಾನೆ. ಅವರು ರಚಿಸಿರುವ ವೆಂಕಟೇಶಮಹಿಮಾ ಪದ ಪದ್ಯಗಳನ್ನು ನಮ್ಮ ಪ್ರಕಟನೆ (೭)-೧೩ ರಲ್ಲಿ ನೋಡಿ ಆನಂದ ಪಡುವದು.

ಹೀಗೆ ಅತಿ ಅಗಾಧವಾದ ವಿಚಿತ್ರ ಮಹಿಮೆ ತೋರುತ್ತ ಕ್ರಮೇಣ ದಕ್ಷಣ ದೇಶದಲ್ಲಿರುವ ಯಲ್ಲ ಯಾತ್ರೆಗಳನ್ನು ಮಾರ್ಗಕ್ರಮವಾಗಿ ಸಂಚರಿಸುತ್ತ ಎಲ್ಲ ತೀರ್ಥಗಳಲ್ಲಿ ಮಿಂದು ಆಯಾ ಕ್ಷೇತ್ರಸ್ಥ ಮೂರ್ತಿಗಳ ಸಂದರುಶನದಿಂದ ಆನಂದಪೊಂದಿ ಆಯಾ ಕೇತ್ರ, ಕ್ಷೇತ್ರ ಮೂರ್ತಿಗಳ ಸ್ತೋತ್ರ ಪದ ಸುಳಾದಿಯ ರೂಪವಾಗಿ ರಚಿಸಿ ಲೋಕೋದ್ಧಾರ ಮಾಡಿದ ಮಹನೀಯರು.

ಹೀಗೆ ರಾಮೇಶ್ವರ ಕನ್ಯಾಕುಮಾರಿಯ ವರೆಗೆ ತೀರ್ಥಾಟನ ಮಾಡುತ್ತ ಆಯಾ ದೇಶದ ಭಕ್ತಜನರಿಗೆ ಸದುಪದೇಶ ಮಾಡಿ ಧರ್ಮ ಮಾರ್ಗದಲ್ಲಿ ತರುತ್ತ ಹೊಸ ಹೊಸ ಕ್ಷೇತ್ರಗಳನ್ನು ಸಂದರ್ಶಿಸಿ **ಸುಮಾರು** ೨ ವರ್ಷಗಳವರೆಗೆ ಯಾತ್ರೆ ಚರಿಸುತ್ತ ಮರಳಿ **ಸ್ವಗ್ರಾಮವಾದ ಚೀಕನಬರವಿಗೆ** ಬಂದು ಶ್ರೀ ಅಶ್ವತ್ಥ ನೃಸಿಂಹದೇವರ ಸಂದರುಶನದಿಂದ ಆನಂದ ಹೊಂದಿದರು.

ನಮ್ಮ ದಾಸಪ್ಪನ ವೈಭೋಗವೆಂಥದು ನೋಡಿರೆಂಬ ಜನರಾನಂದ ಬಂಧುಗಳ ಮುದ, ವೃದ್ಧಮಾತೆಯಾದ ಕೂಸಮ್ಮನಿಗೆ ಸ್ವಗ್ರಾಮ ದಾಸಪ್ಪನ ಜನ್ಮಭೂಮಿ. "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಸ್ವರ್ಗಾನಂದಕಿಂತಲೂ ಹೆಚ್ಚಿನಾನಂದವಾದಿತು. ದಾಸರನ್ನು ಎದಿರುಗೊಂಡು ಕರೆತಂದ ವಿಜ್ರಂಭಣೆ ವರ್ಣಿಸಲಳವಲ್ಲ. ಅಲ್ಲಲ್ಲೆ ತಳಿಲು ತೋರಣ ಕಟ್ಟಿ ತಳಿಚಲ್ಲಿ ರಂಗವಾಲೆಯನಿಕ್ಕಿ ಪ್ರತಿಯೊಂದು

ಮುಂದೆ ತುಂಬಿದ ಕಂಭಗಳನಿಕ್ಕಿ ಆರುತಿಗಳನ್ನೆತ್ತಿ ವಾದ್ಯವೈಭವದೊಡನೆ ದಾಸಪ್ಪನ ಕುಟೀರವಾಗಿದ್ದರೂ '**ಇಂದು ವಿಜಯವಿಠ್ಠಲನ ಗೃಹವಾಗಿ**' ದೇವೇಂದ್ರನ ಸ್ವರ್ಗದಂತೆ ಕಂಗೊಳಿಸುವ ದಾಸರ ಮನೆಯಲ್ಲಿ ತ ದಿಳಿಸಿದರು. ಅಂದು ತುಂಗಾಸ್ನಾನ, ಶ್ರೀ ಅಶ್ವತ್ಥನೃಸಿಂಹ ದೇವರಿಗೆ ಸಮಾರಾಧನೆ. ಎಲ್ಲ ಬ್ರಾಹ್ಮಣ ಸುವಾಸಿಸಿಯರ ಭೋಜನ, ದಕ್ಷಿಣಾದಾನ, ಇತರ ಬಡ ಭಕ್ತರಿಗೆ ಪ್ರಸಾದ ಕೊಟ್ಟು ಉಣಿಸಿ ತಣಿಸಿದರು. ಹರಿದಾಸರಿದ್ದ ಸ್ಥಳವೇ ಕಾಶಿ ಪ್ರಯಾಗ ಕ್ಷೇತ್ರಗಳಕಿಂತಲೂ ಮಿಗಿಲೆನಿಸುವದು. ಹೀಗೆ ಕೆಲವು ದಿನ ಸುಖದಿಂದ ಚಿ ಕನಬರವಿಯಲ್ಲಿ ಹರಿಭಜನೆ ಮಾಡುತ್ತ ಸಂಸಾರದಲ್ಲಿದ್ದರೂ ನಿರ್ಲಿಪ್ತರಾಗಿ ಕಾಲಕಳೆದರು. ಇಷ್ಟರಲ್ಲಿಯೇ ಒಬ್ಬ ಉತ್ತಮನಾದ ಸಾಂಶಜೀವ ಶ್ರೀ ವಿಜಯದಾಸರಲ್ಲಿ ಜನಿಸಿದ್ದನು. ಇವರಿಗೆ ಶೇಷಪರ್ವತ ಒಡೆಯ ವೆಂಕಟನ ದಯದಿಂದ ಪುಟ್ಟಿದುದಕೆ ಇವರಿಗೆ "ಶೇಷಗಿರಿ" ದಾಸರೆಂಬೋ ನಾಮಕರಣ ಮಾಡಿದ್ದರು. ಮುಂದೆ ಈ ಶೇಷಗಿರಿದಾಸ ಬೆಳೆಯಲು ಮುಂಜೆ ಮದುವೆ ಮಾಡಿ ಸಾಕಿಸಲಹಿ ನಿಜಭಕ್ತನೆಂದು ತಿಳಿದು ಉಪದೇಶವಿತ್ತರು. ಇವರೊಬ್ಬರಿ ಪುತ್ರರಿದ್ದರೂ, ಕೆಲವು ಕಾಲಾನಂತರ ಈ ಶೇಷಗಿರಿದಾಸರಿಗೆ ಮೈಯಲ್ಲಿ ಲಘುತಪ್ಪಿ ಕಾಯಿಲೆಯಾಗಿತ್ತು. ಆಗ್ಗೆ ದೇವರನ್ನು ಪ್ರಾರ್ಥಿಸಿ ಒಂದು ಸಳಾದಿ ಮಾಡಿದರು. (ಪ್ರಾರ್ಥಿಸು) ಕೊಟ್ಟದೆ ದೇವರ ಅನುಗ್ರಹದಿಂದ ಗುಣವಾದಿತು. ವರುಷೊಪ್ಪತ್ತಿನಲ್ಲಿ–

ಮತ್ತೊಮ್ಮೆ ಕಾಯಿಲೆ ಆಗಿ ಕಾಲ ಮೃತ್ಯುಬಂದು, ವೈಕುಂಠವಾಸಿಗಳಾದರು. ಆಗ್ಗೆ ತಾಯಿಯಾದ ಶ್ರೀ ಅರಳಮ್ಮನವರಿಗೆ ಬಹು ದುಃಖವಾಯಿತು. ಅವರ ಮನೋಶಾಂತ್ಯರ್ಥವಾಗಿ ೧೨ ಪದಗಳನ್ನು ದಾಸರು ರಚಿಸಿದ್ದಾರೆ. ಹಿಂದೆ ಕೊಟ್ಟದೆ ಮುಖ್ಯವಾಗಿ ಈ ಉತ್ತಮ ಜೀವನು ಈತನಲ್ಲಿ ಹಿಂದಿನ ಜನ್ಮದ ಋಣ ಮಾಡಿದ್ದಕ್ಕಾಗಿ, ಈ ಜನ್ಮದಲ್ಲಿ ಮಗನಾಗಿ ಜನಿಸಿದ್ದನು. ಮತ್ತು ನಾವು ಹಿಂದಿನ ಮತ್ತೊಂದು ಜನ್ಮದಲ್ಲಿ ಅಡವಿಯಲ್ಲಿ ಮೃಗ ಎಳೆ ಮರಿಯನ್ನು ಕೊಂದ ಕಾರಣ ಈ ಪುತ್ರವಿಯೋಗ ದುಃಖ ದೇವರು ನಮಗೆ ತಂದಿತ್ತನು. ಮಗನಾರು ನಾವಾರು ಸಂಬಂಧವಿಲ್ಲ. ಜೀವಜೀವರಿಗೆ ಭೇದ, ಅವರವರ ಕರ್ಮಾನು

ಫಲತಕ್ಕಂತೆ ಶ್ರೀ ಹರಿಯು, ಫಲಕೊಡುವನು ಶೋಕಿಸಬಾರದು ಎಂದು ಅನೇಕ ಬಗೆಯಿಂದ ಸ್ತೋತ್ರಮಾಡಿ ಅರಳಮ್ಮನವರ ಮನಸ್ಸು ಶಾಂತಿ ಮಾಡಿದರು. ಈ ಶೇಷಗಿರಿದಾಸರು ಗೌತಮ ಸಂಗಮದಲ್ಲಿ **ಪಿಥಿ (ಪ್ರಜೋತ್ಪತ್ತಿ) ಸಂವತ್ಸರ ಭಾದ್ರಪದ ಶು|| ಆದಿವಾರದಲ್ಲಿ** ಯಾತ್ರಾ ಮಾಡಿದರೆಂದು ದಾಸರೆ ಒಂದು ಪದದಲ್ಲಿ ಹೇಳಿರುತ್ತಾರೆ. ದಾಸರು ಯಾತ್ರಾ ಮಾಡಲಿಕ್ಕೆ ೪-೫ ವರ್ಷ ಮೊದಲೆ ಯಾತ್ರಾಮಾಡಿದಂತೆ ಗೊತ್ತಾಗುತ್ತದೆ.

ಶೇಷಗಿರಿದಾಸರು ಯಾತ್ರಾ ಮಾಡಿ ನಂತರವೇ ಮೋಹನದಾಸರು ದೊರೆತರು ಅರಳಮ್ಮನವರಿಗೆ ತಂದಿತ್ತು, ಅವರಿಗೆ ಶಾಂತಿ ಮಾಡಿದರೆಂದು ಕೆಲವರ ಅಭಿಪ್ರಾಯ. ಹಿಂದೆ ಹೇಳಿದ ಕಾಲಗುಣವಾಗಿ ಇದು ಕೂಡುವ ದಿಲ್ಲವೆಂದು ತೋಚುತ್ತದೆ ನಿಜವಾದುದ್ದೇನೋ ಹರಿಯೆ ಬಲ್ಲ. ಶೇಷಗಿರಿದಾಸರು ಇರುವಾಗಲೇ ಮೋಹನದಾಸರು ದೊರೆತರೋ ? ಅಥವಾ ನಂತರ ದೊರೆತರೋ ಈ ವಿಷಯ ನಿರಾಧವಾಗಿ ತಿಳಿಯದಾಗಿ ವಿಚಾರಾರ್ಹವಾಗಿದೆ ಶೇಷಗಿರಿದಾಸರ ಯಾತ್ರಾಕಿಂತ ಮೊದಲೇ ಮೋಹನಶಿಶು ದೊರೆಯಿತೆಂದು ತೋಚುತ್ತದೆ. ಅಹೋ ಏನಾಶ್ಚರ್ಯ ? ಪುತ್ರಶೋಕವು, ಮಗನ ಮೇಲೆ ಮಮತೆ ಮನುಜರಂತೆ ತೋರಿದರೂ, ಋಷಿಶ್ರೇಷ್ಠರೂ, ಮಹಾ ಜ್ಞಾನಿಗಳೂ ವೈರಾಗ್ಯಶಾಲಿಗಳಾದ, ಶ್ರೀ ವಿಜಯದಾಸರಿಗೆ ಕಿಂಚಿತ್ತಾದರೂ ಮೋಹ ಪುಟ್ಟದೇ ಹಿಂದಿನ ಜನ್ಮದ ವೃತ್ತಾಂತವೆಲ್ಲವೂ ಪೇಳಿ ತಮ್ಮ ತ್ರಿಕಾಲಜ್ಞತ್ವವನ್ನೂ, ವೈರಾಗ್ಯವನ್ನೂ, ಜೀವರು ಒಬ್ಬರಿಗೊಬ್ಬರು ಸಂಬಂಧವಿಲ್ಲ. ಸಂಸಾರ ಅಸಾರವಾದು ದೆಂದು ಲೋಕಕ್ಕೆಲ್ಲ ಬೋಧಿಸಿರುವರು. ಆ ೧೨ ಪದಗಳಲ್ಲಿಯ ಮರ್ಮ ವನ್ನು ಸಂಸಾರೀಕನು ತಿಳಿದು ವರ್ತಿಸಿದರೆ, ಸಂಸಾರ ಮೋಹಪಾಶ ದಿಂದ ಬಿಡುಗಡೆ ಹೊಂದುತ್ತಾನೆ.

**ಶ್ರೀ ವಿಜಯದಾಸರು, ಪುರಂದರದಾಸರ ಪುಣ್ಯತಿಥಿಗೆ ಹಂಪಿಗೆ ಪ್ರಯಾಣ ಅಲ್ಲಿ ಸತ್ರಯಾಗ, "ಮೋಹನದಾಸರಾಗುವ" ಶಿಶುವಿನ ಲಾಭ.**

ಶ್ರೀ ವಿಜಯದಾಸರು ತಮ್ಮ ಗುರುಗಳಾದ ಶ್ರೀ ಪುರಂದರದಾಸರ ಆರಾಧನಾಕ್ಕೆ, ಹಂಪಿಗೆ ಶಿಷ್ಯವೃಂದಸಹಿತ ಹೊರಟರು. (ಯಾವ ಕಾಲ ಯಾವವರ್ಷವೆಂದು ತಿಳಿಯದು) ಅಲ್ಲಿ ಆರಾಧನಾ ಪ್ರಾರಂಭವಾಗದ ಮುಂಚೆಯೆ ಜ್ಞಾನಸತ್ರ. ಶ್ರೀ ವಿಜಯದಾಸರ ಆಗಮನವಾಗುವ ವಾರ್ತೆ ಕೇಳಿ ಅನೇಕ ಜನ ಪಂಡಿತರು ದಾಸರು ಮತ್ತು ಸಾವಿರಾರು ಜನ ಭಕ್ತವೃಂದ ಸೇರಿತ್ತು. ದಾಸರು ಯೋಗ್ಯರಿಗೆಲ್ಲ ಅನುಕೂಲಕೊಟ್ಟು, ತಕ್ಕ ಕಾಲದಲ್ಲಿ ಶಾಸ್ತ್ರಜಿಜ್ಞಾಸಾ, ಪ್ರವಚನಾ, ಪ್ರಮೇಯವಿಚಾರ ಉಪದೇಶ, ಇತ್ಯಾದಿಗಳಲ್ಲದೆ ಭಗವನ್ನಾಮ ಸಂಕೀರ್ತನ, ಭಜನೆ ಮುಂತಾದವು ಏರ್ಪಟ್ಟಿದ್ದವು ನಂತರ ಬ್ರಾಹ್ಮಣಭೋಜನ ಪಜ್ತಿ ಸೇವೆ ಭಜನ ಸಂಪ್ರದಾಯದಂತೆ ಸಾಗಿದ್ದವು. ರಾತ್ರಿ ಭಜನ ಒಂದು ದಿನ ಇದರಂತೆ ಸಾಗಿರಲು ಶಾಸ್ತ್ರೋಕ್ತ ವಾಕ್ಯಾರ್ಥ ವಿಚಾರ ನಡದೆ, ನಾನು ಪಂಡಿತ ನೀನು ಪಂಡಿತನೆಂಬೊ ಅಹಂಭಾವ, ಇವರಲ್ಲಿ ನಿರ್ಣಯಮಾಡುವರು ದಾಸರಲ್ಲೆ ಅವರಿಗೇನು ಶಾಸ್ತ್ರಾರ್ಥ ಗೊತ್ತೆಂದು ಮನದಲ್ಲಿ ಅಹಂಕಾರ ತಾಳಿದ ಪಂಡಿತರ ಇಂಗಿತವನ್ನು ದಾಸರು ತಿಳಿದು ಇದು ಒಳ್ಳೇಸಮಯವೆಂದು ಭಾವಿಸಿ ಆ ಪಂಡಿತರಗಳೆದುರಿಗೆ ನೀರು ತರುವವನ್ನು ಕೈ ಹಿಡಿದುತಂದು ಕುಳ್ಳಿರಿಸಿ ನಿಮ್ಮ ಶಾಸ್ತ್ರಾರ್ಥನಿರ್ಣ್ಯಯ ವಿಚಾರವನ್ನು ಈ ನೀರಿನವ ಮಾಡುತ್ತಾನೆ ಎಂದು ಹೇಳಲು, ಪಂಡಿತ ರಲ್ಲೆರೂ ಅಪಹಾಸ್ಯಮಾಡಿದರು.

ದಾಸರು ಆ ನೀರಿನವನ ತಲೆಯಮೇಲೆ ಕೈ ಇಟ್ಟು ಅವನ ಬೆನ್ನು ಚಪ್ಪರಿಸಿ ಕೈಹಿಡಿದು ಅವರ ಸಂಶಯವನ್ನು ನಿವಾರಣೆ ಮಾಡೆಂದು ಹೇಳಲು, ಆ ದಡ್ಡನಾದ ಅಕ್ಷರ ಬಾರದಿದ್ದ ನೀರಿನವನು ದಾಸರ ಅನುಗ್ರಹದಿಂದ, ಆ ಸುಧಾವಾಕ್ಯಗಳಿಗೆ ಪೂರ್ವಾಪರ ವಾಕ್ಯಗಳನ್ನು ಚನ್ನಾಗಿ ಹೇಳಿ ಅದರ ಅರ್ಥವನ್ನು ಚನ್ನಾಗಿ ವಿಮರ್ಶಿಸಿ, ಸಂಶಯವನ್ನು ನಿವಾರಣಮಾಡಿದನು. ಮತ್ತು ಅನೇಕ ಕೋಟಿ ಕ್ರಮಗಳನ್ನು ಹೇಳಿ ಇದಕ್ಕೆ ಎಲ್ಲ ಪಂಡಿತರೂ ಉತ್ತರ ಹೇಳಿರೆಂದು ಕೆಲವು ಪ್ರಶ್ನೆಮಾಡಲು, ಪಂಡಿತರಿಗೆ ಯೇನು ತೋರದೆ ಉತ್ತರ ಹೇಳಲಾರದೆ, ದಾಸರು ಮಹಾ ಶಾಸ್ತ್ರಾಪರೋಕ್ಷಿಗಳು ಜ್ಞಾನಿಗಳು ತಮ್ಮ ಇಂಥ ಮಹಾ ಮಹಿಮೆ

ಯಿಂದಲೇ ನೀರು ತರುವ ದಡ್ಡನಕಡಿಯಿಂದ ಶಾಸ್ತ್ರಾರ್ಥವನ್ನು ಹೇಳಿಸಿದರೆಂದು ತಿಳಿದು ಸರ್ವರು ಅಪರಾಧ ಕ್ಷಮಿಸಿರೆಂದು ದಾಸರನ್ನು ಪ್ರಾರ್ಥಿಸಿದರು. ಹರಿಭಕ್ತರ ಮಹಿಮೆ ತಿಳಿಯಲು ಶಕ್ಯವಿಲ್ಲ. ಹಿರಿಯರಿಂದ ಕೇಳಿದ ನಿಜವಾದ ಸಂಗತಿ.

ಸತ್ರಯಾಗ ಮುಗಿಯುವದು ಉತ್ತರಾರಾಧನೆ ಕೊನೆಯದಿನ ಸಹಸ್ರಾರು ಜನ ಗದ್ದಲ.

## ಮೋಹನ ಶಿಶುಲಾಭ

ಆ ಕಾಲದಲ್ಲಿ ಹಂಪಿಗೆ ಹತ್ತಿರಿರುವ ಆನೆಗುಂದಿಯಲ್ಲಿ ಭೀಮಣ್ಣ ನಾಯಕರೆಂಬುವರು ಇದ್ದರು. ಚಿನಿವಾರರು ಸಾವಕಾರರಾಗಿದ್ದರು. ಅವರಿಗೆ ಇಬ್ಬರು ತಮ್ಮಂದಿರಿದ್ದರು. ಕೂಡಿದ್ದ ಮನೆತನ, ಹೆಂಡತಿ ೩ ತಿಂಗಳ ಗರ್ಭಿಣಿ ಕಾಲವಶಾತ ಭೀಮಣ್ಣನಾಯಕರಿಗೆ ಜಾಡ್ಯವಾಗಿ ಆ ಜಾಡ್ಯದಲ್ಲಿಯೇ ಅವಸಾನ ಹೊಂದಿದರು.

ಈ ಬಡ ಹೆಂಡತಿಯು ಗರ್ಭಚಿಸ್ಥತಿಳಿದು ಮನೆಯಲ್ಲಿ ಇತರ ಹೆಂಗಸರು ದೂಷಿಸಿ ಮುಂದೆ ಗಂಡುಗೂಸು ಹುಟ್ಟಿದರೆ ಅವನಿಗೆ ಪಾಲು ಕೊಡಬೇಕಾಗುವದೆಂದು, ದುರ್ಬುದ್ಧಿಯಿಂದ ಏನೇನೋ ಕೆಟ್ಟ ವಿಚಾರಗಳನ್ನು ಕಲ್ಪಿಸಿ ಆಕೆಯನ್ನು ಮನೆಯಿಂದ ಹೊರಗೆ ಹಾಕಿದರು. ಆಕಿಗೆ ಅನ್ನ ವಸ್ತ್ರಗಳನ್ನು ಸಹ ಕೊಡಲಿಲ್ಲ. ಬಡತಾಯಿಯು ಮನೆಗೆ ಹೋಗಿ ಅಲ್ಲಿ ಪ್ರಸವವಾದಳು. ಕೂಸಿಗೆ ಎಣ್ಣೆಬಟ್ಟೆಗಳಿಲ್ಲ, ಕೆಲವರು ಕನಿಕರದಿಂದ ಕೊಟ್ಟರು. ಅವರನ್ನು ಸಹ ಬೆದರಿಸುವರು.

ದುರ್ದೈವದಿಂದ ಆ ಕೂಸಿಗೆ, ಏನೋಕಾರಣದಿಂದ ಮೈಯಲ್ಲಾ ಕಜ್ಜಿ ವ್ರಣಗಳಾಗಿದ್ದವು. ಅದರಿಂದ ಮತ್ತೂ ಹೆಚ್ಚಿಗೆ ಮನೆಯ ಜನರೂ, ಇತರರೂ ಇವಳು ಅಮಾರ್ಗದಿಂದ ಈ ಶಿಶುವಿನ ಹಡದಿರುವಳೆಂದು ಅನ್ನಲಾರಂಭಿಸಿದರು." ಅಯ್ಯೋ ದೈವವೆ ಇನ್ನು ಈ ಜನುಮ ಸಾಕು ದೇವರು, ನನ್ನನ್ನು ಯಾಕೆ ತೆಗೆದುಕೊಂಡು ಹೋಗವಲ್ಲ ನಾನೇ ನದಿ ಪಾಲಾದೆನೆಂದರೆ ಈ ಕೂಸು ಮೂಲಾಗಿದೆ. ಹೊಟ್ಟೆಗೆಇಲ್ಲ ಬಟ್ಟೆಯಂತೂ ಮೊದಲಿಲ್ಲ ತಾಪ ತಾಳಲಾರದೆ ನದಿಯಲ್ಲಾದರೂ ಧುಮುಕುವೆನೆಂದು ಹಂಪಿಗೆ ಬಂದಳು.

ಆಗ್ಗೆ ಈ ಸಂಭ್ರಮ, ಶ್ರೀ ಪುರಂದರದಾಸರ ಆರಾಧನಿ ಜ್ಞಾನ ಯಜ್ಞ, ನಡೆದು ಬಹುಜನರಿಗೆ ಭೋಜನಸಾಗಿತ್ತು. ಆ ಅನಾಥೆಯು ರೋಗಿಷ್ಟ ಹಾಳು ಮಗುವಿನನ್ನು ‍‍‍‍‍‍ಕರೆದುಕೊಂಡು ದಿನಾಲು ಊಟಕ್ಕೆ ಬಂದು ದೂರ ಊಟಕ್ಕೆ ಕೂಡುವಳು. ಮಗುವು ಸುಮಾರು ೧॥ ೨ ವರ್ಷದೊಳಗೆ ಇತ್ತು. ಮೇಲೆ ಕಾಯಿಲೆ, ಏನೋ ಸ್ವಲ್ಪ ಉಣಿಸಿ ಆ ಕಾಯಿಲೆ ಮಗುವಿನನ್ನು ನೋಡಿ ಅದರ ಮೈ ದುರ್ಗಂಧದಿಂದ ಜನರು ತಳ್ಳುವರೆಂದು ದೂರ ಕುಳಿತು ತನ್ನಗೂ ಆ ಮಗು ಬೇಸರಿಕೆ ಯಾಗಿತ್ತು ಕಾಲು ಇನ್ನು ಬಂದಿದ್ದಿಲ್ಲ. ಇಂಥ ಕೂಸಿನನ್ನು ದೂರ ಒಂದು ಹರಕು ಶೀರೆಯಲ್ಲಿ ಮುಚ್ಚಿ ತನ್ನ ಹಿಂದಿರಿಸಿಕೊಂಡು ಭೋಜನ ಮಾಡುತಿದ್ದಳು.

ಪಂಜ್ತಿ ಸಾಗಿದೆ. ಪಂಜ್ತಿಸೇವಾದಲ್ಲಿ ದಾಸರು ಮುಂದಾಗಿ ಭಜನಾ ನಡಿಸಿರುವರು. ಪಂಜ್ತಿಸೇವಾಮಾಡುತ್ತ ಈ ಅನಾಥೆಯ ಯಲೆಯ ಸಮೀಪಕ್ಕೆ ಬಂದರು. ಹಿಂದೆ ಎಷ್ಟೋ ದಾಸರು ಭಜನಾ ನಡಿಸಿರುವರು. ಈ ಅನಾಥೆಯು ದಾಸರನ್ನು ನೋಡಿದ ಕೂಡಲೇ ಮೋರೆಗೆ ಶರಗು ಹಾಕಿ ತಲೆ ತಗ್ಗಿಸಿದಳು. ಆಗ್ಗೆ ದಾಸರು ಏನಮ್ಮಾ ಊಟ ಸಾವಕಾಶವಾಗಲಿ, ಏನುಬೇಕೆಂದು ಕೇಳಲು ಅನಾಥೆಯು ನಾಚಿ ಸುಮ್ಮನಿದ್ದಳು. ದಾಸರು ಯಾಕಮ್ಮಾ ಊಟ ಮಾಡಲೊಲ್ಲಿ? ಸುಮ್ಮ ನೇಕೆ ಕುಳಿತೆ ಹೇಳು ಎನ್ನಲು ಆ ಅನಾಥೆಯು ಏನು ಇಲ್ಲ ಸ್ವಾಮಿ ಎಂದಳು. ಆಗ್ಗೆ ದಾಸರು ಹಾಗಾದರೆ ಸುಮ್ಮಗೇಕೆ ನಿನ್ನ ಮನೋ ಬಯಕೆ ಏನು ? ಎಂದು ಮೂರನೇ ಸಲ ಕೇಳಲು ಅತ್ತ ಮುಚ್ಚಿಟ್ಟಿದ್ದ ಶಿಶುವಿನ ಕಡೆಗೆ ನೋಡುವದರಲ್ಲಿ; ದಾಸರು ಮತ್ತೆ ಅದೇನಮ್ಮಾ ಎಂದು ( ತಾವು ಜ್ಞಾನದೃಷ್ಟಿಯಿಂದ ತಿಳದಿದ್ದರೂ ) ಅರಿಯದವರಂತೆ ಕೇಳಿದರು. ಆಗ್ಗೆ ಆ ಅನಾಥೆಯ ದುಃಖವು ಹೆಚ್ಚಿತು. ಅರ್ಧ ಮಾತಿನಿಂದಲೇ ಹಾಳಾಗಲಿ ರೋಗಿಷ್ಠ ಮಗು ಎನ್ನುತ್ತಲೇ ದಾಸರು, ದೂರದರ್ಶಿತ್ವ ತಿಳಿದವರು. ಬಹು ಕನಿಕರದಿಂದ, ಅಮ್ಮಾ ಆ ಮಗು ಬೇಸರವಾಗಿದ್ದರೆ ನಮ್ಮಗೆ ಕೊಡು ಎಂದು ಕೇಳಿದರು. ಆ ಬಡಪ್ರಾಣಿಯಾದ ಹೆಂಗಸಿಗೆ ಒಂದೂ ತಿಳಿಯದು. ರೋಗಿಷ್ಟ ದುರ್ಗಂಧ ಶಿಶುವನ್ನು ತೆಗೆದುಕೊಂಡು

ಏನು ಮಾಡುವಿರಿ ಸ್ವಾಮಿ ಎಂದು ಬಿನ್ನೈಸಿದಳು. ಆಗ್ಗೆ ದಾಸರು, ನಮ್ಮ ಭವರೋಗ ವೈದ್ಯನು ಬಂದ ರೋಗವೆಲ್ಲ ಪರಿಹರಿಸಿ ಸಾಕಿ ಸಲಹುವನು ಕೊಡಮ್ಮಾ ಕೊಡೆಂದು ಕೇಳಲು ಆ ಅನಾಥೆಯು ಎದ್ದು, ಏನೇ ಆಗಲಿ ದೊಡ್ಡವರ ಕೈಗೆ ಕೊಡೋಣವೆಂದು ಧೈರ್ಯದಿಂದ ಹಾಗೆ ಆಗಲಿ ದಾಸರೆ, ತೆಗೆದುಕೊಳ್ಳಿರಿ ಎಂದು ಅಂಬೆ ಸಹಿತವಾಗಿ ಕೂಸಿನನ್ನು ದಾಸರಿಗೆ ಒಪ್ಪಿಸಿದಳು.

ಆಗ್ಗೆ ಶ್ರೀ ವಿಜಯದಾಸರು ನಾರುವ ದುರ್ಗಂಧ, ಬೇನೆಕೊಳಕ ಮಗುವನ್ನು ತುಂಗಾ ನದಿಗೆ ತಂದು ಮೇಲಿನ ವಸ್ತ್ರವನ್ನು ತೆಗೆದು ಬಿಸಾಟಿ, ಆ ಮಗುವಿನ ದೇಹವನ್ನು ಚನ್ನಾಗಿ ತೊಳೆದು, ತಮ್ಮ ಬಿಡಾರಕ್ಕೆ ಕರತಂದು ಆ ಕೂಸಿಗೆ ದ್ವಾದಶನಾಮ ಮುದ್ರೆ ಗಂಧಾಕ್ಷತೆ ಹಚ್ಚಿ ಮೈಮೇಲೆ ಕೈಯಾಡಿಸಿ—( ಪದ ೬೩, ಪುಟ ೫೦ ) "ಇವನೆ ಪಾಲಿಸಿದರೆ ನಿನಗೆ ಪುಣ್ಯ"ವೆಂದು ಮೂರು ನುಡಿಯಿಂದ ದೇವರನ್ನು ಪ್ರಾರ್ಥನೆ ಮಾಡಿದರು. ನಟ್ಟ ಮುಳ್ಳು ಕಿತ್ತಿದರೆ ಗಾಯತೋರದಂತೆ ಮಾಡೆಂದು ಶ್ರೀ ಹರಿಯನ್ನು ಪ್ರಾರ್ಥಿಸಿ ಪುನಃ ಅಮೃತಹಸ್ತದಿಂದ ಮಗುವಿನ ಮೈಯಲ್ಲಾ ಕೈಯಿಂದ ನ್ಯಾವರಿಸಲು ಎಲ್ಲ ವೃಣಗಳು ತಕ್ಷಣವೇ ಮಾಯ್ದವು. ದೇವರಿಗೆ ಕ್ಷೀರಾಭಿಷೇಕ ಮಾಡಿದ ಹಾಲನ್ನು ಸ್ವಲ್ಪ ಗುಟಕುರಿಸುವಂತೆ ಕುಡಿಸಿದರು.

ಆ ಶಿಸುವನ್ನು ತಮ್ಮ ತೋಳಿನಲ್ಲಿಟ್ಟು ಎತ್ತಿಕೊಂಡು ಇನ್ನೊಂದು ಬ್ರಾಹ್ಮಣರ ಪಂಜಿಸೇವಾಕ್ಕೆ ಬರಲು ಜ್ಞಾನಿಗಳಾದ ಬ್ರಾಹ್ಮಣರೆಲ್ಲರೂ ಏನು ಮುದ್ದು ಮೋಹನ ಮಗುವೆಂದು ನೋಡಹತ್ತಿದರು. ಆಗ್ಗೆ ಶ್ರೀ ವಿಜಯದಾಸರು ಈ ಬಾಲಕನಿಗೆ ಮೋಹನನೆಂದು ಕರೆದರು. ಅಂದಿನಿಂದ ದಾಸರು ತಮ್ಮ ಹೊಟ್ಟೆಯಲ್ಲಿ ಹುಟ್ಟಿದವನಂತೆ ರಕ್ಷಿಸುತ್ತಾ ಬಂದರು. ಅನಾಥೆಯಾದ ತಾಯಿಯು ಸಹ ದಾಸರ ಸೇವಾವೃತ್ತಿಯಲ್ಲಿದ್ದು ನಿಜಗತಿ ಗತಿಯನ್ನು ಹೊಂದಿದಳು. ಕೆಲವು ಕಾಲಾನಂತರ, ಈ ಮೋಹನನಿಗೆ ದಾಸರೆ ಮುಂಜಿ ಮದುವೆ ಮಾಡಿದರು. ಕಾಲ ವಿಶೇಷದಲ್ಲಿ ಈ ಮೋಹನನಿಗೆ ನವವೃಂದಾವನದಲ್ಲಿ ಯೋಗ್ಯ ಉಪ

ದೇಶವನ್ನು ಮಾಡಿ "ಮೋಹನ ವಿಠಲನೆಂಬೋ ಅಂಕಿತ"ವನ್ನು ಕೊಟ್ಟು ಜ್ಞಾನಿ ಶ್ರೇಷ್ಠರನ್ನು ಮಾಡಿದರು. ಇವರೇ ಶ್ರೀ ವಿಜಯದಾಸರಿಗೆ ಸಾಕ (ದತ್ತ) ಮಕ್ಕಳಾದರು.

ಅಂಕಿತ ಪ್ರದಾನ ಪದ (೬೪) ಸಾಹಿ ಮೋಹನ ವಿಠಲ ಪರನು ಕರುಣಾಜಲಧಿ "ಎಂದು ದೇವರನ್ನು ಪ್ರಾರ್ಥಿಸಿರುವರಲ್ಲದೆ ಪದ (೬೫) ರಲ್ಲಿ ಚಿರಜೀವಿಯಾಗೆಲವೊ ಚಿನ್ನ ನೀನು" ಎಂದು ಆಶೀರ್ವದಿಸಿ ನಿನ್ನ ಮಕ್ಕಳು ಮೊಮ್ಮಕ್ಕಳು ಸೊಸೆಯಂದಿರು ಸಹವಾಗಿ ಬಾಳಿ ಬದುಕು. ಹರಿದಾಸ ಮಾರ್ಗದಲ್ಲಿರು ಆಶೀರ್ವದಿಸಿದಂತೆ ಈಗಲು ಅವರ ಸಂತತಿ ಯಿವೆ. ಅವರ ವಂಶಿಜರಾದ ವೈ. ವಾಸಿ ವೆಂಕೋಬದಾಸಾರ್ಯರಿಂದ ಹೆಚ್ಚಿನ ಚರಿತ್ರೆಗಳು ಗೊತ್ತಾದವಕ್ಕೆ, ತಕ್ಕ ಕೆಲ ಆಧಾರವು ಇವೆ. ಹೀಗೆ ಮೋಹನದಾಸರೊಬ್ಬರು ಶಿಷ್ಯರಾದರು.

ದಾಸರ ಶಿಷ್ಯವೃಂದ ಗಣೇಶಾಂಶರಾದ ಗೋಪಾಲದಾಸರು ಚಂದ್ರಾಂಶರಾದ ಮೋಹನದಾಸರು. ಪಾರ್ಥಾಂಶರಾದ ವೇಣು ಗೋಪಾಲದಾಸರು ಮೂವರೆ ಮುಖ್ಯ ಶಿಷ್ಯರಾದರು

**ಭಕ್ತಿಯಲಿ ಭಾಗಣ್ಣ ಯುಕ್ತಿಯಲಿ ಮೋಹನ್ನ ಶಕ್ತಿಯಲಿ ತಿಮ್ಮಣ್ಣನೆಂಬೋ** ಇಷ್ಟೇ ದಾಸರ ಉಕ್ತಿಯು ಹಿರಿಯರಿಂದ ಕೇಳಿದೆ. ಈ ಉಕ್ತಿ ಎಲ್ಲಿದೆ ಯಾವ ಪದ ಸುಳಾದಿ ಎಂಬುದು ತಿಳಿಯದು.

ಹೀಗೆ ಮೂರು ಜನ ಶಿಷ್ಯರು ಗೊತ್ತಿದ್ದವರು. ಇವರಲ್ಲದೇ ಶ್ರೀ ವಿಜಯದಾಸರ ತಮ್ಮಂದಿರಾದ ಆನಂದದಾಸರಿಗೆ "ಹಯವದನ ವಿಠ್ಠಲ" ನೆಂಬೋ ಅಂಕಿತವನ್ನು ಕೊಟ್ಟು, ಜ್ಞಾನಿಗಳನ್ನಾಗಿ ಮಾಡಿದ್ದರೆಂದು ಅವರ ಅನುಜರ ಪದಗಳಿಂದಲೇ ಗೊತ್ತಾಗುತ್ತದೆ. ಹೀಗೆ ಇವರು ನಾಲ್ಕನೆಯವರು.

ಶ್ರೀ ವಿಜಯದಾಸರ ಮಕ್ಕಳು ಶೇಷಗಿರಿದಾಸರಿಗೆ ಉಪದೇಶ ಕೊಟ್ಟಂತೆ ಸ್ವಂತ ದಾಸರ ನುಡಿಗಳೇವೆ ಇವೆ. ಇವರು ಐದನೆ ಶಿಷ್ಯರು ಶ್ರೀ ವಿಜಯದಾಸರಿಗೆ ಸಾವಿರಾರು ಜನ ಶಿಷ್ಯರೆಂದು ಕೆಲವರ ಹೇಳಿಕೆ. ಆದರೆ ಜ್ಞಾನಿಗಳಾದ, ವಿಜಯರಾಯರ ಶಿಷ್ಯ ಪ್ರಶಿಷ್ಯರೆಲ್ಲರೂ ಕಲೆಸಿ

ದರೂ ಸಹ ಇಷ್ಟು ಜನ ಆಗುವದಿಲ್ಲ. ಶ್ರೀ ಗೋಪಾಲದಾಸರು ಪದ ೨೦–ನುಡಿ ೧೫ ರಲ್ಲಿ " **ಪ್ರತ್ಯಕ್ಷವಾಗಿ ಹತ್ತಿಪ್ಪತು ಜನರಿಗೆ। ತತ್ವೋಪದೇಶ ಮಾಡ ॥ ವಿಜಯರಾಯ ॥ ಥ್ವಸ್ತಮಲದಿ ಹರಿಯ ತಿಳಿಸಿ ಸದ್ಗತಿಗಭಯವಿತ್ತೆ ॥ ೧೫ ॥** ಹೀಗೆ ೧೦+೨೦ ಒಟ್ಟಿಗೆ ೩೦ ಜನರಿಗೆ ತತ್ವೋಪದೇಶ ಮಾಡಿ ಅಂಕಿತವಿತ್ತಿರುವರೆಂಬ ಹಿರಿಯರ ವಚನಕ್ಕೆ ಮೇಲಿನ ಪದವೇ ಆಧಾರ. ೫ ಜನರ ಹೊರತಾಗಿ ಯಾರೆ ಯಾರೆಂಬುದು ಗೊತ್ತಿಲ್ಲ. ಹೊನ್ನಾಳಿದಾಸರು ವೆಂಕಟವಿಠಲರು ಶ್ರೀ ವಿಜಯರಾಯರ ಶಿಷ್ಯರೆಂದು ಹೇಳುತ್ತಾರೆ. ಮುಂದೆ ಪದ ೭೧ ನುಡಿ ೨ ರಲ್ಲಿ " **ಆರು ಮೂರರಡೊಂದು ಜನರು ಇವರಿಂದ। ಉದ್ಧಾರ ಗತಿಯನು ಚಿಂತಿಸಿ ॥ ಮೂರು ಜನ್ಮಗಳಲ್ಲಿ ಬಿಡದೆ ಮೂಲವು ಕೆಡದೆ। ಸೇರಿ ಮತ್ತಿವರ ಒಳಿಯಾ। ಶ್ರೀ ರಮಣ ನಿನ್ನ ವಿಚಾರವನು ಮಾಡುತಾ। ಸಾರಿ ಸಾರಿ ವರವರವ ಪಡೆದು। ಕಾರಣರು ನಮಗಿವರು ಕರ್ಮ ಮೂಲವ ಕೆಡಿಸಿ। ನಾರಾಯಣನೆ ನಿನ್ನ ಪರನೆಂದು ತೋರಿದ ॥ ೨ ॥** ಹೀಗೆ ೬×೩=೧೮+೨+೧=೨೧ ಒಟ್ಟಿಗೆ ಇಪ್ಪತ್ತೊಂದು ಜನರು ಶ್ರೀ ವಿಜಯದಾಸರಿಂದ ಉದ್ಧಾರವನ್ನು ಚಿಂತಿಸಿದರು ಅಂದರೆ ದಾಸರನ್ನು ಪ್ರಾರ್ಥಿಸಿ ಅವರ ಅನುಗ್ರಹದಿಂದ ಉಧೃತರಾದರು ಮತ್ತು ಈ ಜನರು ಹಿಂದೆ ೩ ಜನ್ಮಗಳಲ್ಲಿ ಇವರನ್ನು ಸೇವಿಸಿ ಪುನಃ ಜನಿಸಿ ಪುನಃ ದಾಸರ ಬಳಿಯಲ್ಲಿ ಸೇರಿದರು. ಶ್ರೀ ಹರಿಯೆ ನಿನ್ನ ಗುಣಗಣಗಳ ತತ್ವವಿಚಾರ ವನ್ನು ದಾಸರಲ್ಲೇ ಮಾಡಿ ಶ್ರೀ ವಿಜಯದಾಸರಿಂದ ವರವನ್ನು ಪಡೆದು, ಶ್ರೀ ವಿಜಯದಾಸರೇ ನಮಗೆ ಕಾರಣರು. ಮುಖ್ಯ ಸ್ವರೂಪೋದ್ಧಾರಕ ಗುರುಗಳೆಂದೂ, ಮತ್ತು ಇವರಿಂದಲೇ ಎಮ್ಮ ಸಂಚಿತಾಗಾಮಿ ಕರ್ಮ ನಾಶಮಾಡಿ, ಶ್ರೀ ಮನ್ನಾರಾಯಣನೆ ಪರನೆಂದು ತೋರಿದ ಶ್ರಿ ವಿಜಯ ದಾಸರೆಂದು ಗೋಪಾಲದಾಸರು ಸ್ತೋತ್ರ ಮಾಡಿದ್ದಾರೆ.

ಈ ೨೧ ಜನರು ಮೇಲೆ ಹೇಳಿದ ೩೦ ಜನ ಶಿಷ್ಯರಿಂದ ಬೇರೆ ಶಿಷ್ಯ ರಿದ್ದರೆಂದು ಗೊತ್ತಾಗುತ್ತದೆ. ಹೀಗೆ ದಾಸರ ಶಿಷ್ಯ ಸಂಪತ್ತಿನ ಸೊಬಗು.

ಕಲ್ಲೂರು ಸುಬ್ಬಣದಾಸರಿಗೆ ಶ್ರೀ ವಿಜಯರಾಯರು ಅಂಕಿತ ಕೊಟ್ಟಿಲ್ಲ. ಅವರ ಮೇಲೆ ಪರಮಾನುಗ್ರಹಿಸಿ " ವೇಣುಗೋಪಾಲ

ವಿಠಲರಾದ ತಮ್ಮ ಶಿಷ್ಯ ಪಂಗನಾಮದ ತಿಮ್ಮಣ್ಣಯ್ಯನವರಿಂದ ಅಂಕಿತ ಕೊಡಿಸಿರುತ್ತಾರೆ. ಶ್ರೀ ವೇಣುಗೋಪಾಲದಾಸರು ವ್ಯಾಸವಿಠಲರಿಗೆ ಅಂಕಿತ ಪ್ರದಾನ ಪದ ಮುಂದೆ ಕೊಟ್ಟಿದೆ. ಈ ಕಲ್ಲೂರ ಸುಬ್ಬಣ ದಾಸರು ಹಿಂದಿನ ಜನುಮದಲ್ಲಿ ವೇಣು ಗೋಪಾಲದಾಸರು ವೈಕುಂಠ ದಾಸರಾಗಿದ್ದಾಗೆ ವೇಲಾಪುರದಲ್ಲಿ ವೈಕುಂಠದಾಸರ ಶಿಷ್ಯರಾಗಿ "ನಂಜುಂಡ" ಎಂಬೋ ಹೆಸರಿನಿಂದ ಅವತರಿಸಿದ್ದರಂತೆ ಈ ಕಾಲದಲ್ಲಿ ಕಲ್ಲೂರಲ್ಲಿ ಕರಣಿಕರ ಮನೆಯಲ್ಲಿ ಸುಬ್ಬಣ್ಣನಾಗಿ ಜನಿಸಿದರು. ವಿದ್ಯಾ ಬುದ್ಧಿವಂತರು ಶ್ರೀ ವಿಜಯದಾಸರು ಈ ಸುಬ್ಬಣ್ಣದಾಸನನ್ನು ನೋಡಿದ ಕೂಡಲೇ "ಏನೋ ನಂಜುಂಡಾ" ನೆಟ್ಟಗಿದ್ದಿಯೋ ಕ್ಷೇಮವೇನೆಂದು ಕೇಳಿದ ಕೂಡಲೇ ವೇಣು ಗೋಪಾಲದಾಸರಂತೆ ಶ್ರೀ ವಿಜಯದಾಸರ ಅನುಗ್ರಹದಿಂದ ಪೂರ್ವಜನ್ಮದ ಸ್ಮರಣೆಯಾಗಿ, ಉದ್ಧರಿಸಬೇಕೆಂದು ದಾಸರ ಪಾದಕ್ಕೆರಗಲು ದಾಸರು ಹಿಂದಿನ ಜನುಮದ ನೀತ-ಗುರು ಗಳಾದ ವೇಣು ಗೋಪಾಲವಿಠಲರಿಂದ ಅಂಕಿತ ಕೊಡಿಸಿದ್ದು, ಹಿರಿಯರ ಸತ್ಯವಚನಕ್ಕೆ ಕೆಲವು ಆಧಾರಗಳೂ ಸಿಕ್ಕುತ್ತವೆ. ಸಂಶೋಧನಾತ್ಮಕ ದೃಷ್ಟಿಯಿಂದ ನೋಡುವದು.

ಕೆಲವು ದಾಸರು ತಮ್ಮ ಶಿಷ್ಯರಿಗೆ ಅಂಕಿತ ಪ್ರದಾನಮಾಡಿದ ಪದಗಳು ದೊರತವೆ. ವಾಚಕರರಿಗೆ ನಿಜತತ್ವ ತಿಳಿಯಲು ಕೊನೆಗೆ ಕೊಡಲಾಗಿದೆ. ಹೀಗೆ ದಾಸರ ಶಿಷ್ಯಪರಂಪರೆ ಬೆಳದುದು.

## ದಾಸರ ತೀರ್ಥಯಾತ್ರೆ ವಿಚಾರ

"ಭಾಗವತ ಧರ್ಮವೊಹಿಸಿ ತ್ರಿರಾವರ್ತಿ। ವಿಜಯರಾಯ। ಭಾಗೀರಥಿಯ ಚನ್ನಾಗಿ ಸೇವಿಸಿದೆ ನೀ ವಿಜಯರಾಯ ॥ ೩ ॥ ಕಂಚಿ ಕಾಳಹಸ್ತಿ ಶ್ರೀ ರಂಗಸೇತೂ ಯಾತ್ರಿ ವಿಜಯರಾಯ। ಪಂಚವಾದವು ಸಂಚರಿಸಿ ಸೇವಿಸಿದಯ್ಯಾ। ವಿಜಯರಾಯರ ॥ ೪ ॥ ಮರಿಯಾದೆ ಇಲ್ಲದೆ ವರಗಿರಿ ಯಾತ್ರೆಯ ವಿಜಯರಾಯ। ಪರಿಪರೀಕ್ಷೇತ್ರವ ಪೋಗಿ ಪೂಜಿಸಿ ದೆಯ್ಯಾ ವಿಜಯರಾಯ ॥ ೫ ॥ ಮಹಿಯೆಲ್ಲ ಚರಿಸಿ ಸರ್ವಕ್ಷೇತ್ರಮೂರುತಿ ತುತಿಸಿದ್ಯೋವಿ ॥ ಒಹಿಸಿ ದಾಸತ್ವ ವೈಷ್ಣವಸಿದ್ಧಾಂತ ಒರದ್ಯೊ" ॥

|| ಏ || ೬ || **ಹೀಗೆ ಗೋಪಾಲವಿಠಲರ ವಚನ** ( ಪದ ೨೦ ಪುಟ ೧೭ ನೋಡಿರಿ ).

ಶ್ರೀ ವಿಜಯದಾಸರು ಹೀಗೆ ಭಾಗವತ ಧರ್ಮವ್ಯೂಹಿಸಿ, ಮೂರು ಸಾರೆ ಕಾಶಿಯಾತ್ರೆ ಮಾಡಿದರು **ಮೊದಲನೇ** ಸಾರೆ ಹದಿನಾರು ವರುಷ ವಯಸ್ಸಿನಲ್ಲಿ ಬಾವಾಜಿಗಳ ಸಂಗಡ ಕಾಶೀಯಾತ್ರೆ ಮಾಡಿದ್ದು. **ಎರಡನೇ ಸಲ** ೩೪ ನೇ ವರುಷದಲ್ಲಿ ಕಾಶಿ ಗಯಾಕ್ಕೆ ಹೋಗಿ ಗಯಾದಲ್ಲಿ ಪಿಂಡಪ್ರದಾನಮಾಡಿ ಪುನಃ ಕಾಶಿಗೆ ಬಂದು ಮಲಗಿರಲು, ಸ್ವಪ್ನದಲ್ಲಿ ಗುರು ಉಪದೇಶ ಪಡೆದದ್ದು. **ಮೂರನೇಸಾರೆ** ಹಲವು ಶಿಷ್ಯ ರೊಂದೊಡಗೂಡಿ, ಕಾಶಿಯಾತ್ರೆ ವಿಭವದಿಂದ ಮಾಡಿದ್ದು.

ಇನ್ನು ದಕ್ಷಣದೇಶದ ಯಾತ್ರೆ ಕಂಚಿ ಕಾಳಹಸ್ತಿ ಶ್ರೀರಂಗ ಸೇತು ರಾಮೇಶ್ವರ ಮೊದಲಾದ ತೀರ್ಥಯಾತ್ರೆಗಳನ್ನು ಐದುಸಾರೆ ಮಾಡಿ ತೀರ್ಥಕ್ಷೇತ್ರಸ್ಥ ಹರಿಯ ಸೇವಿಸಿದ್ಯೋ ಎಂದು ಹೇಳಿದ್ದಾರೆ. ಇದರಲ್ಲಿ ಪಂಢರಿ ಉಡುಪಿ ಸಹಿತ ಬಂದಿರುವವು.

ಶ್ರೀ ವೆಂಕಟಗಿರಿ (ತಿರುಪತಿ) ಯಾತ್ರೆ ಮರಿಯಾದಿ ಇಲ್ಲದೆ ಅಂದರೆ ಅನೇಕ ಸಾರೆ ಬಹು ವಿಭವದಿಂದ ಮಾಡಿರುವರು. ಹೀಗೆ ನಾನಾ ಕ್ಷೇತ್ರಕೆ ಪೋಗಿ ಶ್ರೀ ಹರಿಯನ್ನು ಪೂಜಿಸುತ್ತ ಶ್ರುತಿ ಪುರಾಣ ವಚನ ಗಳಂತೆ ಶ್ರೀ ಹರಿಯ ಮಹಿಮೆಯನ್ನು ಕಣ್ಣಾರೆಕಂಡು ಕ್ಷೇತ್ರ ಸುಳಾದಿ ಗಳನ್ನು ರಚಿಸಿರುವರು. ಈ ಪ್ರಕಾರವಾಗಿ ಮಹಿಯೆಲ್ಲ ಚರಿಸಿ, ಸರ್ವ ತೀರ್ಥಕ್ಷೇತ್ರ ಮೂರುತಿಯ ಸ್ತುತಿಸಿರುವರಲ್ಲದೇ, ಗುರುಪದಿಷ್ಟರಾಗಿ, ದಾಸತ್ವ ಒಹಿಸಿ ವೈಷ್ಣವಸಿಂದ್ಧಾಂತವನ್ನು ಬೋಧಿಸುತ್ತಾ ಅನೇಕ ಸಜ್ಜನರನ್ನು ಉದ್ಧಾರ ಮಾಡಿರುವರು. ಯಾವ ಯಾವ ವರುಷ ಯಾವ ಕಾಲದಲ್ಲಿ ಯಾವ ತೀರ್ಥಕ್ಷೇತ್ರ ಯಾತ್ರೆಚರಿಸಿದ ಕಾಲ ಸಂಗತಿ ಗೊತ್ತಾ ಗದು " ಈ ತೆರದಿ ಇಭವರದ ನಾತುಮದೊಳಗೆ ತಂದು ಭೂತಳದ ಬಹುವಿಧದ ತೀರ್ಥಕ್ಷೇತ್ರಗಳಲ್ಲಿ। ಪ್ರೀತಿಯಿಂದಲಿ ಪರಮ ಪುರುಷನ್ನ ಧೇನಿಸುತ। ಖ್ಯಾತಿ ಮಹಿಯೊಳಗೆ ಮೆರೆದು॥ ವಾತಜಾತನ ಮತದ ವೊಳಗಿಪ್ಪ ವೈಷ್ಣವರ। ತಾತನೆಂದೆನಿಸಿ ಸುಖವ್ರಾತದೊಳಗಿಡುವಲ್ಲಿ।

ಚಾತುರ್ಯದಿಂದ ಬಲುದಾತನೆಂದೆನಿಸುತಲಿ । ಭವ । ತೀತರನ ಮಾಡಿ ಪೊರವ ಜನರು ॥ ೫ ॥ **ಎಂದು ವೇಣು ಗೋಪಾಲದಾಸರ** ವಚನ ( ಪುಟ ೨೭ ).

ಹೀಗೆ ಬಹುಕ್ಷೇತ್ರ ತೀರ್ಥಗಳನ್ನು ಸಂಚರಿಸುತ್ತ ಶ್ರೀ ಹರಿಯ ಧೇನಿಸಿ ತುತಿಸಿ, ಮಧ್ವಮತದಲ್ಲಿರುವ ಸಕಲ ವೈಷ್ಣವೋತ್ತಮರಿಗೆ ( ತಾತ ) ಹರಿಯ ಒಡೆಯ ಬ್ರಹ್ಮಕುಲಾಭಿಗಳಾದ ಕಾರಣ ಜ್ಞಾನ ಕೊಡುವರಲ್ಲಿ ಶ್ರೇಷ್ಠನೆಂದೆನಿಸಿ ಜ್ಞಾನೋಪದೇಶವನ್ನು ಮಾಡಿ ಸಜ್ಜನ ರನ್ನು ಮುಕ್ತಿ ಎಂಬುವಂಥ ಸುಖ ಸಮೂಹದಲ್ಲಿ ಇಡುವದಕ್ಕೆ ಇವರ ಚಾತುರ್ಯದಾತೃತ್ವಕ್ಕೆ ಸರಿಯಾರಿಲ್ಲವೆಂದೆನಿಸಿ, ಭವಸಮುದ್ರದಿಂದ ದಾಟಿಸಿ ಪೊರೆವರು. ಇವರಿಗೆ ಸರಿಯಾರು ?

ಮತ್ತು ದಾಸರ ತಮ್ಮಂದಿರಾದ **" ಹಯವದನ ವಿಠಲರು "** **" ಲೋಕೋಪಕಾರಕ್ಕೆ ಹದಿನೆಂಟುವತ್ಸರ ನೇಕ ತೀರ್ಥ ಯಾತ್ರೆ ತಿರುಗಿ ।** ವೈರಾಗ್ಯದಲಿ । ಶ್ರೀಕಾಂತ ಹರಿಯ ಮನದೊಳಗೆ ಧೇನಿಸಿ ಕೊಳುತ ॥ ಪ್ರಾಕೃತರ ಸಂಗದೊರದು॥ ಎಂದು ಶ್ರೀ ವಿಜಯದಾಸರು ೧೮ ವರುಷ ಪರಿಯಂತರ ಅನೇಕ ತೀರ್ಥಯಾತ್ರೆ ಚರಿಸಿ ಶ್ರೀ ಕಾಂತ ನಾದ ಹರಿಯನ್ನು ತುತಿಸಿ ಧೇನಿಸಿ ಪ್ರಾಕೃತ ಮನುಜರ ಸಂಗತೊರೆದು ನಿಸ್ಸಂಗರಾಗಿ ಸಂಸಾರದಲ್ಲಿದ್ದರೆಂದು ಹೇಳಿದ್ದಾರೆ. ಹೀಗೆ ದಾಸರಾಯರ ತೀರ್ಥಯಾತ್ರಾ ಕ್ರಮ ಹಿರಿಯ ಜ್ಞಾನಿಗಳ ವಚನದಂತೆ ಅವರು ಪ್ರೇರಿಸಿ ದಷ್ಟು, ಬಿನ್ನೈಸಿದೆ. ಮುಂದೆ ತೀರ್ಥಯಾತ್ರೆ ಕಾಲದಲ್ಲಿ ದಾಸರಾಯರಿ ಗೊಲಿದು– ಶ್ರೀ ಹರಿ ಅನೇಕ ಲೀಲೆಗಳನ್ನು ತೋರಿದ್ದಾನೆ. ದಾಸ ರಾಡಿದ ಅವರ ಎಂಜಲವನ್ನುಂಡು ಅವರಾಡಿದ್ದೆ ಆಡಿ ನಮ್ಮ ಮನಸ್ಸು ದೇಹ ಶುದ್ಧಿಗೊಳಿಸುವದು ಆದ್ಯಕರ್ತವ್ಯ.

## ದಾಸರೊಡನೆ ಶ್ರೀ ಹರಿಯಾಡಿದ ಲೀಲೆ

ಶ್ರೀ ವಿಜಯದಾಸರ ಮನವರಿತು ಶ್ರೀ ಹರಿ ಪ್ರಸನ್ನನಾಗಿ ದಾಸ ರಿಗೆ ಅನೇಕ ರೂಪದಿಂದ, ತೋರುತ್ತ ಕನಸಿನಲ್ಲಿ, ಮನಸಿನಲ್ಲಿ ಬಹಿ ರಂಗದಲ್ಲಿ ಪ್ರತ್ಯಕ್ಷವಾಡಿದ ಲೀಲೆ ಮಹಿಮೆಗಳು ಅನಂತವಾಗಿವೆ.

"ಗಮನಾಸನ ಸಂಕಥಾದಿಲೀಲಾಃ। ಸ್ಮೃತಿಮಾತ್ರೇಣ ಭವಾಪವರ್ಗ ದಾತ್ರೀಃ" ॥ ಶ್ರೀ ಮದಾಚಾರ್ಯರ ಸ್ಮರಣೆಮಾತ್ರದಿಂದಲೇ ಸಂಸಾರ ದುಃಖವು ದೂರವಾಗಿ ಉತ್ತುಮವಾದ ಜ್ಞಾನಾನಂದದಾಯಕ ಮೋಕ್ಷ ವನ್ನು ಉತ್ತಮ ತೀರ್ಥಯಾತ್ರಾ ಗಮನದಿಂದ ಜನರನ್ನು ಉದ್ಧರಿಸಿದ್ದು. ಆಸನ= ಕುಳಿತು ಶಿಷ್ಯರಿಗೆ ಬೋಧಿಸುವದು, ಶ್ರೀ ಹರಿಧ್ಯಾನಮಾಡುವದು ಅನೇಕ ಉತ್ತಮರಾದ ವಾಯು ಚರಿತ್ರೆಗಳು ಶ್ರೀ ಭಾರತಿ ರುದ್ರಾದಿ ವರ್ಣಿಸಲು ಶಕ್ಯವಲ್ಲವಾದರೂ ಅವರವರ ಯೋಗ್ಯತಾನುಗುಣವಾಗಿ ಫಲಪ್ರದವು ಎಂಬ ಶ್ರೀ ಸುಮಧ್ವವಿಜಯ ವಾಕ್ಯದಂತೆ ತಿಳಿಸಿದ್ದರಲ್ಲಿ ಕಿಂಚಿತು ಬಿನ್ನೈಸುತ್ತದೆ. ಉತ್ತುಮರ ಚರಿತ್ರಾನುವಾದವು ನಮ ಗಳಿಗೆ ತಾರಕವು.

"ದಿವಿಜರಾವೇಶದಿಂದ ವನಿಯೊಳುದಿಸಿದಿ। ವಿಜಯರಾಯ। ದಿವಿಜರಿಂದಲಿ ಪ್ರತಿ ದಿವಸ ಬಿಡದೆ ಇದ್ದೆ ವಿಜಯರಾಯ ॥ ೨ ॥ **ಎಂದು ಗೋಪಾಲ ವಿಠಲರ ವಚನ** (ಪುಟ ೧೭) ಮತ್ತು

"**ಶ್ರೀಕಾಂತ** ಸಕಲ ಜಗ ವ್ಯಾಪಕನು ಸರ್ವೇಶ ಲೋಕದೊಳು ಇವರಲ್ಲಿ ಬೇಕಾದ ಚರಿತೆಯು ಅನೇಕ ಬಗೆಯಿಂದಿವರ **ಮುಂಭಾಗ ತೊಲಗದಲೆ ತಾ ಕುಣಿವ ತೋರಿಕೊಳುತ** ॥ ಕಾಕು ಜನರಿಗೆ ಕಲುಷ ವಾಕು ಉಪಜೀವರಿಗೆ। ಏಕ ಮನದಿಂದಿರುವದೇ ಈ। ಕಲಿಯುಗದಲಿ ಸಾಕಾರ ಗುಣ ಪೂರ್ಣ ಶ್ರೀನಿವಾಸನು ಬಿಡದೆ। ಸಾಕುವನು ಸನ್ಮಾರ್ಗ ದಲಿ। ಜನರು ॥ ೭ ॥ **ಎಂದು ವೇಣು ಗೋಪಾಲರ ವಚನ** (ಪುಟ ೨೮) ಈ ಉಭಯರ ವಚನಗಳೇ ನಮಗೆ ಸಾಕಷ್ಟು ಆಧಾರವಾಗಿವೆ. ದಾಸರ ಮಹಿಮೆ ದಾಸರೇ ಬಲ್ಲರು ಹೊರ್ತಾಗಿ ನಮ್ಮಂಥ ಕಾಕು ಮನುಜರಿಂದ ತಿಳಿಯಲು ಸಾಧ್ಯವಿಲ್ಲ.

ಶ್ರೀ ವಿಜಯದಾಸರ ಯಾವ ಅಂಶ ಆವೇಶದಿಂದ ಜನಿಸಿದ ರೆಂಬುದು ವಾಚಕರು ಮರೆತಿರಲಿಕ್ಕಿಲ್ಲ. ಗೋಪಾಲ ವಿಠಲರು ಪದೆಪದೆ ನೆನಪಿಗೆ ತಂದು ಕೊಡುವರು. ಇವರು ದೇವತೆಗಳ ಕಕ್ಷೆಯಲ್ಲಿರುವ ಋಷಿಶ್ರೇಷ್ಠರು ಭೃಗುಋಷಿಗಳಲ್ಲದೇ, ಇವರು ದಿವಿಜರಾವೇಶ, ಶ್ರೀ

ನಾರದರು ನಾರದಲ್ಲಿ ವಾಯುದೇವರ ಆವೇಶವಿರುವದರಿಂದ–ವಾಯು ಆವೇಶ ಸಹಿತ ಜನಿತರಾಗಿರುವರೆಂಬದು ಮತ್ತು ವಾಯು ಇದ್ದಲ್ಲೇ ಶ್ರೀ ಹರಿಯು ಸಂತತ ಬಿಡದೆ ಇರುವದು ಲೀಲೆಗಳನ್ನು ತೋರುವದು ಏನಾಶ್ಚರ್ಯ.

## ವಿಜಯದಾಸರಲ್ಲಿ ಶ್ರೀಶ ಕೃಪೆ ಮಾಡಿದದು

೧. ಸ್ವತಃ ದಾಸರೆ (ಪದ ೫೭ ಪುಟ ೪೫) ಸ್ತೋತ್ರಗೈದಿರುವರು ಹೇ ಶ್ರೀ ಹರಿಯೆ, ನಿನ್ನ ಒಲಿಮೆಯಾಗಲು ಸಮಸ್ತ ಜನರು ಬಂದು ಮನ್ನಿಸುವರು. ಹೇ ಮಹಾರಾಯ, ಇದು ಎನ್ನ ಪುಣ್ಯದಿಂದ ಆಗುವದಲ್ಲ ನೀನು ಕೊಟ್ಟದ್ದೆ ಸರ್ವಸಂಪತ್ತು. ಮೊದಲಿಗೆ ಮಾಸಿದ ಹರಕ ಅರಿಬೆ ಕಾಣದವನಾಗಿದ್ದೆ. ಈಗ ನೀನು ಒಲಿಯಲು ಉಣ್ಣೆಶಹಲು ಶಕಲಾತಿ ನಾನಾ ಪರಿಯಿಂದ ನೋಡಲು ಆಶ್ಚರ್ಯ ತೋರುತಲಿದೆ. ಹಿಂದೆ ಸಂಜೆಯವರೆಗೆ ಉಪವಾಸವಿದ್ದು, ಸಣ್ಣ ಸವಟುತುಂಬ ಅಂಬಲಿ (ಗಂಜಿ) ಕಾಣದೇ ಇದ್ದೆ. ಹೇ ಸ್ವಾಮಿ, ಈಗ ನೀನು ನಾನಾವ್ಯಂಜನ ಪದಾರ್ಥ ಗಳು ಅನೇಕ ಸ್ವಾದೋಪೇತರಶಿರಸಾಯನ ಸವಿಪದಾರ್ಥಗಳು ಉಣಿ ಸುವಿ. ಹಿಂದೆ ಒಬ್ಬ ಹೆಂಗಸಿಗೆ ಹೊಟ್ಟೆಗೆ ಹಾಕಿ ಸಲಹುವದಕ್ಕೆ ಬಹು ಶ್ರಮವಾಗಿತ್ತು. ಈಗ ನಿನ್ನ ಕೃಪೆಯಾಗಲು ಇಂದು ಸಂಭ್ರಮದಿಂದ ಸರ್ವರನ್ನು ಕೂಡಿಕೊಂಡು ಹಬ್ಬೂಟವನ್ನು ಉಣಿಸುತ್ತಿರುವ ನಿನ್ನ ದಯವೆಷ್ಟೋ ಮಹಾಸ್ವಾಮಿ? ಹಿಂದೆ ಮನೆ ಮನೆ ತಿರಿಕೆ ಬೇಡಿದರೆ ಒಂದು ಕಾಸು ಹುಟ್ಟುತಿದ್ದಿಲ್ಲ ಈಗ ಕುಳಿತಲ್ಲೆ ಹಣ ಹೊನ್ನು ತಾನೆ ಬಂದು ಪ್ರಾಪುತವಾಗುವದು. ಹೇ ಜೀಯಾ, ನಾನು ನೀಚೋಚ್ಚ ನೋಡದೆ ಸರ್ವರ ಬಳಿವಿಡಿದು ಅವರ ಕಾಲು ಕಟ್ಟಿಕೊಂಡು ನಾಚದೇ ಕಾಶಿಗಾಗಿ ಕೈ ಚಾಚುತಿದ್ದೆ. ಈಗ ದ್ರವ್ಯಾದಿಗಳ ಪ್ರಾಪುತವು ನೋಡಿದರೆ ಆಶ್ಚರ್ಯವೆನಿಸುತ್ತದೆ. ವಾಚಾಮಗೋಚರನಾದ ಹರಿಯೆ. ಇದು ನಿನ್ನ ದಯ. ಮಧ್ಯಾಹ್ನಕಾಲಕ್ಕೆ ಒಬ್ಬ ಅತಿಥಿ ಬಂದರೆ ಒಂದು ತುತ್ತು ಅನ್ನ ಕೊಡಲು ಗತಿ ಇದಿಲ್ಲ. ಈಗ ಈ ಧರೆಯಲ್ಲಿಯ ಸತ್ಪಾತ್ರರಾದವರಿಗೆ ಆದರಾತಿಥ್ಯಮಾಡಿ ಉಣಿಸುವ ಒಳ್ಳೇಪದ್ಧತಿ ನೀನು ಕರುಣಿಸಿ ನಡಿಸುವ

ದಲ್ಲವೇನೋ ? ನೀನು ಧರ್ಮಾತ್ಮನು ನಿನ್ನ ದಯಾಪಾಂಗದಿಂದಲೇ ನೀನು ವೈದಿಕ ಪದವಿಯಾದ ಮೋಕ್ಷವನ್ನು ಕೊಡುವನಿಗೆ ಆಹಿಕಸುಖ ವನ್ನು ಕೊಡುವದು ಮಹಾ ಆಶ್ಚರ್ಯವೇ ?

೨. ಹೀಗೆ ಅನೇಕ ಸುಖ ಸಂಭ್ರಮಗಳನ್ನು ಅನುಭವಿಸುತ್ತ ಚೀಕನಬರಿವಿಯಲ್ಲಿದ್ದಾಗ್ಗೆ, ಕೆಲವುಕಾಲ ಮೌನದಿಂದ ತಪಶ್ಚರ್ಯಾ ಮಾಡುತಿದ್ದರು. ಆಹಿಕಸಂಪತ್ತು ಸುಖ ದಾಸರಿಗೆ ಬೇಕಾಗಿದ್ದಿಲ್ಲ. ತಪಸ್ಸು ಮಾಡುವ ಕಾಲದಲ್ಲಿ ಶ್ರೀ ವಿಜಯದಾಸರು ನಿತ್ಯ ಪ್ರಾತಃಕಾಲಕ್ಕೆ ಸ್ನಾನಾನಂತರ ಪೊರಟು ಮಧ್ಯಾನ್ಹ ಕಾಲ ಪೂರ್ತಿಆಗಿ ಅಪರಾಣ್ಣವರೆಗೆ ಮನೆಗೆ ಬರುತಿದ್ದರು. ಆಗ್ಗೆ ವಿಶೇಷ ಲೌಕಿಕ ಹೊರಗಿನ ಗದ್ದಲವನ್ನು ಹಚ್ಚಿಕೊಂಡಿರಲಿಲ್ಲ. ದಾಸರು ತಪಸ್ಸಿಗೆ ಹೋಗಿದ್ದಾರೆ. ಮನೆಯಲ್ಲಿ ಹೆಣ್ಣುಮಕ್ಕಳು ಏನೋ ಕೆಲಸನಿಮಿತ್ಯ ಬಂಧುಗಳಲ್ಲಿ ಪೋಗಿದ್ದಾರೆ. ಮನಿಯಲ್ಲಿ ದಾಸರ ವೃದ್ಧತಾಯಿ ಕೂಸಮ್ಮ ಶ್ರೀ ಹರಿ ಧ್ಯಾನಮಾಡುತ್ತ ಮಗ ಬರುವನೆಂದು ಮಾರ್ಗನಿರೀಕ್ಷಣೆಯಲ್ಲಿ ಕುಳಿತಿದ್ದಾರೆ. ಒಳ್ಳೇ ಮಧ್ಯಾನ್ಹಸಮಯ ಹಳ್ಳಿ ಒಬ್ಬರ ಸುಳುವು ಇಲ್ಲ.

ಆಗ್ಗೆ ದೂರಿನಿಂದ ಪೈಜಣ, ರುಳಿ ಗೆಜ್ಜೆಸಪ್ಪಳವಾದಿತು. ಒಬ್ಬ ಸುಂದರ ಸ್ತ್ರೀ ಮುತ್ತೈದೆ ಒಳ್ಳೇ ಜರತಾರಿ ಪೀತಾಂಬರವನ್ನುಟ್ಟಿದ್ದಾಳೆ. ಕೈಲಿ ಒಂದು ದೊಡ್ಡತಾಟು ಒಳ್ಳೇ ಸುಗಂಧೋಪೇತವಾದ ಪಕ್ವಾನ್ನ ಗಳಿಂದ ತುಂಬಿದೆ ಕೈಲಿ ಕೇಸರಿನೀರಿನ ಬೆಳ್ಳಿತಂಬಿಗೆ ಹಿಡಿದಿದ್ದಾಳೆ. ದಾಸರ ಮನಿಯೊಳಗೆ ಬಂದಳು. ಅಮ್ಮಾ ಎಂದು ಕರೆದಳು. ಆಗ್ಗೆ ಕೂಸ ಮ್ಮನು ನೀನಾರಮ್ಮಾ ಎಂದು ಕೇಳಲು ನಾನೊಬ್ಬ ದಾಸಳು. ನಮ್ಮ ಹಿರಿಯರು ನಾರಾಯಣರಾಯರು. ದಾಸರ ಮಿತ್ರರು. ಇಂದು ಶ್ರೀ ಅಶ್ವಥ್ಥನರಸಿಂಹದೇವರಿಗೆ ನೈವೇದ್ಯ ಮಾಡಿದ್ದೇವೆ. ದಾಸರಿಗೆ ಊಟಕ್ಕೆ ಹೇಳಿದ್ದರಂತೆ. ದಾಸರು ಇನ್ನೂ ಬರಲಿಲ್ಲ ಹಾದಿನೋಡಿ ನಮ್ಮ ರಾಯರು ಬೇಸತ್ತರು. ದಾಸರು ಬರಲಿಲ್ಲ ಕಾರಣ ಎಲ್ಲ ಪದಾರ್ಥವನ್ನು ಮುಚ್ಚಿ ಕಳಿಸಿದ್ದಾರೆ. ತೆಗೆದುಕೊಳ್ಳಿರಿ ಎಂದು ಆ ಬೆಳ್ಳಿತಾಟು ನೈವೇದ್ಯಸಹಿತ ಬೆಳ್ಳಿತಂಬಿಗೆ ಕೇಶರಪಚ್ಚಕರ್ಪುರ ನೀರು ಒಳಗೆ ಮನಿಯಲ್ಲಿಟ್ಟು, ಮುದುಕಿ ಕೂಸಮ್ಮಗೆ ನಮಿಸಿ ಹೋಗಿಬರುತ್ತೀನೆಮ್ಮಾ ಎಂದಳು.

ಅಮ್ಮಾ ನಿನ್ನ ಹೆಸರಾದರೂ ಹೇಳಮ್ಮಾ ಯಾವ ಊರು ? ಮುತ್ತೈದಿಯರು ಮನೆಗೆ ಬಂದೆ ಕುಂಕುಮ ಹಚ್ಚಿಕೊಂಡು ಹೋಗಿರಿ ಎಂದು ಕುಂಕುಮ ಕರಡಿಗೆಯನ್ನು ಮುಂದೆ ಚಾಚಿದಳು. ಆಗ್ಗೆ ಆ ಮುತ್ತೈದಿಯು ಅಮ್ಮಾ ನನ್ನ ಹೆಸರು ಲಕ್ಷ್ಮಕ್ಕಾ ಎಂದು ಹೇಳಿ ಕುಂಕುಮವನ್ನು ಹಚ್ಚಿಕೊಂಡು ಹೊರಟೇಬಿಟ್ಟಳು. ಕೂಸಮ್ಮನವರಿಗೆ ಆಶ್ಚರ್ಯವಾದಿತು. ಮುಂಜಾನೆನಿಂದ ದಾಸಪ್ಪನೂ ಹೇಳಲಿಲ್ಲ. ಸಣ್ಣಹಳ್ಳಿ ಒಬ್ಬರಿಗೂ ಈ ವರ್ತಮಾನವೇ ಗೊತ್ತಿಲ್ಲ ಏನಾಶ್ಚರ್ಯ ದಾಸರು ಬರುವ ವ್ಯಾಳ್ಯಆಗಿದೆ. ಆಗಲಿ ಮನೆಯ ಹೊರಗೆ ಬಂದು ನೋಡುತ್ತಾಳೆ ಆ ಸುಂದರ ಸುವಾಸಿನಿ ಸ್ತ್ರೀಯೇ ಕಾಣದಂತಾದಳು. ಕೂಸಮ್ಮನು ಸಾವಕಾಶ ಊರಿಗೆ ಹತ್ತಿರಿದ್ದ ಶ್ರೀ ಅಶ್ವಥ್ಥನರಸಿಂಹದೇವರ ಕಟ್ಟೆಗೆ ಬಂದು ನೋಡುತ್ತಾಳೆ ಒಬ್ಬರೂ ಇಲ್ಲ. ಇದೇನಾಶ್ಚರ್ಯವೆಂದು ಬೆರಗಾಗಿ ಮನೆಗೆ ಬಂದು ಕುಳಿತಳು. ಮನೆಯಲ್ಲವೂ ಆ ಪದಾರ್ಥಗಳ ಸುವಾಸನೆ ವ್ಯಾಪಿಸಿದೆ. ಇದು ಎಂಥ ಸುವಾಸನೆ ಒಂದು ದಿನವಾದರೂ ನೋಡಿಲ್ಲವೆಂದು ಯೋಚಿಸುತ್ತಾ ಕುಳಿತಿದ್ದಳು. ಅಷ್ಟರಲ್ಲಿ ದಾಸರು ತಮ್ಮ ತಪಸ್ಸು ಧ್ಯಾನ ಮುಗಿಸಿಕೊಂಡು ಬಂದು ಮಾತೆಗೆ ನಮಸ್ಕಾರ ಮಾಡಿ ಇದೇ ನಮ್ಮಾ ಸುವಾಸನೆ ಎಂದು ಕೇಳಲು, ಅಪ್ಪಾ ಯಾರೋ ನಿಮ್ಮ ಸ್ನೇಹಿತ ನಾರಾಯಣರಾಯರಂತೆ ನಿನ್ನಗೆ ಊಟಕ್ಕೆ ಹೇಳಿದ್ದರಂತೆ, ನಿನ್ನ ಮಾರ್ಗ ನೋಡಿ ನೀನು ಊಟಕ್ಕೆ ಬರಲಿಲ್ಲವೆಂದು ತನ್ನ ಪತ್ನಿಯಾದ ಲಕ್ಷ್ಮಕ್ಕನ ಸಂಗಡ ಬೆಳ್ಳಿತಾಟಿನಲ್ಲಿ ಸಕಲ ಭೋಜನ ಪದಾರ್ಥ ಬೆಳ್ಳಿ ತಂಬಿಗೆಯಲ್ಲಿ ನೀರು ಇಟ್ಟೆದ್ದಾಳೆಂದು ಹೇಳಿದಳು. ಕೂಡಲೇ ದಾಸರು ಬೆರಗಾಗಿ ಅಹೋ ಶ್ರೀ ಹರಿಯೆ ನಿನ್ನ ವೊಲಿಮೆಯಾಗಿ ವೊಲಿದದಕ್ಕೆ ಈ ಷಡುರಸಾಯನ ಭೋಜನ ಚಾಪಲ್ಯನೀಡಿದ್ಯಾ ಎಂದು ದೇವರ ಸ್ತೋತ್ರಗೈದರು. (ಪದ ೫೮ ಪುಟ ೪೬) "ನೀನೊಲಿದುದದಕೆ ಇಹದ ಈ ಸೌಖ್ಯವು ನಾನು ಒಲ್ಲೆ" ಒಲ್ಲೆಂದು ವೈರಾಗ್ಯದಲಿ ಬಿನ್ನೈಸಿದ್ದಾರೆ.

ಹೇ ಸರ್ವಸ್ವಾಮಿಯಾದ ಮಮಸ್ವಾಮಿ ಹರಿಯೆ ನಿನ್ನನ್ನು ಮನಸ್ಸಿನಿಂದ ನಂಬಿಕೊಂಡಿರುವ ಈ ಮಾನವನ ಕೂಡ ಮೌನವಾಗಿಪ್ಪದೇನು ? ಹೇ ದಾನವಭಂಜನನಾದ ಹರಿಯೇ ವಿಷಯಭಂಜನಗೈಸಿ ವೈರಾಗ್ಯವನ್ನು

ಕೊಡುವ ಹರಿಯೇ ನಾನಾ ಷಡ್ರಸಾನ್ನಭೋಜನದ ಆಶೆ ಬಿಡಿಸು. ಒಡಲಿಗೋಸುಗವಾಗಿ ಎಂದಾದರೂ, ನಿನ್ನ ಪ್ರಾರ್ಥಿಸಿದ್ದೆನೆ ? ಈ ಜಡ ರಸದಿಂದ ಅಡಿಗಡಿಗೆ ಅಜ್ಞಾನ ಪುಟ್ಟುವದು. ಕಾರಣ ಇಹದ ಸೌಖ್ಯ ಕೊಡದೇ ನಿನ್ನ ಧ್ಯಾನವನ್ನು ಪಾಲಿಸಿ ಭವದಡಿಯತೆಯಿಂದೆತ್ತಿ ಕಾಪಾಡುವದೆಂದು ಪುನಃ ಪುನಃ ಮೊರೆ ಇಡುತ್ತ ದೈನ್ಯದಿಂದ ಬೇಡಿಕೊಳ್ಳಹತ್ತಿದರು. ಹೇ ಸ್ವಾಮಿ ಇದೇನು ನಿನ್ನ ಆಟ, ಜನ ಮಹಾಜನ, ರಾಜರ ಮನ್ನಣೆ ಮರ್ಯಾದೆ ಇವೆಲ್ಲ ನನ್ನಗೆ ನಿನ್ನಾಣೆಯಾಗಿಯೂ ಹತ್ತದು ಬೇಡ ಬೇಡ ಕೊಡಬೇಡ. ಮನೋ ವಾಚಾ ಕಾಯದಿಂದಲೂ ತ್ರಿಕರಣಶುದ್ಧಿಯಿಂದ ಬೇಡಿಕೊಂಬುವೆ. ಧನಕನಕ ವಾಹನ ವಸನಗಳಿಂದ ಈ ಜನುಮದೊಳಗೆ ಇದೇ ಸಾಧನವಾದಿತೆ ? ಇವುಗಳ ಉಬ್ಬಿನಲ್ಲಿ ಒಂದು ದಿನವಾದರೂ ಸಾಧನಮಾಡಲಿಲ್ಲ. ಹೇ ಸ್ವಾಮಿ ನೀನು ಕಂಡಕಂಡಲ್ಲಿನ್ನ ತಿರುಗಿಸಿ ಮರುಗಿಸುವದುಚಿತವೇನ್ನೈ ? ಭೂಮಂಡಲದೊಳು ಇಂಥ ಲೌಕಿಕವಾದ ಚಂಡಕರ್ಮದೊಳು ಇಟ್ಟು ಉಂಡು ಉಣಿಸಿ ದಣಿಸುವದುಚಿತವಲ್ಲವಯ್ಯಾ; ನಾನು ನಿನ್ನ ಭೃತ್ಯರ ಭೃತ್ಯ ತೋಂಡ. ನನ್ನಗೆ ಖಂಡಮತಿಯನ್ನು ಕೊಡದೇ ನೀನೊಲಿದು ಮುಕ್ತರ ಸಮೂಹ ಸಂಗವನ್ನಿತ್ತು ಕಾಪಾಡು ಶ್ರೀ ವಿಜಯ ವಿಠಲನೆಂದು ತುತಿಸಿದರು. ಇಹದ ಸೌಖ್ಯ ಸಾಕು. ಈ ಸೌಖ್ಯಕ್ಕೆ ಮರುಳುಮಾಡಿ ಕೆಂಗಿಡಿಸಬೇಡೆಂದು ದೈನ್ಯದಿಂದ ಪ್ರಾರ್ಥಿಸಿದರು. ಆಗ್ಗೆ ಲಕ್ಷ್ಮ್ಯಕ್ಷನವರು ತಂದಿಟ್ಟದೆಲ್ಲ ಕಾಣದಂತಾಯಿತು. ತಾಯಿಯು ಲಕ್ಷ್ಮ್ಯಕ್ಷನನ್ನು ನೋಡಿದ ಭಾಗ್ಯಕ್ಕೀಡಲ್ಲೆಂದು ಭಾವಿಸಿದಳು. ನಿಜಭಕ್ತರ ಐಶ್ವರ್ಯ ಪಾರಲೌಕಿಕವು ಬೇರೆ. ವಿಷಯ ವೈರಾಗ್ಯ ಬಿಡುವದು ಇಹ ಸೌಖ್ಯ ದೇವರು ಕೊಟ್ಟರೂ ಬೇಡವೆಂಬುವರು ಇದು ನಿಜಭಕ್ತರ ವೈರಾಗ್ಯ ಲಕ್ಷಣ. ಭಕ್ತ ಮಾರ್ಗಕ್ಕೆ ಹತ್ತಿದರೆ ಅವನನ್ನು ನಾನಾ ಪರಿಯಿಂದ ದೇವರು ಪರೀಕ್ಷಿಸಿ ಕಾಪಾಡುತ್ತಾನೆ. ಒಳ್ಳೇ ಮೃಷ್ಟಾನ್ನ ಬೆಳ್ಳಿ ತಂಬಿಗಿ ತಾಟು ದೊರಕಿದೆಂದು ಹರ್ಷಿತರಾಗಲಿಲ್ಲ. ಇಹದ ಐಶ್ವರ್ಯವು ಮದಕ್ಕೆ ಕಾರಣ. ಇದರಿಂದ ಭಗವಂತ ವಿಸ್ಮೃತಿ ಪರಲೋಹಾನಿ ಎಂದು ಪದೆ ಪದೆ ನೆನಪಿನಲ್ಲಿಟ್ಟು ನಡೆದರೆ ಶ್ರೀದಾಸರು ಒಲಿದುಶ್ರೀಶನನ್ನು ತೋರಿಸುವರು.

## ತಿರುಪತಿಯಲ್ಲಿ ಶ್ರೀ ವೆಂಕಟನು

೩. ಶ್ರೀ ದಾಸರ ಸಂಗಡ ವಿಹಾರಮಾಡಿದ ಚರಿತೆ ಅನೇಕ ಉಂಟು. ಪ್ರತಿ ಬ್ರಹ್ಮೋತ್ಸವಕ್ಕೆ ಮತ್ತು ಅನೇಕಸಾರೆ ತಿರುಪತಿಗೆ ದಾಸರು ಹೋಗುತ್ತಿದ್ದರು. ಕೆಲವ್ಯಾಳ್ಯ ಬಹು ಗದ್ದಲದಲ್ಲಿ ದೇವರ ದರ್ಶನ ಆಗುವದು ಶ್ರಮ. ಆಗಿನಕಾಲ ಗದ್ದಲಶಾಂತತೆಗೆ ಗುಡಿಯ ಸೇವಕರು ಕೃಷ್ಣಾಜಿನ ಪೆಟ್ಟು ತಲೆಯ ಮೇಲೆ ಹಾಕುವರು. ಇದನ್ನು ಸಹನ ಮಾಡಿಕೊಂಡು ಜನಸಮ್ಮರ್ದನದೊಳಗೆ ದರ್ಶನ ಮಾಡಬೇಕಾಗುತ್ತಿತ್ತು. ಕೃಷ್ಣಾಜಿನ ಪೆಟ್ಟು ತಮೋಗುಣನಾಶಕವಾದುದು. ಬಹು ಗದ್ದಲ. ಕೃಷ್ಣಾಜಿನದವರ ಪೆಟ್ಟು ತಲಿಮೇಲೆ ಸಹಿಸಲಾರದೆ ಮುಂದೆ ಹೋಗಲಾರದೇ ಹಿಂದೆ ಸರಿದು ಒಂದೆಡೆ ಬಂದು ಕುಳಿತು ಶ್ರೀ ವೆಂಕಟನ ನಿಂದಾಪರ ಸ್ತ್ರೋತ್ರಮಾಡಿದರು.

" ನಿನ್ನ ದರುಶನಕೆ ಬಂದವನಲ್ಲವೊ ದೇವ ಪುಣ್ಯವಂತರ ನೋಡಲು ನಾ ಬಂದೆ " ಎಂಬ ೭ ನುಡಿ ಪದದಿಂದ ಹರಿಯ ಸ್ತ್ರೋತ್ರಮಾಡಿ ಮುಡಿ ಅಕ್ಕಿ " ತೊಳಸದಕ್ಕಿಯ ಉಂಬ " ಎಂದು ಮಂಗಳ ಪದವನ್ನು ಹೇಳಿ ಶ್ರೀ ವೆಂಕಟನ ಧ್ಯಾನದಲ್ಲಿ ಕುಳ್ಳಿರ್ದರು. ಅಷ್ಟರಲ್ಲೆ ಒಬ್ಬ ತ್ರಿನಾಮಧಾರಿ ಭೃತ್ಯನು ಬಂದು ದಾಸರನ್ನು ಒಳಗೆ ಕರದೊಯ್ದು ದೇವರ ದರ್ಶನ ಮಾಡಿಸಿದನು. ಆಗ್ಗೆ ದಾಸರು ಶ್ರೀ ವೆಂಕಟನ ಚಿನ್ಮಯ ರೂಪವನ್ನು ನೋಡಿ ಆನಂದಬಾಷ್ಪೋದಕಗಳನ್ನು ಉದರಿಸುತ್ತಾ ಶ್ರೀ ವೆಂಕಟ ನೀನು ಸಿಟ್ಟಾದಿಯೋ ಹೇಗೆ ? ಎಂದು ಬಿನ್ನೈಸಿ " ನಿನ್ನ ದರುಶನಕೆ ಬಂದೆ ನಿತ್ಯ ತೃಪ್ತಾ " ಎಂದು ಪುನಃ ೭ ನುಡಿ ಪದವನ್ನು ರಚಿಸಿದ್ದಾರೆ. ದೇವರ ವ್ಯಾಪ್ತತ್ವ ವ್ಯಕ್ತತ್ವ ವಿಚಾರವಿದೆ.

೪. ಒಂದುಸಲ ಬ್ರಹ್ಮೋತ್ಸವ ಗಲಾಟೆ; ದಾಸರು ಗುಡಿಯಲ್ಲಿ ದೇವರ ಧ್ಯಾನದಲ್ಲಿ ಕುಳಿತುಕೊಂಡು ಬಿಟ್ಟಾರೆ. ಶಿಷ್ಯರೂ ಯಾರೂ ಇತ್ತ ನೋಡಿಲ್ಲ. ಉತ್ಸವ ದೇವರು ಹೊರಗೆ ಬಂದ ಕೂಡಲೇ ಸಂಪ್ರದಾಯದಂತೆ ಗುಡಿಯ ಬಾಗಿಲಿಗೆ ಕೀಲಿ ಹಾಕಿಬಿಟ್ಟರು. ದಾಸರು ಒಳಗೆ ಧ್ಯಾನದಲ್ಲಿಯೇ ಕುಳಿತರು.

ಇತ್ತ ಶ್ರೀ ವೆಂಕಟನು ಶ್ರೀ ಭೂಲಲನೆಯರಿಂದ ರಥಾರೂಢನಾದ. ಮಹಂತನು ವೆಂಕಟನ ಭಕ್ತನು. ರಥಾರೂಢ ದೇವರಿಗೆ ಮಂಗಳಾರ್ತಿ ದಂಡಪ್ರಣಾಮಗಳನ್ನರ್ಪಿಸಿ ರಥ ಸಾಗಿಸಿದನು. ಅನೇಕ ಭಕ್ತರ ಮೇಳ. ದಾಸರ ಭಜನೆ ನಡೆದದೆ ರಥ ಸಾಗದು. ಬಹು ಹೊತ್ತಾಯಿತು. ಮಹಂತರು ಗಾಬರಿಗೊಂಡು ಅಪರಾಧ ಕ್ಷಮಿಸಲು ಬಾರಿಬಾರಿಗೆ ಮೊರೆ ಇಡುವನು. ಯಾರದು ಏನೇನು ಹರಿಕೆ ಇದೆ ಪೂರೈಸಿರೆಂದು ಕೇಳು ವನು. ಹರಿಕೆ ಜನರು ಪೂರೈಸಿದರೂ ರಥ ಸಾಗದು. ಏನಾಶ್ಚರ್ಯ ?

ದಾಸರ ಗುಂಪಿನಲ್ಲಿ ಶ್ರೀ ವಿಜಯದಾಸರೇ ಇಲ್ಲ. ಅತ್ತಿತ್ತ ನೋಡಿದರೂ ಸಿಗರು. ಆಗ್ಗೆ ಒಬ್ಬ ಶಿಷ್ಯ ದಾಸರು ದೇವರ ಗುಡಿ ಯೊಳಗೆ ಧ್ಯಾನದೊಳಗೆ ಕುಳಿತವರು ಅಲ್ಲೇ ಇರುವರೇನೋ ? ಅಹೋ ಧ್ಯೈರಣ ಧ್ಯಾನದಲ್ಲಿ ಕುಳಿತ ತನ್ನ ಭಕ್ತನನ್ನು ಬಿಟ್ಟು ವೆಂಕಟನು ರಥಕ್ಕೆ ಬಾರನೆಂಬ ದಾಸಜನರ ಗುಜುಗುಟ್ಟುವಿಕೆಯು, ಮಹಂತರ ವರೆಗೆ ಮುಟ್ಟಿತು. ಮಹಂತರು, ಸ್ವಲ್ಪ ವೇಳೆ ಆಲೋಚಿಸಿ, ಗುಡಿಯ ಬಾಗಿಲು ಕೀಲಿ ತೆಗಸಿ ಒಳಗೆ ಹೋಗಿ ನೋಡುತ್ತಾರೆ ದಾಸರು ಒಳಗೆ ಧ್ಯಾನದಲ್ಲಿ ಕುಳಿತಾರೆ. ಶ್ರೀ ವೆಂಕಟನನ್ನು ಭಕ್ತಿಪಾಶದಿಂದ ಕಟ್ಟಿ ತಮ್ಮ ಹೃದಯದಲ್ಲಿ ನಿಲ್ಲಿಸಿದ್ದಾರೆ. ಮನದಲ್ಲಿ ನಲಿದಾಡುತ್ತಾರೆ. ಇಂಥ ಭಕ್ತರನ್ನು ಬಿಟ್ಟು ವೆಂಕಟನು ರಥಕ್ಕೆ ಬರುವನೇ ? ಸಕಲ ಜಗತ್ತಿನಲ್ಲಿ ಅಂತರಂಗ ಬಹಿರಂಗ ಬ್ರಹ್ಮಾಂಡ ಬಹಿಬ್ರಹ್ಮಾಂಡದಲ್ಲಿ ಇದ್ದ ಭಗವ ದ್ರೂಪಗಳ ಒಂದಂಶವನ್ನು ತಂದು ಶ್ರೀ ವೆಂಕಟನಲ್ಲಿ ನಿಲ್ಲಿಸಿ ಆವೆಂಕಟನೇ ಎನ್ನ ಬಿಂಬನೆಂದು ಬಿಂಬೈಕ್ಯ ಚಿಂತಿಸಿ ಧ್ಯಾನಗೈವ ನಿ ಜ ಭ ಕ್ತ ರ ವೈಭೋಗವಿದು.

ಮಹಂತರು ಅರ್ಚಕರು ಬಂದು ದಾಸರನ್ನು ಪ್ರಾರ್ಥಿಸುತ್ತಾರೆ. ಎಚ್ಚರವಿಲ್ಲ ಅಸಂಪ್ರಜ್ಞಾತ ಸಮಾಧಿ ಸ್ವಲ್ಪ ಕಾಲದಲಿ ಇಳಿದನಂತರ ಪುಳುಕಾಂಕಿತರಾಗಿ ಆಶ್ಚರ್ಯದಿಂದ ಏನೆಂದು ಕೇಳಲು, ಮಹಂತರು ಮಹಾಸ್ವಾಮಿ ನಮ್ಮ ಅಪರಾಧ ಕ್ಷಮಿಸಿರಿ. ತಾವು ಬರದ ವಿನಾ ದೇವರ ರಥ ಸಾಗದೆಂದು ಬಿನ್ನೈಸಲು, ನಮ್ಮಪ್ಪ ವೆಂಕಟ ಇಲ್ಲೇ ಇರುವನು.

ಬಂದೆನು ನಡೆಯಿರೆಂದು ವೈಮರದು ಭರದಿಂದೋಡುತ್ತ ರಥದ ಹತ್ತಿರ ಬಂದು ಸಾಷ್ಟಾಂಗ ಪ್ರಣಾಮಣಾಮ ಮಾಡಿ "ಸಾಗಿಬಾರಯ್ಯಾ ಭವ ರೋಗದ ವೈದ್ಯನೆ" ಉರಗಾಗಿರಿ ವೆಂಕಟ ಸಾಗಿ ಬಾರಯ್ಯಾ ಎಂದು ಪ್ರಾರ್ಥಿಸಿದರು. ೩ ನುಡಿ ಪದವು ಮುಗಿಯಿತು. ಶ್ರೀ ವೆಂಕಟನು ಪ್ರಸನ್ನನಾದನು. ರಥವು ಸಾಗಿತು. ಮುಂದೆ ನಡೆಯಿತು. ದಾಸರಿಗೆಲ್ಲ ಆನಂದ. ಮಹಂತನಿಗೆ ಹೆಚ್ಚಿನಾನಂದ. ಭಗವದ್ದಾಸರನ್ನು ಸನ್ಮಾನಿಸಿ ಪ್ರಾರ್ಥಿಸಿದನು.

೫. ಇದರಂತೆ ಅನೇಕ ಅನೇಕ ಮಹಿಮೆಗಳನ್ನು ತೋರಿದ್ದಾರೆ. **ರೌದ್ರಿ ಸಂವತ್ಸರ ಕೃಷ್ಣವದಿ (೧೪) ಚತುರ್ದಶಿ ಶನಿವಾರ ಅರ್ಧ ರಾತ್ರಿಯಲ್ಲಿ** ದಾಸರು ಗುಡಿಯೊಳಗೆ ಮಲಗಿದ್ದಾಗ್ಗೆ ಸ್ವಪ್ನದಲ್ಲಿ ನಿಜರೂಪ ತೋರಿ ನಾಲ್ವತ್ತುಮೂರು ಪದಗಳನು ಮಾಡೆಂದು ಆಜ್ಞೆಯಿತ್ತು, ದಂಡಿಗೆ ಬೆತ್ತ ಕರದಲ್ಲಿ ಕೊಟ್ಟು, ತನ್ನ ಅಮೃತಕರವಾದ ಹಸ್ತವನ್ನು ದಾಸರ ಶಿರದ ಮೇಲಿರಿಸಿ ಆಶೀರ್ವಾದ ಮಾಡಿದನು. ಎಚ್ಚತ್ತ ನಂತರ ದಾಸರು ನೋಡುತ್ತಾರೆ ದಂಡಿಗೆ ಬೆತ್ತ ತಮ್ಮ ಕರದಲ್ಲಿದೆ. ಆನಂದ ಭರಿತರಾದರು. "ಎಂದೊಡನಾಡುವೆ ಎಂದರ್ಥಿಬಡುವೆ ಎಂದಿಗೆ ತಕ್ಕೈರ್ಸಿ ಸಂತೋಷಬಡುವೆ" ಎಂದು (೫) ನುಡಿ ಪದ ಮಾಡಿದ್ದಾರೆ. ( ಪದ ೫೯ ಪುಟ ೪೭ ).

೬. ಒಂದುಬಾರೆ ದಾಸರು ಶ್ರೀ ವೆಂಕಟನಗುಡಿ ಪುರಂದರದಾಸರ ಮಂಟಪದಲ್ಲಿ ಧ್ಯಾನಕ್ಕೆ ಕುಳಿತಾರೆ. ಶ್ರೀ ಹರಿಯನ್ನು ಧೇನಿಸಿದನಂತರ ದಾಸರು ಆ ರೂಪವನ್ನೆ ಧ್ಯಾನಿಸುತ್ತ ಸ್ತೋತ್ರ ಮಾಡಹತ್ತಿರುವರು. ಕೆಲಹೊತ್ತಿನ ಮೇಲೆ ಶ್ರೀ ವೆಂಕಟನು ಪ್ರತ್ಯಕ್ಷವಾಗಿ ದಾಸರ ಮುಂದೆ ಸುಳಿದಾಡಿದನು. ದಾಸರು ನಮಿಸಲು, ಅಭಯ ಹಸ್ತವನ್ನು ಅವರ ಶಿರದ ಮೇಲಿರಿಸಿ ಮಾಯವಾಗಿದ್ದಾನೆ. ಆಗ್ಗೆ ದಾಸರು ಪರವಶದಿಂದ ಸುಳಾದಿ "ಅಂತರಂಗದೊಳು ಪೊಳೆವನು ಶ್ರೀಕಾಂತನೊ ಬೊಮ್ಮನ ಪಡದ ದೇವನೊ" ಎಂದು ಸ್ತೋತ್ರಗೈಯುತ್ತ ಆದಿ ತಾಳದಲ್ಲಿ "ಮಸ್ತಕದಲಿ ಅಭಯ ಹಸ್ತವನು ಇಟ್ಟು ಬಲು । ಅಸ್ತಮಾನ

ಉದಯಾವಸ್ತಿಯನ್ನು ಹರಿಸುತ್ತಾ । ಸ್ವಸ್ಥಾನದಲಿ ಎನ್ನ ಪ್ರಸ್ತುತವನು ನಡೆಸಿ ಹಸ್ತಕನ್ನು ಮಾಡು ಪರಸ್ತವೆ ವಿಜಯ ವಿಠಲ । ವಿಸ್ತಾರ ಮಹಿಮನೊ ಕಸ್ತೂರಿ ಮೃಗದಂತಸ್ತವಾಗಿ ಪೊಳೆವನೊ ||೫|| ಮುಂದೆ "ಜತೆ" ಯಲ್ಲಿ " ಇಂದು ಸುಳಿದಂತೆ ಅನುಗಾಲ ಎನ್ನೊಳಗೆ ಬಂದು ಉದ್ಧರಿಸೋದು ವಿಜಯ ವಿಠಲರೇಯ " ಎಂದು ಶ್ರೀ ಹರಿಯನ್ನು ಪ್ರಾರ್ಥಿಸಿದ್ದಾರೆ. ಭಕ್ತರಲ್ಲಿ ನಲಿದಾಡಿ ಲೀಲೆಮಾಡಿದದು ಮಹದಾಶ್ಚರ್ಯ. ( ತೀರ್ಥಕ್ಷೇತ್ರ ಸುಳಾದಿ ೨೩ ).

೭. ಹೀಗೆ ವೆಂಕಟನು ಅನೇಕಸಾರೆ ಪ್ರತ್ಯಕ್ಷನಾಗಿ ದಾಸರನ್ನು ಸಂತೈಸಿ ದಾಸರ ಮಹಿಮೆ ತೋರಿ ದಾಸರು ದೊಡ್ಡವರೆಂದು ಪ್ರಸಿದ್ಧಗೈಸಿದ್ದಾನೆ.

ಒಂದು ಸಲ ದಕ್ಷಣ ಯಾತ್ರೆಗೆ ದಾಸರು ತೆರಳಿದ್ದಾರೆ. ಮನ್ನಾರಗುಡಿ ಶ್ರೀ ಕೃಷ್ಣ ಸಂದರ್ಶನ ನದಿಯ ಸ್ನಾನಕ್ಕೆ ಇಳಿದಿದ್ದಾರೆ. ನದಿಯು ಸ್ನಾನಮಾಡಿ ದಡಕ್ಕೆ ಬರುವದರಲ್ಲಿ ಒಬ್ಬ ಹುಡುಗನು (ದನಾ ಕಾಯುವವನು ಗೋಪಾಲವೇಷ ) ಬಂದು ದಾಸರಿಗೆ ನೀರು ಸಿಡಿಸಿದ. ಅಯ್ಯೋ ಪಾಪ ಹುಡುಗ ನೀರು ಸಿಡಿಸಿದನೆಂದು ಪುನಃ ಸ್ನಾನಮಾಡಿ ಮೇಲೆ ಬರುವದರಲ್ಲಿ ಪುನಃ ನೀರು ಸಿಡಿಸಿದ ಹೀಗೆ ೮–೧೦ ವರ್ತಿ ಆಯಿತು. ದಾಸರು ಸಿಟ್ಟಿಗೆದ್ದು, ತಮ್ಮಾ ಇದೇನು ದೂರಸರಿ ಮೈಲಿಗೆ ಮಾಡಬೇಡವೆಂದು ಸ್ವಲ್ಪ ಶಿಟ್ಟುಮಾಡಿ ಹೇಳಿ ಪುನಃ ಸ್ನಾನಮಾಡಿ ಬರಲು, ಆ ಗೋಪಾಲಕನು ನೀರು ಕುಡಿಯುವ ಬಾಯೊಳಗಿನ ನೀರಿನಿಂದ ದಾಸರ ಮುಖಕ್ಕೆ ಉಗುಳಿದನು. ಮುಖಕ್ಕೆ ನೀರು ಉಗಳಿದಾಕ್ಷಣವೇ ದಾಸರ ದಿವ್ಯ ಚಕ್ಷುಸುಗಳು ತೆರದವು. ಜ್ಞಾನದಿಂದ ಶ್ರೀ ಕೃಷ್ಣಮೂರುತಿಯನ್ನು ನೋಡಿ ಆನಂದದಿಂದ ಸುಮ್ಮನಿದ್ದ ಬಾಲನನ್ನು ನೋಡಿ " ಮಾತನ್ನಾಡೋ ಮನ್ನಾರಿ ಕೃಷ್ಣಾ ಮಾತನಾಡೈ ದಾತನು ನೀನೆಂದು ಬಯಸಿ ಬಂದುದದಕೆ ಮಾತನಾಡೈ " ಎಂದು ೫ ನುಡಿ ಶ್ರೀ ಕೃಷ್ಣಸ್ತೋತ್ರವನ್ನು ಮಾಡಿದರು. ಕೊನೆ ನುಡಿಯಲ್ಲಿ " ತ್ರಿಜಗವನಿರುತ ಪಾಲಕನೊಪಂ । ಕಜನೇತ್ರಳನಾಯಕನೊ । ಅಜಭವಾದಿಗಳ ಜನಕನೋ ನಮ್ಮ

ವಿಜಯ ವಿಠಲ **ಕುವರತನೋ"** ಎಂದು ಸ್ತೋತ್ರಗೈದರು. ಆಗ್ಗೆ ಶ್ರೀ ಕೃಷ್ಣನು ಸಾಕ್ಷಾತಾಗಿ ಸಂದರ್ಶನವಿತ್ತನು. ತ್ರಿಜಗದೊಡೆಯ, ಲಕ್ಷ್ಮೀಕಾಂತ ಬ್ರಹ್ಮರುದ್ರಾದಿಗಳಿಂದ ವಂದಿತನಾದರೂ ಇಂದು ವಿಜಯ ವಿಠ್ಠಲನಾದ ಶ್ರೀ ಕೃಷ್ಣಸ್ವಾಮಿಯು ಕುವರತ ಕೆಟ್ಟ ನಡಾವಳಿಯಿಂದ ಬಾಯಿಯೊಳಗಿನ ನೀರಿಂದ ಉಗಳಿ ಕುವರತ ಅಜ್ಞಾನ ದೆಸೆಯಲ್ಲಿರುವ ನನ್ನಗೆ ಜ್ಞಾನಕೊಟ್ಟು ನಿನ್ನ ಸಾಕ್ಷಾತ್-ರೂಪ ತೋರಿದೆಯೊ ಎಂತ ಶ್ರೀ ಮನ್ನಾರಿ ಕೃಷ್ಣನ ಸ್ತೋತ್ರ ಗೈದಿರುವರು (ಪ್ರಕಟನೆ ೧೩ ಪದ ೨೩೩ ಪುಟ ೧೮೮) ಹೀಗೆ ಅಪರೋಕ್ಷಜ್ಞಾನಿಗಳ ವಂಶಜರಾದ ನನ್ನನ್ನು ಸಾಕಿಸಲಹಿದ ಶ್ರೀ ರಾಮಣ್ಣವರಿಂದ ಚಿಕ್ಕವಯಸ್ಸಿನಲ್ಲಿ ನಾನಾಬಗೆಯ ಶ್ರೀ ಕೃಷ್ಣಭಕ್ತರ ಚರಿತೆಯು ಇಂದು ದಾಸರು ಬರೆಸಿದರು. ಇದೇ ಮಹಿಮೆಯೇ ಇಂದಿಗೂ ಇದ್ದೆ ಇದೆ.

೮. ಒಂದು ಸಲ ದಾಸರು ಪಂಢರಪುರಕ್ಕೆ ಪಾಂಡುರಂಗನ ದರ್ಶನಾರ್ಥ ಪೋಗಿದ್ದರು. ಶ್ರೀ ಭೀಮರಥಿ ಸ್ನಾನ ಪುಂಡಲೀಕಭಕ್ತ, ಪಾಂಡುರಂಗ ರುಕುಮಾಯಿದರ್ಶನಮಾಡಿ, ಒಂದೆಡೆಯಲ್ಲಿ ಏಕಾಂತ ವಾಗಿ ಕುಳಿತು ಆನಂದದಿಂದ ಧ್ಯಾನಮಾಡುತ್ತಿರಲಾಗಿ, ಮುಂದರೋ ಧ್ದಾರನಾದ ಶ್ರೀ ಹರಿಯು (ಪದಜ) ಶೂದ್ರ ವೇಷದಿಂದ ದಾಸರ ಕಣ್ಣು ಮುಂದೆ ಸುಳಿದನು. ಚಲ್ಲಾಣ (ಚಂಣ) ಬಿಗಿವಿನಿಂದ ಉಟ್ಟಾನೆ ಮಾಸಿದ ವಸ್ತ್ರವನ್ನು ತೊಟ್ಟಾನೆ. ಕಾಲಲ್ಲಿ ದಿಪ್ಪನ ಕೆರಹು (ಚಪ್ಪಲಿ) ಮೆಟ್ಟಿರುವನು. ಈ ಪರಿಯ ರೂಪದಿಂದ ಮುಂದೆ ಬಂದು ನಿಂದು, ಅಂದವಾಗಿ ತೋರುತ್ತ, ನಗೆಮೊಗದಿಂದ ನೋಡಿ ವಿಚಿತ್ರ ಮಾತುಗಳಾಡಿ ದನ್ನು ದಾಸರು ಕಣ್ದೆರದು ನೋಡಿದರು. ಆದರೆ ದಾಸರು, ಆ ಶೂದ್ರನ ಕುರುಹು ತಿಳಿಯಲಿಲ್ಲ. ನಮಸ್ಕಾರ ಮಾಡಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಆ ಶೂದ್ರರೂಪವು ಮಾಯವಾದಿತು. ಆಗ್ಗೆ ದಾಸರಿಗೆ ಶ್ರೀ ಪಾಂಡುರಂಗನೇ ಈ ರೂಪದಿಂದ ಬಂದು ನಿಂದುದರ್ಶನ ಕೊಟ್ಟಿದ್ದಾನೆ. ಹೇ ಪಾಂಡುರಂಗ ಸ್ವಾಮಿಯೇ ನಿನ್ನ ತಿಳಿಯದೇ ಅಜ್ಞಾನದಿಂದ ಅಸೂಯ ತಂದುಕೊಂಡೆ. ನಿನ್ನ ಮರೆದೆ ತುತಿಸಲಿಲ್ಲ. ಹೇ ಸ್ವಾಮಿ ಈ ಶೂದ್ರರೂಪವು ಯಾವ ಶ್ರುತಿ ಪುರಾಣದಲ್ಲಿ ಹೇಳದೆ, ವೇದ ಪ್ರಣೀತ

ನೆಂಬುದು ನಿನ್ನ ಹೊಗಳಿಕೆ ಎಲ್ಲಿ ಹೋದಿತು ? ಈ ನಿನ್ನ ಶೂದ್ರರೂಪ ರಮಾ ಬ್ರಹ್ಮಾದಿಗಳು ತುತಿಸಿರುವರೇ ಹೇಗೆ ? ನೀನು ಶೂದ್ರರೂಪ ಧರಿಸಿ ಮೋಸಗೊಳಿಸಿದರೂ ಅಂಜೆ ? ಬಹಿರಂಗದಲ್ಲಿ ನಿನ್ನ ಅನೇಕ ರೂಪಗಳಿಂದ ನಲಿದಾಡಿದರೂ ನನ್ನಗಿವು ಏನು ಪ್ರಯೋಜನವಿಲ್ಲ. ಅಂತರಂಗದಲ್ಲಿ ಪೊಳೆವ ಬಿಂಬರೂಪಿ ಹರಿಯೇ, ಈ ಪದಜರೂಪನಾಗಿ ತೋರಿದ ಪಾಂಡುರಂಗನೆ ನಿನ್ನ ಮಹಿಮೆಗೆ ನಮೊನಮೊ ಎಂದು ಬಹು ಪ್ರಮೇಯಯುಕ್ತ ಎರಡು ಸುಳಾದಿಗಳನ್ನು ದಾಸರು ಮಾಡಿ ಬಹು ವಿಲಕ್ಷಣವಾದ ಸ್ತೋತ್ರಗೈದಿರುವರು. " ಅಂದು ನಿನ್ನ ದರುಶನಕ್ಕೆ ಆರ್ತಉಳ್ಳವನಾಗಿ ಬಂದು ವಂದೆಡೆಯಲ್ಲಿ ಏಕಾಂತದಿ " ಎಂಬೋ ಬಹು ಸ್ತೋತ್ರಯುಕ್ತ ಸುಳಾದಿ ಉಪಾಸನಾಭಾಗ ಪ್ರಕಟನೆ (೧೦) ಸುಳಾದಿ ೩೮ ಪುಟ ೧೨೧ ರಲ್ಲಿ ನೋಡಿ ಶ್ರೀ ಹರಿಯಲೀಲೆ ದಾಸರಲ್ಲಿರುವ ಭಕ್ತಿ ಜ್ಞಾನವನ್ನು ತಿಳಿಯಬಹುದಾಗಿದೆ. ಮತ್ತು " ಅಂದು ಮಾನಿಸನಾಗಿ ಲೋಹಕ್ಷೇತ್ರದಲ್ಲಿ ಬಂದು ಸುಳಿದು ಪೋದದು ಅರಿಯಾದೆ। **ಮಂದ ಮತಿಗನಾನು ಮಾನುಷ್ಯಾನ್ನವ ಬಿಡದೆ ತಿಂದ ಪ್ರಯುಕ್ತದಲ್ಲಿ ಇನಿತಾಯಿತೋ** " ಎಂದು ಮತ್ತೊಂದು ಸುಳಾದಿಯಿಂದ ಸ್ತೋತ್ರ ಗೈದಿರುವರು. ಕ್ಷೇತ್ರಮಹಿಮಾ ಸುಳಾದಿ ೯೧ ಪುಟ ೩೩೭ ನೋಡಿ ಮನನಮಾಡಿ ತಣಿದು ದಣಿವುದು.

ಹೀಗೆ ಒಂದಲ್ಲ ಎರಡಲ್ಲ ಮೂರಲ್ಲ ಅನೇಕಬಾರೆ ಶ್ರೀ ಹರಿಯು ದಾಸರಿಗೆ ನಾನಾ ರೂಪತೋರಿ, ಠಕ್ಕಿಸಿ ಜ್ಞಾನಕೊಟ್ಟು ಭಕ್ತವಾತ್ಸಲ್ಯತನ ತೋರಿಸಿರುವನು. ಅನಂತಮಹಿಮೆ, ಅನಂತಲೀಲೆ ಅನಂತಚಾರಿತ್ರ ಉಳ್ಳ ಅನಂತನ ಭಕ್ತರಾದ ದಾಸರ ಲೀಲೆಯು ಸಹ ಅನಂತ ಅಜ್ಞರಿಂದ ತಿಳಿಯಲು ಶಕ್ಯವಿಲ್ಲ. ಹೀಗೆ ದಾಸರಲ್ಲಿ ಹರಿಯ ಕಾರುಣಿಕತೆ ದಾಸರಲ್ಲಿ ನಲಿದಾಡಿದ ಮಹಿಮೆ ದಾಸರ ಪದ ಸುಳಾದಿ ಕವನಗಳನ್ನು ಚನ್ನಾಗಿ ಮನಮುಟ್ಟಿ ಗುರುದ್ವಾರತಿಳಿದು ಅಭ್ಯಾಸ ಮಾಡಿದರೆ. ಶ್ರೀ ಹರಿಯ ಮಹಿಮೆ ತಿಳಿಸಿ, ದಾಸರೇ ಹರಿಯನ್ನು ತೋರಿಸುವರು. ಇಲ್ಲವೇ ನೀರು ಹರಿಯೆಗತಿ " ಅಂಗದ ಮುಸುಕು ತೆಗೆದನೋ ಕ್ಷೇತ್ರದಿ ಪಾಂಡುರಂಗ। ವಿಜಯರಾಯ ॥ ಗೋಪಾಲ ವಿಠಲರ ವಚನ.

## ಶ್ರೀ ವಿಜಯದಾಸರ ಮಹತ್ಮೆಗಳು ಭಕ್ತರಿಗೆ ತೋರಿದವು

ಶ್ರೀ ಹರಿಯು ವಿಜಯದಾಸರಲ್ಲಿ ನಿಂದು ನಾನಾ ವಿಧವಾದ ಮಹತ್ಮೆಯನ್ನು ಪ್ರಕಟಿಸಿರುವನು. ಶ್ರೀ ಹರಿಯೇ ದಾಸರ ದಾಸನಾಗಿರಲು, ಮಹಿಮೆಗಳೇನಚ್ಚರ?

೧. ಹಿಂದೆ ಮಾಳಿಗಿ ಶ್ರೀನಿವಾಸಾರ್ಯರೆಂಬೋ ಒಬ್ಬ ಮಹಾ ಪಂಡಿತರೂ ಅಪರೋಕ್ಷ ಜ್ಞಾನಿಗಳಾಗಿದ್ದರು. ಅವರು ವಿಠಲೋಪಾಸಕರು ಪ್ರತಿನಿತ್ಯ ಅತಿವಿಭವದೊಡನೆ ಶ್ರೀ ವಿಠಲದೇವರನ್ನು ಪೂಜಿಸುತ್ತಿದ್ದರು. ಅವರ ತರುವಾಯದಲ್ಲಿ ವಿಠಲದೇವರ ಪೂಜೆ ನಿಂತೇಹೋಯಿತು. ವಿಠಲನು ಪೆಟ್ಟಿಗೆಯಲ್ಲೇ ಉಳಿದನು. ಇತ್ತ ಶ್ರೀ ವಿಜಯದಾಸರಿಗೆ ಶ್ರೀ ಹರಿಯ ಅನುಗ್ರಹವಾದಮೇಲೆ ಬಹುದಿವಸ ಪೂಜೆಯಿಲ್ಲದೆ ಇದ್ದ ಶ್ರೀ ವಿಠಲದೇವರನ್ನು, ಶ್ರೀ ವಿಜಯದಾಸರಿಗೆ ಕೊಡಿರೆಂದು ಅವರ ವಂಶಿಕರಿಗೆ ಸ್ವಪ್ನವಾದಿತು. ಆಗ್ಗೆ ಮಾಳಿಗಿ ಶ್ರೀನಿವಾಸಾರ್ಯರ ವಂಶೀಕರು ಶ್ರೀ ದಾಸರಲ್ಲೆ ಬಂದು ಪ್ರಾರ್ಥನಗೈದು ಶ್ರೀ ವಿಜಯದಾಸರನ್ನು ತಮ್ಮ ಆಲಯಕೆ ವೈಭವದಿಂದ ಕರೆದುಕೊಂಡು ಹೋಗಿ, ಶ್ರೀ ವಿಠ್ಠಲ ದೇವರ ಪೂಜೆಮಾಡಿಸಿದರು. ದಾಸರು ಶ್ರೀ ವಿಠಲನ ಪೆಟ್ಟಿಗೆ ಬಿಚ್ಚಲು ಶ್ರೀ ವಿಠಲದೇವರಿಗೆ ಪೂಜೆಮಾಡಿದ ಹಸಿಯು ಕೇಶರ ಗಂಧ ಬಾಡದೇ ಇದ್ದ ನೂತನ ತುಲಸಿ ಹೂವುಗಳನ್ನು ನೋಡಿ ಜನರಿಗೆ ಅತ್ಯಾಶ್ಚರ್ಯವಾದಿತು. ಮಾಳಿಗಿ ಶ್ರೀನಿವಾಸಾರ್ಯ ದೇವಾಂಶರೂ ಅಪರೋಕ್ಷಿ ಜ್ಞಾನಿಗಳನಂತರ ಬಹು ದಿವಸವರೆಗೆ ಪೂಜಾಇಲ್ಲದಿರುವ ದೇವರನ್ನು ಶ್ರೀ ವಿಜಯದಾಸರಿಂದ ಪೂಜಾ ಮಾಡಿಸಿದರು. ಇದು ದಾಸರ ಮಹಿಮೆಯೆಂದು ತಿಳಿದು, ಪೂಜಾಭೋಜನನಂತರ ವಾದ್ಯವೈಭವದೊಡನೆ ದಾಸರಮುನಿಗೆ ತಂದು ಒಪ್ಪಿಸಿ ಕೃತಾರ್ಥರಾದರು. ( ಈ ಮಾಳಿಗಿ ಶ್ರೀನಿವಾಸಾರ್ಯರು ಯಾವ ಊರವರು ಗೊತ್ತಿಲ್ಲ ಮಾಳಿಗಿಯವರೆಂದು, ಕಲ್ಲೂರಿನಲ್ಲಿ ಒಂದು ರಾಯಚೂರಲ್ಲಿ ಒಂದು ಮನೆತನದ ಬ್ರಾಹ್ಮಣರಿರುವರು) ಇಂಥ ಮಹಾಮಹಿಮನಾದ ಶ್ರಿ ವಿಠ್ಠಲದೇವರನ್ನು ಶ್ರೀ ವಿಜಯದಾಸರು ಕೆಲವು ಕಾಲ ಪೂಜಾಮಾಡಿದರೆಂದು ದಾಸರ ತಮ್ಮಂದಿರಾದ ಹಯವದನ ವಿಠ್ಠಲರು ಹೇಳಿದ್ದಾರೆ.

"ಮೂಳಿಗಿ ಶ್ರೀನಿವಾಸಾರ್ಯರ ಕೈಯ್ಯ। ಮೇಲಾಗಿ ಪೂಜೆಗೊಂಬುವ ವಿಠಲನು। ಆ ಲಯಕೆ ಬರಲಾಗಿ ತಾಳಿಹರುಷದಿಂದ ಭೂಲೋಕದೊಳಗೆ ಯಾತ್ರೆ ಸಂಚರಿಸುತಲಿ ॥ ೪ ॥ (ಪದ ೭ ಪುಟ ೮) ಮತ್ತು ಮುಂದೆ ಪದ ೧೨ ರಲ್ಲಿ "ಎನ್ನ ಕುಲವೊಂದು ಪಾವನ್ನವಾಯಿತು. ಮನ್ನಿಸಿ ವಿಠಲ ಮನೆಗೆ ಬರಲಾಗಿ ॥ ಪಲ್ಲ ॥ ಹುಟ್ಟಿದಾರಭ್ಯನಾಕಷ್ಟ ಬಡುತಿರಲಾಗಿ। ಜೇಷ್ಠ ಭ್ರಾತೃವಿಗೆ ಮನಮುಟ್ಟಿಬಂದು। ಕಷ್ಟವನೆ ಪರಿಹರಿಸಿ ಇಷ್ಟಾರ್ಥವನೆಯಿತ್ತು। ಪಟ್ಟವನು ಕಟ್ಟಿ ವೈರಾಗ್ಯಭಾಗ್ಯದಲಿ" ॥ ಎಂದು ಸ್ತೋತ್ರಗೈದಿರುವರು. ಮತ್ತು ಶ್ರೀ ವಿಠ್ಠಲದೇವರ ಅನುಗ್ರಹದಿಂದ ಕಷ್ಟಪರಿಹಾರವಾಯಿತೆಂದು ಸೂಚಿಸಿದ್ದಾರೆ.

೨. ಧರ್ಮಕರ್ಮವಶಾತ, ಶ್ರೀ ವಿಜಯದಾಸರ ತಂದೆಗಳು ಶ್ರೀನಿವಾಸಪ್ಪನವರಿಗೆ ಮತ್ತು ದಾಸರ ಮುತ್ಯಾ ಈ ಉಭಯರಿಗೆ **ನಾಯಿಯ** ಜನ್ಮ ಬಂದಿತ್ತಂತೆ, ಶ್ರೀ ವಿಜಯದಾಸರು ಕಾಶಿಯಾತ್ರೆಗೆ ಹೋಗಿ, ಗಯಾ ವಿಷ್ಣುಪಾದದಲ್ಲಿ ಪಿತೃಗಳ ಉದ್ಧಾರಗೋಸುಗ ಪಿಂಡ ಪ್ರದಾನಮಾಡಿ ಶ್ರೀ ಗಯಾಗದಾಧರನಿಗೆ ಅರ್ಪಿಸಲು, ನಾಯಿ ಜನ್ಮದಿಂದ ಮುಕ್ತರಾಗಿ ಶ್ರೀ ವಿಜಯದಾಸರು ಅವರ ಅನುಜರಾದ ಹಯವದನ ವಿಠಲರಿಗೆ ದರ್ಶನಕೊಟ್ಟು ನಿಜಗತಿ ಐದದ ಚರಿತೆಯನ್ನು ಶ್ರೀ ಹಯವದನ ವಿಠಲರು ಶ್ರೀ ವಿಜಯದಾಸರ ಮಹಿಮೆಯನ್ನು ಪೊಗಳಿದ್ದಾರೆ. ದಾಸರು ಸಾಮಾನ್ಯರಲ್ಲ ಹಿಂದೆ ಭಗವದ್ಭಕ್ತನಾದ ಭಗಿರಥ ಮಹಾರಾಜನು ತಪಸ್ಸುಗೈದು ಮಹಾಪ್ರಯತ್ನದಿಂದ ಸುರಗಂಗೆಯನ್ನು ಭೂಲೋಕಕ್ಕೆ ತಂದು ತಮ್ಮ ಪೂರ್ವಜರನ್ನು ಉದ್ಧರಿಸಿದಂತೆ ದಾಸರ ತಮ್ಮ ಪೂರ್ವಜರನ್ನು ಉದ್ಧರಿಸಿದಂತೆ ದಾಸರು ತಮ್ಮ ಪಿತೃಗಳಿಗೆ ನಾಯಿ ಜನುಮ ಬಂದದೆಂದು ತಿಳಿದು ಗಯಾವರ್ಜನಿಮಾಡಿ ಪಿತೃ ಋಣದಿಂದ ಮುಕ್ತರಾಗಿ, ಪಿತೃಗಳನ್ನು ಉದ್ಧಾರಮಾಡಿದ ಮಹಾಪುರುಷರು. "ಭಗೀರಥರಾಯನು ಅಂದದಿ ಜಾನ್ಹವಿತಂದ ಬಲು ಆನಂದ। ವಿಗಡವಾಗಿ ಪೋದ ವಂಶೋದ್ಧಾರಕ ನೀತ ಅತಿಪ್ರಖ್ಯಾತ। ಭಗವಂತನ ಲೀಲೆ ಪರಿಪರಿಯಿಂದಲಿ ತಿಳಿದು ಮನದೊಳು ನಲಿದು" ಎಂದು ಪದ (೯) ರಲ್ಲಿ ಹೇಳಿರುವರಲ್ಲದೇ ಮತ್ತೂ "ಕಮಲನಾಭನ

ಪದಕೆ ಗಯದಲ್ಲಿ ಪಿಂಡವನು ಅಮಲ ಮನದಿಂದಲಿ ಹಾಕಲಾಗಿ। **ಮಮ ಪಿತಾ ಪಿತಾಮಹನು ನಾಯಾಗಿ ಜನಿಸಿರಲು ।** ಕ್ರಮದಿಂದ ಉದ್ಧಾರ ಮಾಡಿದ ಕಾರಣದಿಂದ" ಎಂದು ದಾಸರ ಮಹಿಮೆ ಪದ ೧೨ ನುಡಿ ೨ ಪುಟ ೧೨ ) ರಲ್ಲಿ ಸ್ತೋತ್ರ ಗೈದಿರುವರು. ಅಹೋ ದಾಸರ ದೂರ ದರ್ಶಿತ್ವ ತ್ರಿಕಾಲಜ್ಞತ್ವ, ವಂಶೋದ್ಧಾರಕತ್ವ, ಋಣಮೋಚಕತ್ವ, ಬಹು ಮಹತ್ವಗಳಾದವು ಇವು ಇತರೇ ಸಾಧಾರಣ ದೇವತೆಗಳಿಂದಲೂ ಅಸಾಧ್ಯವಾದವು. ಈ ಮಹಾತ್ಮೆ ಮೂರನೆ ಬಾರೆ ಕಾಶಿ ಯಾತ್ರೆಯಲ್ಲಿ ತೋರಿದ್ದೆಂದು ಕಾಣುತ್ತದೆ. ತಜ್ಞರು ಕಾಲವಿಚಾರ ಮಾಡಬಹುದು.

೩. ಮೂರನೆಬಾರಿ ಕಾಶಿಯಾತ್ರೆಗೆ, ಅತಿ ವೈಭವದೊಡನೆ ಶಿಷ್ಯ ಸಂಪತ್ತಿನಿಂದ ಹೊರಟರು. ಮಾರ್ಗದಲ್ಲಿ ಅನೇಕ ರಾಜರಿಂದ ಮನ್ನಣೆ ಗೊಳ್ಳುತ್ತ ಕಾಶಿಗೆ ಮುಟ್ಟಿಕೊಂಡು ಗಂಗಾಸ್ನಾನ ನಂತರ ಗಯಾ ವರ್ಜನೆಮಾಡಿಕೊಂಡು ಪುನಃ ಕಾಶಿಗೆ ಬಂದು ಕೆಲವುದಿನ ಅಲ್ಲೇ ಇದ್ದರು. ಆಗ್ಗೆ ಒಂದುದಿನ ಗಂಗಾತೀರದಲ್ಲಿ ದಾಸರು ಸ್ನಾನಮಾಡಿಕೊಂಡು ಊರ್ಧ್ವಪುಂಢ್ರ ಧರಿಸಿ ಅಹನ್ನೀಕಕ್ಕೆ ಕುಳಿತಿರುವ ಸಮಯ. ಗಂಗಾ ಪ್ರವಾಹ ಸುನೋಟ, ಸಾವಿರಾರುಜನಯಾತ್ರಿಕರ ಮಹೋತ್ಸವ. ಅನೇಕ ಭಕ್ತರು ದಾಸರನ್ನೇ ನೋಡುತ್ತಾರೆ. ಶ್ರೀ ಗಂಗಾದೇವಿಯು, ನಮ್ಮಪ್ಪನ ಪರಮಭಕ್ತರಾದ ಭೃಗುಋಷಿಗಳು ಇಂದು ಶ್ರೀ ವಿಜಯ ದಾಸರ ರೂಪಿನಲ್ಲಿ, ಎನ್ನ ಮನಿಗೆ ಬಂದಿರುವರು. ಎನ್ನ ಭಾಗ್ಯ ದೊಡ್ಡದು ನಾನು ಅವರಂಗಸಂಗದಿಂದ ಪುನೀತಳಾದೆ. ಇಂದು ಶ್ರೀ ವಿಜಯ ದಾಸರ ಸಂದರುಶಾನಂದ ಎನಗಾಗಲೆಂದು ಆನಂದದಿಂದ, ಗಂಗೆಯು ಉಕ್ಕೇರಿಬಂದು ದಾಸರ ಮೇಲೆ ಉದಕ ಪರಿಯಲು ದಾಸರು ಅಹನ್ನೀಕ ದಲ್ಲಿಯೇ ಕುಳಿತಿದ್ದರು. ವಸ್ತ್ರಗಳು ತೊಯ್ಯಲಿಲ್ಲ. ನಾಮ ಮುದ್ರೆಗಳು ಕೆಡಲಿಲ್ಲ. ಆಗ್ಗೆ ಗಂಗಾದೇವಿಯು ನದಿಪ್ರವಾಹದೊಳಗಿಂದ ಪ್ರತ್ಯಕ್ಷ ವಾಗಿ ಸುಂದರ ಸ್ತ್ರೀ ರೂಪದಿಂದ ಅಲಂಕೃತಳಾಗಿ ಸಾಕ್ಷಾತ್ತಾಗಿ ಶ್ರೀ ವಿಜಯದಾಸರ ಸಮೀಪಕ್ಕೆ ಬಂದು ಸಕಲ ಪೂಜಾ ಸಾಮಗ್ರಿಗಳಿಂದ ದಾಸರನ್ನು ಪೂಜಿಸಿ ಮನುಜವೇಷಧಾರಿಗಳಾದ ದಾಸರನ್ನು ಪೂಜಿಸಿದಳು.

ದಾಸರ ಸಂದರ್ಶನಾನಂದ ಹೊಂದುತ್ತ ಪುನಃ ಗಂಗಾದೇವಿ, ತಾನು ಬಂದಂತೆ ತಿರುಗಿ ಪೋದಳು. ಸಕಲ ಸಜ್ಜನಿರಿಗೆಲ್ಲ ದಾಸರು ಶ್ರೀ ಗಂಗಾದೇವಿಯ ಪ್ರತ್ಯಕ್ಷ ರೂಪವನ್ನು ತೋರಿಸಿ ಆನಂದ ಪಟ್ಟರು. ಯಾತ್ರಿಕರಾದ ಸಹಸ್ರಾರು ಭಕ್ತರಿಗೆಲ್ಲ ಆನಂದ ಇಂದು ದಾಸರ ಸಮಾಗಮದಿಂದ (ಮಚ್ಛೋದರಿಯಾದ) ಶ್ರೀ ಗಂಗಾದೇವಿಯ ಪ್ರತ್ಯಕ್ಷ ಸಂದರ್ಶನದಿಂದ ಹೆಚ್ಚಾದ ಪರವಣಿಕಾಲವೆಂದು ದಾಸರನ್ನು ಸಂದರ್ಶಿಸಿ ಆನಂದ ಮಗ್ನರಾಗಿ ಪುನೀತರಾದರು. ಅಹೋ ಏನೇಶ್ಚಾರ್ಯ–ತನ್ನ ಕಿಂತಲೂ ಉತ್ತಮರಾದ ಭಗವದ್ಭಕ್ತರು ಮನೆಗೆ ಬರಲು, ಭಕ್ತರಿಗೆ ಎಂಥ ಹೆಚ್ಚಿನ ಆನಂದ. ಶ್ರೀ ಗಂಗಾದೇವಿಯು ಕರ್ಮಜ ದೇವತೆಗಳ (೨೦) ನೇ ಕಕ್ಷದಲ್ಲಿದ್ದ ದೇವಿಯು ತನ್ನಕಿಂತಲೂ ಸಾವಿರಾರು ಗುಣ ದಿಂದ ಶ್ರೇಷ್ಠರಾದ ೧೫ ನೇ ಕಕ್ಷ ತತ್ವಾಭಿದೇವತೆಗಳ ಸಮಾನರಾದ ಭೃಗುಋಷಿಗಳೇ ಹಿಂದೆ ನವ್ಮೊಪ್ಪ ತ್ರಿಜಗದೊಡೆಯ ಸರ್ವೋತ್ತಮ ನೆಂದು ತೋರಿದ್ದಲ್ಲದೇ ಇಂದು ಅಜ್ಞಾನ ಮುಸುಕಿದ ಈ ಕಲಿಯುಗದಲ್ಲಿ ಮನುಜವೇಷವನ್ನು ಧರಿಸಿ ಅನೇಕ ಪದ ಸುಳಾದಿಕವನದಿಂದ ಶ್ರೀ ಹರಿಯೇ ಸರ್ವೋತ್ತಮನೆಂದು ಡಂಗುರ ಪೊಯ್ದು ಸಜ್ಜನರನ್ನು ಉದ್ಧಾರಮಾಡುವ ಭಕ್ತರ ಸಂದರ್ಶನಾನಂದ ಎನಗಾಯಿತೆಂದು ಮನ ಮುಟ್ಟಿ ಪ್ರತ್ಯಕ್ಷರೂಪ ತೋರಿದಳು. "ತೀರ್ಥೀಕುರ್ವಂತಿ ತೀರ್ಥಾನಿ" ಎಂಬುವ ವಚನವನ್ನು ಸತ್ಯಮಾಡಿ ತೋರಿದಳು. ಇದು ಹೆಚ್ಚಾದ ಪರವಣಿ.

ಅಂದು ದಾಸರ ಸಂಗದಿಂದ ಶ್ರೀ ಗಂಗಾದೇವಿಯ ಪ್ರತ್ಯಕ್ಷ ರೂಪ ನೋಡಿದವರೇ ಧನ್ಯರು. ಆಗ್ಗೆ ಶ್ರೀ ಗೋಪಾಲದಾಸರು ಮತ್ತು ಅವರ ಶಿಷ್ಯರೂ ಅನುಜರಾದ ಹಯವದನ ವಿಠಲರು ಪ್ರತ್ಯಕ್ಷದಾಸರ ಈ ಮಹಿಮೆ ಕಣ್ಣಾರೆನೋಡಿ ವರ್ಣಿಸಿದ್ದಾರೆ. "ಸ್ವಚ್ಛವಾಗಿ ಗಂಗಾ ತೀರ ವಾಸಮಾಡಿ ನಿಚ್ಚಾಗಿ। ಶ್ರೀ ವಿಜಯರಾಯ॥ ಹೆಚ್ಚಾದ ಪರ್ವಣಿ ಮಚ್ಛೋದರಿಯ ತೋರ್ದೆ ವಿಚಿತ್ರ। ವಿಜಯರಾಯ ॥೮॥ (ಪದ ಪದ ೧೯ ಪುಟ ೧೭) ಹೀಗೆ ಗೋಪಾಲದಾಸರು ಹೆಚ್ಚಾದ ಪರವಣಿ ಯಲ್ಲಿ ಮಚ್ಛೋದರಿ (ಮಚ್ಛವೆ ಉದರಉಳ್ಳಗಂಗಾ) ತೋರ್ದೆಎಂದು

ಸ್ತೋತ್ರ ಗೈದಿರುವರಲ್ಲದೇ ಶ್ರೀ ಹಯವದನ ವಿಠಲರು (ಪದ ೬ ಪುಟ ೯) "ತ್ರಿತಿಯ ಕಾಶಿ ಯಾತ್ರೆ ಮಾಡಬಂದಾಗ ಉನ್ನತವಾಗಿ ನಭಗಂಗೆ ಉಕ್ಕೇರಿ ಗಗನಕ್ಕೆ । ಅತಿಶಯದಿ ಬಂದು ಮಚ್ಚೋದರಿಯ ನಾಮದಲಿ । ಪ್ರತಿಯಿಲ್ಲದಂತೆ ತೋರೆ ॥ ನುತಿಸಿ ಅಲ್ಲಿಗೆ ಸೇತುಸ್ನಾನ ಗೈತಂದು । ರತಿಯಿಂದ ಮಾಡಿ ಸರ್ವರನ ಉದ್ಧರಿಸುತ್ತ । ಮಿತಿಯಿಲ್ಲದಲೆ ಕಾಶಿ ಸೇತುಪರಿಯಂತರ । ಕಥೆಯಿಂದ ಕೀರ್ತಿ ಪಡೆದು ॥ ೮ ॥ ಎಂದು ದಾಸರ ಮಹಿಮೆ ಪೊಗಳಿದ್ದಾರೆ. ಭಗವದ್ಭಕ್ತರಾದ ಅತಿಥಿಗಳು ಮನೆಗೆ ಬಂದರೆ ದೇವತೆಗಳೇ ಅವರಲ್ಲಿ ನಿಂದು ಬಂದಿರುವರೆಂದು ಅಲ್ಲಗಳಿಯದೇ ಭಕ್ತಿ ಯಿಂದ ಅತಿಥಿ ಪೂಜಾ ಮಾಡಿ ಸತ್ಕರಿಸಿದರೆ ಶ್ರೀ ಹರಿಯೊಲಿಯುವ. ದೇವತೆಗಳು ಮಾನವರಾಗಿ ಜನಿಸಿದಾಗ್ಯೂ ದೇವತೆಗಳಿಂದ ಪೂಜ್ಯರು. ದೇವತೆಗಳು ತುಷ್ಟರಾಗಿ ಪ್ರತ್ಯಕ್ಷದರ್ಶನ ಕೊಡುವರು.

## ೪ ತುಂಗಾತೀರದಿ, ಗಂಗೆ ಉಕ್ಕೇರಿ ಬಂದ ಮಹಿಮೆ

ಶ್ರೀ ವಿಜಯದಾಸರು ಉತ್ತರ ದಕ್ಷಣ ಯಾತ್ರೆ ಮುಗಿಸಿಕೊಂಡು ಚೀಕನಬರಿವಿಗೆ ಬಂದರು. ತುಂಗಾ ತೀರ ಅಶ್ವಥ್ಥನರಸಿಂಹದೇವರ ಸನ್ನಿಧಿ. ಸ್ನಾನಾನ್ಹೀಕ ಮಾಡಿ ಕುಳಿತಾರೆ. ಶರದೃತು, ಹೈಮಂತ ಋತುಗಳ ಸಂಗಮ ಕಾಲ. ನದಿಯ ಜಲ ನಿರ್ಮಲವಾಗಿ ಹರಿಯುತ್ತದೆ. ದಾಸರು ಪ್ರಸನ್ನ ಚಿತ್ತದಿಂದ ಶ್ರೀ ಹರಿಧ್ಯಾನವನ್ನು ಮಾಡುತ್ತ ಕುಳಿತಿರುವರು. ಶ್ರೀ ಮಾನಸದಲ್ಲಿ ಪೂಜಾನಡೆದದೆ. "ತತ್ಪಾದಸಲಿಲಾಂ ಗಂಗಾಂ ನಿಪತಂತಿಸ್ವಮೂರ್ದ್ನಿನಿಂ" ಎಂದು ಮಾನಸ ಸ್ನಾನಗೈಯ್ಯುತ್ತಾ ಇಡಾ ಭಾಗೀರಥೀ ಪ್ರೋಕ್ತಾಪಿಂಗಳಾಯಮುನಾ ಸ್ಮೃತಾ । ತಯೋರ್ಮ ಧ್ಯೇಗತಾನಾಡಿಸುಷು ಮ್ನಾಖ್ಯಾ–ಸರಸ್ವತೀ" ಎಂದು ಧೇನಿಸುತ್ತಾರೆ. ಅಂತರಂಗ ಸ್ತೋತ್ರಕ್ಕೆ ಗಂಗೆಯು ತುಷ್ಟಳಾದಳು. (ಹೈಮಂತ ಶೈಶಿರ ಋತುವಿನಲ್ಲಿ ನದಿಯು ಬರುವ ಕಾಲವಲ್ಲ) ಆ ಕಾಲದಲ್ಲಿ ಗಂಗಾದೇವಿ ತುಂಗಾದಲ್ಲಿ ಪ್ರವೇಶ ಮಾಡಿದಳು. ಏಕಕಾಲದಲ್ಲಿ ತುಂಗಾ ಜಲದಿಂದ ಭಿನ್ನ ಅತಿಶುಭ್ರವರ್ಣದ ಗಂಗೆಯ ಉದಕವು ಉಕ್ಕೇರಿ ಬಂದವು. ಅಶ್ವಥ್ಥನೃಸಿಂಹದೇವರ ಪಾದಾಭಿಷೇಕ ಮಾಡಿದಳು. ಉಕ್ಕೇರಿದ ಜಲ ದಾಸರಿಗೆ ಅಭಿಷೇಕ ಮಾಡುವಳೋ ಎಂಬ ತೆರನಾಗಿ ತೋರಿತು.

ಜನರು ಗಾಬರಿಯಾಗಿ ಆಕಸ್ಮಿಕ ನದಿಯು ಉಕ್ಕೇರಿ ಬಂದಿತು. ಧ್ಯಾನಕ್ಕೆ ಕುಳಿತ ದಾಸಾರ್ಯರು ನದಿಗೆ ಹರಿದು ಹೋಗುವರೇನೋ ಎಂಬ ಭಯದಿಂದ ನೂರಾರು ಜನರು ಕಲೆತರು. ದಾಸರನ್ನು ನೋಡಿ, ಅತಿ ವಿಸ್ಮಿತರಾದರು.

ಆಗ್ಗೆ ಶ್ರೀ ಹರಿಭಕ್ತರಾದ ದಾಸವರ್ಯರು ಶ್ರೀ ಗಂಗಾದೇವಿಯನ್ನು ಆದರಿಸಿ ಇಂದು ನಮ್ಮೂರಿಗೆ ತುಂಗೆಯಲ್ಲಿ ಪ್ರಾದುರ್ಭೂತಳಾದೆಮ್ಮ ಎಂದು, ಅನೇಕ ಪೂಜಾ ಮರದ ಬಾಗಿಣಗಳನ್ನು ಮುತ್ತೈದಿಯರಿಂದ ಕೊಡಿಸಿ ಸಮಾರಾಧನೆಮಾಡಿ ತುಂಗೆಯಲ್ಲಿ ಗಂಗೆ ಉಕ್ಕೇರಿ ಬಂದದುದನ್ನು ಜನರಿಗೆ ತೋರಿಸಿದರು. ಇದಕ್ಕೆ ಶ್ರೀ ಗೋಪಾಲ ದಾಸರು, "ತುಂಗಾತೀರದಿ ಕುಳಿತು ಮೇಲಕೆ ಉದಕ ಗಂಗೆ ಉಕ್ಕಿಸಿ ತೋರ್ದೆ | ವಿಜಯರಾಯ" ನೆಂದು ಸ್ತೋತ್ರಗೈದಿದ್ದಾರೆ. (ಪದ ೨೦ ನುಡಿ ೯ ಪುಟ ೧೭).

**೫- " ಅಂಗದ ಮುಸುಕು ತೆಗದನೋ ಕ್ಷೇತ್ರದಿ ಪಾಂಡುರಂಗ |** ವಿಜಯರಾಯ || ಗೋಪಾಲ ವಿಠಲರು" ಹಿಂದೆ ಹೇಳಿದಂತೆ ಶ್ರೀ ಹರಿಯು ಭಕ್ತರಿಗೆ ತೋರಿದ ಲೀಲೆ ಇದೊಂದು. ಈ ಐತಿಹ್ಯ ನಾನಾವಿಧವಾಗಿ ಹೇಳುತ್ತಾರೆ. ದಾಸರು ತುಂಗಾತೀರದಲ್ಲಿದ್ದಾಗ್ಗೆ ಕೆಲವರು ಶ್ರೀ ಪಾಂಡುರಂಗಕ್ಷೇತ್ರ ಸಂದರ್ಶನಕ್ಕೆ ಹೋಗಿದ್ದರು. ದಾಸರು ಪಂಢರಪುರಕ್ಕೆ ಹೋಗಿರಲಿಲ್ಲ. ಉತ್ಸವ ಕಾಲದಲ್ಲಿ ಸಾಂಶರಾದ ದಾಸರು ತಮ್ಮ ಯೋಗ ಶಕ್ತಿಯಿಂದ ಪಂಢರಪುರಕ್ಕೆ ಹೋದರು. ತುಂಗಾತೀರದಿ ಇದ್ದವರು ಇಲ್ಲೆ ಇದ್ದರು. ಎರಡು ಕಡೆಗೆ ಒಂದೇ ಕಾಲದಲ್ಲಿ ಜನರಿಗೆ ಸಂದರ್ಶನಕೊಟ್ಟ ಮಹತ್ಮರಿವರು. ತುಂಗಾತೀರದಲ್ಲಿದ್ದ ಭಕ್ತ ಜನಕ್ಕೆಲ್ಲ ತಮ್ಮ ಯೋಗಬಲದಿಂದ ಪಾಂಡುರಂಗ ವಿಠಲನ ಗರ್ಭಗುಡಿಗೆ ಹಾಕಿದ ಮುಸುಕು (ಪರದೆ) ತೆಗೆದು ಇಲ್ಲಿ ಜನರಿಗೆಲ್ಲ ದರ್ಶನ ಮಾಡಿಸಿದರು. ಅಲ್ಲಿ ಪಂಢರಪುರದಲ್ಲಿಯೂ, ಇಲ್ಲಿಂದ ಯಾತ್ರೆಗೆ ಹೋದ ಜನರು ದಾಸರು ನಮ್ಮೊಡನೆ ಬರಲಿಲ್ಲವಾದರೂ ಉತ್ಸವಕಾಲ ದಯಪಾಲಿಸಿದ್ದಾರೆ. ಒಳ್ಳೆ ಸುಕಾಲವೆಂದು ದಾಸರಿಗೆ ನಮನಾದಿಗಳನ್ನು ಮಾಡಿದರು.

ಅಲ್ಲಿ ಪಂಢರಪುರದಲ್ಲಿ ಏನೋ ಪ್ರತಿಬಂಧಕ ಭಡವೇರು ಪಾಂಡು ರಂಗನ ದರ್ಶನಕ್ಕೆ, ಕಾಲಕ್ಲಪ್ತದಲ್ಲಿ ಅವಕಾಶ ಕೊಡಲಿಲ್ಲ. ಶ್ರೀ ವಿಜಯದಾಸರು ನಿಂದು ಶ್ರೀ ಪಾಂಡುರಂಗನ ನಾನಾ ವಿಧವಾದ ಸ್ತೋತ್ರ ಮಾಡಲು, ಹಾಕಿದ್ದ ಪರದೆ ತನ್ನಿಂದತಾನೆ ತೆರೆಯಿತು. ಶ್ರೀ ಪಾಂಡು ರಂಗನು ದಾಸರಿಗೆ ದರ್ಶನ ಕೊಟ್ಟನು. ಕೆಲ ಭಕ್ತಜನರು ಸಂದರ್ಶನಾ ನಂದವನ್ನು ಹೊಂದಿದರು. ವಿಠ್ಠಲನ ಅರ್ಚಕರಾದ ಭಡವೆ ಜನರಿಗೆ ಅತ್ಯಾಶ್ಚರ್ಯವಾದಿತು ದಾಸರನ್ನು ಕೊಂಡಾಡಿದರು.

## ೬ ಹೀಗೆಯೇ ವೆಂಕಟಗಿರಿಯಲ್ಲಿಯೂ ಮಹತ್ವ

ತಾವು ಉತ್ಸವಕ್ಕೆ ಹೋಗದೇಇದ್ದರೂ ಯೋಗ ಸಾಮರ್ಥ್ಯದಿಂದ ಶ್ರೀ ವೆಂಕಟೇಶನ ರಥೋತ್ಸವಕ್ಕೆ ಹೋಗಿ ದೇವರ ದರ್ಶನ ಮಾಡಿದ್ದಾರೆ. ಭಕ್ತವೃಂದ ಉಭಯರು ಮಿಳಿತರಾದಮೇಲೆ ಈ ವೃತ್ತಾಂತ ತಿಳಿದು ದಾಸರು ಮಹಾ ಮಹಿಮರೆಂದು ಕೊಂಡಾಡಿದ್ದಾರೆ.

೭ ಸದಾ ಭಕ್ತರನ್ನು ಉದ್ಧರಿಸಲು ಸದಾಚಾರ ವೃತ್ತಿಯಲ್ಲಿ ದೇಶ ಸಂಚರಿಸುತ್ತ, ಶಿಷ್ಯಜನರಿಗೆ ಮೃಷ್ಟಾನ್ನ ಭೋಜನಮಾಡಿಸುತ್ತ ನಿತ್ಯ ಅನ್ನದಾನಗಳನ್ನು ಮಾಡುವರಲ್ಲದೇ, ಬಂಜೆಯರಿಗೆ ಪುತ್ರೋತ್ಸವವಾಗು ವಂತೆ ಅನುಗ್ರಹಿಸಿದರು.

೮ ಮತ್ತು ಬ್ರಾಹ್ಮಣ ಧರ್ಮಕ್ಕೆ ಅನುಕೂಲವಾದ ಕಾಲಕ್ಕನು ಸರಿಸಿ ಎಷ್ಟೋ ಜನ ಬಡ ಬ್ರಾಹ್ಮಣ ಬಾಲಕರಿಗೆ ಮುಂಜಿವಿ ಮಾಡಿ, ಗಾಯತ್ರೀಮಂತ್ರವಾದ ಬ್ರಹ್ಮೋಪದೇಶವನ್ನು ಮಾಡಿದರು. ಪೂರ್ವ ಕಾಲದಲ್ಲಿ ಬ್ರಹ್ಮ ಪ್ರತಿಷ್ಠೆಯು ಬ್ರಾಹ್ಮಣರಿಗೆ ಮುಖ್ಯ ಧರ್ಮವಾಗಿತ್ತು.

೯ ಅನೇಕ ಬಡ ಜನರಿಗೆ ಲಗ್ನಮುಹೂರ್ತಾದಿಗಳನ್ನು ಮಾಡಿ ಲೋಕದಲ್ಲಿ ಸತ್ಕೀರ್ತಿ ಪಾರತ್ರಿಕದಲ್ಲಿ ಆನಂದ ಪಡೆದರು. ಆ ಕುಟುಂಬಿಕರನ್ನು ಸನ್ಮಾರ್ಗಕ್ಕೆ ಹಚ್ಚಿ ಉಪದೇಶಗೈದು ಉದ್ಧರಿಸಿದರು.

೧೦ ರಾಜಾಧಿರಾಜರು ಬಂದು ಪ್ರಾರ್ಥನೆ ಮಾಡಲು ಗುರುರಾಜ ರಾದ ಶ್ರೀ ವಿಜಯದಾಸರು ಅವರ ಮನೆಗೆ ಪೋಗಿ ಶ್ರೀ ಹರಿಯ ಅರ್ಚನೆ ನೈವೇದ್ಯ ಮಾಡಿದ ದಿವ್ಯ ಪ್ರಸಾದವನ್ನು ಭುಂಜಿಸಿ ಅವರಿಗೆ

ಫಲವನ್ನು ಕೊಡುವರು. ಹೀಗೆ ಅನೇಕ ಸಲ ಮಾಡಿರುವರು. ದಕ್ಷಿಣ ದೇಶದಿ ವಿಜಯನಗರ ವೈಶಾಖಪಟ್ಟಂ ಗೋದಾವರಿ ಜಿಲ್ಹೆಯ ಜಮೀನ ದಾರರು ದಾಸರ ಮಹಿಮಾ ಕೇಳಿ ನೋಡಿ, ಪದಕೆರಗಿ ಆಮಂತ್ರಣವಿತ್ತು ಕರೆತಂದು ದಾಸರಿಗೆ ರಾಜಮರ್ಯಾದೆಗಳನ್ನು ಮಾಡಿದ ಇತಿಹಾಸ ಹಿರಿಯರಿಂದ ಕೇಳುತ್ತೇವೆ. ಇದಕೆ ಪದ ೨೬ ನುಡಿ (೩) ಮೋಹನ ದಾಸರ ಮೇಲಿನ ಉಕ್ತಿಗೆ ಆಧಾರವಾಗಿದೆ. " ಅರಸರಸಾರಿನ್ನು ಕಿರಿನ ಖಾಗ್ರದಲ್ಲಿಪ್ಪರು ".

೧೧ ಒಬ್ಬ ಬಡ ಭಕುತಗೆ ಕ್ಲೇಶ ಒದಗಿತ್ತು. ಆ ಭಕ್ತನ ಕಷ್ಟ ಪರಿಹಾರಗೋಸುಗ " ಶ್ರೀ ಉಡುಪಿ ಶ್ರೀ ಕೃಷ್ಣದೇವರ ಸ್ತೋತ್ರಗೈದು ಬಡ ಭಕುತನ ಕ್ಲೇಶ ಕಳದಿದ್ದಾರೆ. ಹೇ ಸ್ವಾಮಿ ಉಡುಪಿ ಕೃಷ್ಣ ಈ ಸಂಪತ್ತು ನಿನಗೆ ಹೊಸದಾಗಿ ಬಂದದೆ ಕಾರಣ ನೀನು ಬಿಂಕದಲ್ಲಿರುವಿ, ಹಿಂದೆ ಗೋಕುಲದಲ್ಲಿ ಗೋಪಾಲಕರಿಂದ ಹಾಲು ಮೊಸರು ಕದ್ದು ಎಂಜಲಉಂಡದ್ದು ಮರೆತೆಯಾ ? ಈಗ ಕಾಲಕಾಲಕೆ ಷಡುರಸಾಯನ ಭೋಜನಮಾಡಿ ಪೊಟ್ಟೆಯ ಪೊರೆವ ನಿನ್ನದೇನು ಹೆಚ್ಚಿನ ಸಂಪತ್ತೋ ? ಹಿಂದೆ ಪಳ್ಳಿಯಲ್ಲಿ ಕಂಡಕಂಡವರ ಕೈಯಲಿ ಹಳಹಳ ಎನಿಸಿಕೊಂಡು ಬೈಸಿಕೊಂಡ ಭಂಡಾಟವನ್ನು ಮರದಿಯಾ ? ಈಗ ನಾನಾ ವಿಧವಾದ ವೈಭೋಗವಾಹನ, ಭೃತ್ಯರು ಕರಮುಗಿದು ಕೊಂಡಾಡುವ ಭರದಲ್ಲಿ ಮರೆತಿಯಾ ? ಹಿಂದೆ ಮತಿಹೀನನಾದ ಜರಾಸಂಧಗೆ ಅಂಜಿ ಓಡಿಹೋಗಿ ಸಮುದ್ರದೊಳಗೆ ದ್ವಾರಕಾಪುರ ಕಟ್ಟಿಕೊಂಡಿದ್ದು ಮರೆತೆ ಏನೋ ? ಈಗ ಪ್ರತಿನಿತ್ಯವೂ ಸದ್ಭಕ್ತಿಯುಳ್ಳ ಶುದ್ಧಾತ್ಮರಾದ ಯತಿಗಳಿಂದ ಪೂಜಾ ಕೊಳ್ಳುವ ಸಂಭ್ರಮವೊ ? ಹೇ ಕೃಷ್ಣ ನಿನಗೆ ಈ ಉಡುಪಿಯಲ್ಲಿ ನಡೆ ಯುವ ಸಂಪತ್ತು ಸ್ಥಿರವೇನು ? ಈ ವೈವಸ್ವತ ಮನ್ವಂತರ ಪರಿಯಂತರ ಮಾತ್ರಕ್ಕೆ ನಿನಗೆ ಈ ಸ್ಥಳದಿ ವೈಭೋಗವೆಂದು ಜ್ಞಾನಿಗಳು ಪೇಳುವರು. ಈ ಉಡುಪಿನ ಸ್ಥಾನ ನೆಚ್ಚಿಕೆಯಲ್ಲ ಇಂಥ ಮಹಾ ಸಂಭ್ರಮದಲ್ಲಿ ಬಡ ಭಕುತರನ್ನು ಮರೆಯಬೇಡ ಭಕುತರ ಕ್ಲೇಶ ಕಳಿಯದಿರಲು ಭಕ್ತ ವತ್ಸಲನೆಂಬೊ ಬಿರಿದು ಸುಳ್ಳಾಯಿತೆ ? ಮುಕುತಿ ಪ್ರದಾಯಕನಾದ ಶ್ರೀ ವಿಜಯವಿಠಲ ವೈರಾಗ್ಯತಾಳಿ ಸುಮ್ಮನೆ ಇದ್ದರೆ ನಿನಗೆ ಕೀರ್ತಿ ಬರುವ

ದಿಲ್ಲ. ನಿನ್ನ ಸಂಪತ್ತಿನ ಮದದಲ್ಲಿ ಭಕ್ತರನ್ನು ಕಾಪಾಡೆಂದು ಪ್ರಾರ್ಥಿಸಿದ್ದಾರೆ. ಅಹೋ ಈಶನಲ್ಲಿ ದಾಸರಿಗಿರುವ ಸಥೆ ಎಂತು? ಹೀಗೆ ತುತಿಸಿ ಭಕ್ತರ ಕ್ಲೇಶಗಳನ್ನು ಕಳೆದಿರುವರು ಪದ ೨೫ ಪ್ರಕಟನೆ ೧೩ ರಲ್ಲಿ "ಸಂಪತ್ತು ನಿನಗಿಂದು ಪೊಸದಾಯಿತೆಂಬ ಪದ ನೋಡಿರಿ.

೧೨ ಒಬ್ಬ ಬ್ರಾಹ್ಮಣನು ಒಂದೆಡೆ ಸರಸವಾಗಿ ಪುರಾಣ ಹೇಳುತ್ತಾನೆ. ಆತನು ಭಗವದ್ಭಕ್ತನು ಮುಕ್ತಸ್ಥಾನವಾದ, ವೈಕುಂಠದಲ್ಲಿ ಇರುಬೆ ಲಳ ಲಕ್ಷಯೋನಿ ಮುಕ್ತಿಯೋಗ್ಯ ಜೀವರುಂಟು. ಅವರಿಗೆಲ್ಲ ಶ್ರೀ ಹರಿನಿಯಾಮಕನಾಗಿ ಆನಂದ ಕೊಡುವನು. ಎಂದು ಮುಕ್ತಜೀವರನ್ನು ವರ್ಣಿಸುತ್ತ ಹೇಳುವ ಕಾಲ ಆದಿನ ಆಕಸ್ಮಿತವಾಗಿ ಶ್ರೀ ಗೋಪಾಲ ದಾಸರು ಶ್ರೀ ವಿಜಯದಾಸರು ಪುರಾಣ ಕೇಳಲು ಕುಳಿತಿದ್ದರು. ಆಗ್ಗೆ ಪುರಾಣಿಕ ಬ್ರಾಹ್ಮಣನಿಗೆ ಮುಕ್ತಿಯಲ್ಲಿ ನಾನು ಯಾವ ಜೀವನಿರಬಹುದೆಂಬ ಸಂಶಯ ಉಂಟಾದಿತು. ಆಗ್ಗೆ ಪುರಾಣಿಕನು ಶ್ರೀ ವಿಜಯರಾಯರ ಕಡಿಗೆ ಮುಖತಿರುಗಿ ಶ್ರೀ ವಿಜಯದಾಸರೆ ಮುಕ್ತಿಯಲ್ಲಿ ಎನ್ನ ನಿಜ ಸ್ವರೂಪವೇನಾಗಿರಬಹುದೆಂದು ಸಂಶಯ ಸೂಚಿಸಿದನು. ಶ್ರೀ ದಾಸರು ಗೋಪಾಲದಾಸರಿಗೆ ಪ್ರೇರಿಸಲು ಅವರು ನೀನು ಮುಕ್ತಿಯಲ್ಲಿ "ಕಾಗಿ" ಯಾಗಿರುವಿ ನಿನ್ನದು ನಿಜಸ್ವರೂಪ ಕಾಕರೂಪವೆಂದು ಹೇಳಿದರು. ಆಗ್ಗೆ ಪುರಾಣಿಕನು ಬಹು ಖಿನ್ನ ಮನಸ್ಕನಾಗಿ ಅಯ್ಯೊ ನನ್ನ ನಿಜಸ್ವರೂಪವು ಕೆಟ್ಟಕಾಗಿಯೆ? ಎಂದು ಮತ್ತೂ ಮನದಲ್ಲಿ ಕಳವಳಗೊಂಡನು. ಆಗ್ಗೆ ವಿಜಯದಾಸರು ಗೋಪಾಲದಾಸರು ಬಹು ಸತ್ಯವಾಗಿ ಹೇಳಿರುವದು ನಿಜ. ಸಂಶಯ ಬೇಡ ನೀನು ಸತ್ವ ಜೀವನಾದ ಮುಕ್ತಕಾಕ ನಿನ್ನ ನಿಜ ಸ್ವರೂಪ ನಿಜವೆಂದು ಹೇಳಿದರು.

"ದ್ವಿಜನು ವಿಜಯರಾಯರನು ತನ್ನ ನಿಜ ಸ್ವರೂಪವ ಕೇಳ್ದನು. ಸುಜನ ಶಿರೋಮಣಿ ಮುಕ್ತಿಯಲಿ ಕಾಕ ನಿಜವೆನುತ ಸ್ತುತಿ ಮಾಡ್ದನು ‖ ೫೭ ‖ ನುಡಿದ ವಚನವ ಕೇಳಿ ವಿಪ್ರನು ಮಿಡುಕಿದನು ಬಲು ಮನದಲಿ ‖ ಸಡಗರದಿ ಗುರು ವಿಜಯರಾಯರು ಧೃಡಪೇಳಿಹ ನಿಜವೆನುತಲಿ ‖ ೫೮ ‖ **ತಂದೆ ಗೋಪಾಲವಿಠಲರ ವಚನ** ಗೋಪಾಲದಾಸರ ಚರಿತ್ರೆ ಪದದಲ್ಲಿ.

ಅಹೋ ದಾಸರ ಮಹಿಮೆ ದೂರದಿರ್ಶಿತ್ವ, ಅವರಿಂದ ಜೀವರ ಸ್ವರೂಪಯೋಗ್ಯತೆ ತಿಳಿಯುವಿಕೆ ಅವರ ಜ್ಞಾನ ಮಹತ್ತರವಾದವು. ಇವೆಲ್ಲ ತತ್ವಾಭಿಮಾನಿ ದೇವತೆಗಳ ಸಂಪದ ವೈಭೋಗಜ್ಞಾನವು ಹೀಗೆ ಗೋಪಾಲದಾಸರ ದ್ವಾರಾ ಕೆಲ ಮಹಿಮೆ ತೋರಿದರು.

## ೧೩ ಶ್ರೀ ವಿಜಯದಾಸರ ದೂರದರ್ಶಿತ್ವ

ಶ್ರೀ ಗೋಪಾಲದಾಸರು ಉಡುಪಿ ಯಾತ್ರೆಗೆ ಹೋಗುವಾಗ್ಗೆ ಮೊಂಡಗದ್ದಿ ಭೀಮರಾಯನೆಂಬೊ ಮಹಾಕಳ್ಳನು ಹಾದಿಯಲ್ಲಿ ಜನರನ್ನು ಸುಲಿದು ಉಪದ್ರವ ಕೊಡುತಿದ್ದನು. ಮುಂದೆ ಗೋಪಾಲದಾಸರಿಗೆ ಇವನು ಉಪದ್ರವ ಕೊಡುವನೆಂದು ತಿಳಿದ ದೂರ ದರ್ಶಿಗಳಾದ ಶ್ರೀ ವಿಜಯರಾಯರು ದೇವರನ್ನು ಪ್ರಾರ್ಥಿಸಿ ಒಂದು ಉಗಾಭೋಗವನ್ನು ಮಾಡಿ ಕೊಟ್ಟರು. ಉಗಾಭೋಗ–

ಒಂದು ಕೈಯಲ್ಲಿ ಖಡ್ಗ। ಒಂದು ಕೈಯಲ್ಲಿ ಹಲಿಗೆ ಅಂದವಾಗಿ ಪಿಡಿದುಕೊಂಡು ದಿವಾ ರಾತ್ರಿಯಲಿ। ಬಂದು ಬದಿಯಲ್ಲಿ ನಿತ್ಯ ಬಾರಾ ಸನನಾಗಿ। ಹಿಂದುಮುಂದುಪದ್ರವವಾಗದಂತೆ। ಇಂದಿರೇ ರಮಣ ಕಾಯುತ್ತಲಿರೆ। ಯನ (ನಿನ) ಗಾವ ಬಂಧಕಗಳು ಇಲ್ಲ। ಧನ್ಯ ಧನ್ಯ ಕಂದರ್ಪನ್ನೈಯ್ಯಸಿರಿ ವಿಜಯವಿಠ್ಠಲರೇಯ ದೇವ ಆಪತ್ತು ಬರಲೀಯ ನೋಡಿ ॥೧॥ ಈ ಉಗಾಭೋಗವನ್ನು ಪಠಿಸುತ್ತ ಉಡುಪಿಗೆ ಪ್ರಯಾಣ ಮಾಡಿರೆಂದು ಯಾತ್ರೆಗೆ ಅಪ್ಪಣೆಕೊಟ್ಟು ಗೋಪಾಲದಾಸರನ್ನು ಕಳುಹಿಸಿದರು. ನಿತ್ಯ ಈ ಉಗಾಭೋಗ ಪಠಿಸುತ್ತ ನಡೆದಿದ್ದರು. ಆಗ್ಗೆ ಹಾದಿಲಿ ಮೊಂಡಗದ್ದಿ ಎಂಬ ಗ್ರಾಮ ವಸತಿಯಾಯಿತು ಮುಂದಿನ ಮಾರ್ಗ ಬಲು ಕಠಿಣ ಅಲ್ಲಲ್ಲೆ ಗಂಡಿಗಳು ಕಳ್ಳರಿಗೆ ಸುಲಿಯಲು ಅನುಕೂಲ. ಆಗ್ಗೆ ದಾಸರು ಆ ಕಠಿಣ ಮಾರ್ಗದಲ್ಲಿ ಉಗಾಭೋಗವನ್ನು ಪಠಿಸುತ್ತ ಪ್ರಯಾಣ ಬೆಳಸಿದ್ದಾರೆ. ಮೊಂಡಗದ್ದೆಯ ಭೀಮನೆಂಬುವನು ಗೋಪಾಲದಾಸರ ವೈಭೋಗ ಸಂಪತ್ತು ಕಳ್ಳತನದಿಂದ ಸುಲಿಯು ಬೇಕೆಂದು ಮೂರು ಚೋರ ಮಾರ್ಗದಲ್ಲಿ ಪ್ರಯತ್ನ ಪಟ್ಟನು. ಶ್ರೀ ಹರಿಯು ಹಿಂದು ಮುಂದೆ ಎಡ ಬಲ ಮೇಲೆ ನಾನಾ ರೂಪಧರಿಸಿ

ಕಾಯುತ್ತಾನೆ. ಒಂದು ಕೈಯಲ್ಲಿ ಖಡ್ಗ ಢಾಲು ಮತ್ತೊಂದು ಕೈಯಲ್ಲಿ ಬಾರುಮಾಡಿದ ಮದ್ದುಗುಂಡು ಹಾಕಿದ ತುಬಾಕಿ (ಬಂದೂಕು) ಹಿಡಿದು; ಗೋಪಾಲದಾಸರೂ ಅವರ ಪರಿವಾರವನ್ನು ರಕ್ಷಿಸುವದನ್ನು ನೋಡು ತ್ತಾನೆ. ಸುಲಿಯುವೆನೆಂದರೆ ದಾಸರು ಶಿಷ್ಯಸಹಿತವಾಗಿ ಕಣ್ಣಿಗೆ ಕಾಣ ದಾದರು. ಹೀಗೆ ಮೂರೂ ಗಂಡಿಯಸ್ಥಳದಲ್ಲಿಯೂ ಸುಲಿಯುವ ಪ್ರಯತ್ನ ಮಾಡಿದನು. ದಾಸರು ಸಿಗಲೊಲ್ಲರು ಇವರನ್ನು ರಕ್ಷಕನನ್ನಾಗಿ ಕಾಪಾಡುವನನ್ನು ಮಾತ್ರ ಕಂಡು ಕಾಣದಂತೆ ಸುಲಿಯಲಿಕ್ಕೆ ಅಸಮರ್ಥ ನಾಗಿ ಮುಂದೆ ಸರಳವಾಗಿ ಸಾಗುವ ಮಾರ್ಗದಲ್ಲಿ ಬಂದು ಶ್ರೀ ಗೋಪಾಲದಾಸರಿಗೆ ನಮಸ್ಕಾರ ಮಾಡಿ ಉದ್ಧರಿಸಬೇಕೆಂದು ಕೇಳಿ ಕೊಂಡನು. ಆಗ್ಗೆ ಶ್ರೀ ಗೊಪಾಲದಾಸರು ಶ್ರೀ ವಿಜಯರಾಯ ಗುರು ಗಳ ಪಾದಸ್ಮರಿಸಿ, ದೇವರು ಆಪತ್ತಿನಿಂದ ಗುರುದ್ವಾರಾ ರಕ್ಷಿಸಿಡನು. ಇವನು ಮುಕ್ತಿ ಯೋಗ್ಯನೆಂದು ತಿಳಿದು ಆ ಮೊಂಡಗದ್ದಿ ಭೀಮರಾಯ ನನ್ನು ಉದ್ಧರಿಸಿದರು. ಆದಿನಿಂದ ಆ ಭೀಮನು ಪ್ರಚಂಡ ಕರ್ಮವಾದ ಕಳ್ಳತನ ಮಾಡುವದು ಬಿಟ್ಟನು. ತಂದೆ ಗೋಪಾಲವಿಠಲರು ಶ್ರೀ ಗೋಪಾಲವಿಠಲರ ಸ್ತೋತ್ರದಲ್ಲಿ " ಉಡುಪಿ ಕೃಷ್ಣನ ದರುಶನಕೆ ಆಜ್ಞಾ ಕೊಡಬೇಕೆನುತಲಿ ಕೇಳ್ದನು ॥ ತಡವ್ಯಾಕೆನುತಲಿ ಸ್ತುತಿಯಮಾಡಿ ಕೊಡುತ ಪೋಗಿ ಬಾರೆಂದನು ॥ ೩೨ ॥ ಮುಂಡಗದ್ದಿಯ ಭೀಮನೆಂಬುವ । ಕಂಡು ಪೂಜಿಸಿ ಕಳುಹಿದಾ ॥ ಗಂಡಿತ್ರಯದಿ ಸುಲಿಯಲು ಸಿಗದಿರೆ । ದಂಡನಮಿಸೆ ಉದ್ಧರಿಸಿದಾ ॥ ೩೩ ॥ ಹೀಗೆ ದೈವಾನುಗ್ರಹ ಬಲದಿಂದ ಭಕ್ತರನ್ನು ಆಪತ್ತಿನಿಂದ ರಕ್ಷಿಸಿದ ಮಹಾತ್ಮರಾದ ವಿಜಯದಾಸರು ಹಿಂದೆ ಪುಟ ೫೯-೬೦ ರಲ್ಲಿ ಕೊಟ್ಟಂತೆ ಅನೇಕ ಸ್ತೋತ್ರಗಳನ್ನು ಮಾಡಿ ಅನೇಕ ಕಷ್ಟ ರೋಗೋಪದ್ರವ ಪರಿಹರಿಸಿ ಕ್ಲೇಶದಿಂದ ಮುಕ್ತರನ್ನಾಗಿ ಮಾಡಿರುವರು. ಇಂಥ ಮಹಾ ಮಹಿಮೆಗಳನ್ನೇ ತೋರಿ ಭಕ್ತರನ್ನು ರಕ್ಷಿಸಿರುವರಲ್ಲದೇ.

**ಅನೇಕ ಭಕ್ತರ ಅಪಮೃತ್ಯುಕಳೆದು ಆಯುರ್ದಾನ ಮಾಡಿ, ರಕ್ಷಿಸಿ** ಸಾಧನ ಮಾಡಿಸಿದ್ದಾರೆ. ಜ್ಞಾನಪ್ರದಾನ ಮಾಡುವದು ಆಯುಸ್ಸು ಕೊಡುವದು ಇದು ಸಾಮಾನ್ಯರಾದ ದೇವತೆಗಳಿಂದ ಸುಲಭ ಸಾಧ್ಯ

ವಾದುದಲ್ಲ. **"ಜ್ಞಾನಾಯು ರೂಪಕನೆ ನೀನಹುದು"** ಎಂದು ವಾಯುದೇವರ ಮಹಿಮೆ ಜ್ಞಾನಾಯು ರೂಪರಾದ ವಾಯುದೇವರು ಮಾತ್ರ ಸಮರ್ಥರು. ಶ್ರೀ ವಿಜಯದಾಸರಲ್ಲಿ ವಾಯು ಆವೇಶಯುಕ್ತರಾದ ನಾರದಾಂಶ ಶ್ರೀ ಪುರಂದರ ದಾಸರೆ ಪಂದಂಶದಿಂದ ಆವಿರ್ಭೂತರಾಗಿರಲು ಅಪಮೃತ್ಯು ಪರಿಹರಿಸಿದ್ದು ಆಶ್ಚರವಲ್ಲವಾದರೂ ದೇವತೆಗಳು ಸಹ ಇವರ ಮಹತ್ತರವಾದ ಕಾರ್ಯವನ್ನು ತುತಿಸಿ ಕೊಂಡಾಡುವರು.

**"ಭಕ್ತರ್ಗೆ ಬಂದಪಮೃತ್ಯುಜಯಿಸಿ ಆಯುವನಿತ್ತೆ। ವಿಜಯರಾಯ।** ಪ್ರತ್ಯಕ್ಷವಲ್ಲದೆ ಮನವೆ ಇದಕೆ ಸಾಕ್ಷಿ ಅತ್ಯಂತ ಮಹಿಮೆ ವಿಜಯರಾಯ ॥೧೩॥ ಎಂದು ಗೋಪಾಲದಾಸರು ಪದ (೨೦) ರಲ್ಲಿ ದಾಸರ ಸ್ತೋತ್ರ ಮಾಡಿರುವರು. ಭಕ್ತರಿಗೆ ಎಂಬುದರಲ್ಲಿ ಯಾವಾವ ಭಕ್ತರಿಗೆ ಅಕಾಲ ಮೃತ್ಯು ಒದಗಿತು. ಶ್ರೀ ವಿಜಯದಾಸರು ಹೇಗೆ ಪರಿಹಾರ ಮಾಡಿದರು. ಅದರ ಮಹಿಮೆ ಮರ್ಮವೇನು? ಅಪಮೃತ್ಯುನಿವಾರಣಗೈವುದು ಮೃತ್ಯುದೇವತೆಗಳನ್ನು ಜೈಸುವದು. ಹೀನಾಯುಳ್ಳವರಿಗೆ ಆಯುರ್ದಾನ ಮಾಡುವದು ಅಸಂಭವವೆಂದು ಕೆಲವರ ಅಭಿಪ್ರಾಯ. ವಿಮರ್ಶಾತ್ಮಕ ದೃಷ್ಟಿಯಿಂದ ವಿಚಾರಾರ್ಹವಾಗಿವೆ.

## ಶ್ರೀ ವಿಜಯದಾಸರು ತಮ್ಮ ಮಕ್ಕಳಾದ ಶೇಷಗಿರಿದಾಸರಿಗೆ ಬಂದ ಅಪಮೃತ್ಯು ಪರಿಹರಿಸಿದ್ದು.

ಒಂದು ವೇಳೆ ಶ್ರೀ ವಿಜಯದಾಸರ ಮಕ್ಕಳಾದ ಶೇಷಗಿರಿದಾಸರಿಗೆ ಅತಿ ಕಾಯಿಲೆಯಾಯಿತು. ಪ್ರಾಣದಿಂದಲೂ ಸಹ ಉಳಿಯುವ ಸಂಭವವಿಲ್ಲೆಂದು ತೋರಿತು. ಮಾತೆಯಾದ ಅರಳಮ್ಮನವರಿಗೆ ಬಹು ಕ್ಲೇಶವಾಗಿದೆ. ಆಗ್ಗೆ ದೂರದರ್ಶಿಗಳಾದ ದಾಸರು ಇದು ಅಕಾಲಮೃತ್ಯು ಒದಗಿದೆಂದು ತಿಳಿದು ಶ್ರೀ ನರಹರಿಯನ್ನು ಪ್ರಾರ್ಥಿಸಿದರು. ಆವ್ಯಾಳ್ಯ ೨ ಉಗಾಭೋಗ ೧ ಸುಳಾದಿಯನ್ನು ರಚಿಸಿ, ತಮ್ಮ ಆಯುಷ್ಯದಲ್ಲಿಯು ಎರಡು ವರುಷ ಆಯುಷ್ಯ ಶೇಷಗಿರಿ ದಾಸರಿಗೆ ಆಯುಪ್ರದಾನ ಮಾಡಿದ್ದಾರೆ.

ಉಗಾಭೋಗ ೫೪ ( ಸ್ತೋತ್ರ ಸುಳಾದಿ ) ಅನಂತ ಕಲ್ಪಕ್ಕೆ ನಿನ್ನ ಮೊರೆ ಬಿದ್ದವಗೆ। ಖಿನ್ನವಿಲ್ಲೆಂಬುದು ಕೇಳಬಲ್ಲೆ । ಚಿಣ್ಣ ಧ್ರುವ ಪ್ರಲ್ಹಾದ ಮೊದಲಾದ ಭಕತರ। ಘನ್ನತೆಏನಂಬೆ ಲೋಕದಲ್ಲಿ। ಮನ್ನಿಸು ಮಹ ರಾಯ ವಿಜಯ ವಿಠ್ಠಲರೇಯ ಬಿನ್ನಹ ಕೈಕೊಂಡು ಭಕತನ್ನಪಾಲಿಸು ॥ ಎಂದು ಮತ್ತು

ಉಗಾಭೋಗ ೫೫ ಸ್ತೋತ್ರಭಾಗ ಸುಳಾದಿಲಿ ಸಿರಿರಮಣ ನಿನ್ನಯ ಚರಣಯುಗ್ಮಗಳಿಗೆ। ಶಿರಬಾಗಿ ನಾ ನಿನಗೆ ಬಿನ್ನೈಸುವೆ। ಶರಣರಿಗೆ ಬಂದ ಆಪತ್ತು ಪರಿಹರಿಸೆಂದು। ಕರುಣ ವಾರಿಧೆ ನಿನ್ನ ಪ್ರಾರ್ಥಿಸುವೆನು। ಸ್ಥಿರಮಾಡು ವಚನವನು ದೂರ ನೋಡದೆ ಈಗ ಕರಿ ವೈಕುಂಡರ ಪೊರದಕರುಣಿ। ಇರಲಿ ಈ ನರನೋರ್ವ। **ಧರಿಯೊಳಗೆ ಕೆಲವು ದಿನ। ಸರಿದಿಹ ಆಯುಷ್ಯವಿಲ್ಲದೆಂಬ್ಯಾ। ಎರಡು ವರುಷ ಎನ್ನಾಯುವೆರದೆ ಧಾರಿಯುಯುವಗೆ।** ವರಸಂತತೀಯನ್ನಿವಗೆ। ಇರುವದೆಂ। ದರಿದು ಪ್ರಾರ್ಥಿಪೆ ಭಕುತರಿಗೆ ಸಂಜೀವದನೆ। ಶರಣ ವತ್ಸಲನೆಂಬ ಬಿರಿದುಗಳ್ಯಾತಕೊ। ಕರುಣಾಕರ ನಮ್ಮ ಸಿರಿವಿಜಯ ವಿಠ್ಠಲ ನಿನ್ನ। ಕರಮುಗಿದು ಪ್ರಾರ್ಥಿಸುವೆ ಕರುಣಿಸವನ ॥೧॥ ಎಂದು ಹರಿಯನ್ನು ಪ್ರಾರ್ಥಿಸಿ **ತಮ್ಮ ಎರಡು ವರ್ಷ ಆಯುಷ್ಯನಿತ್ತರು.** ಪ್ರಾಣ ಉಳುಹಿದರು. ಲೋಕರಿಗೆಲ್ಲ ಇದು ಆಶ್ಚರ್ಯಕರವಾದಿತು. ಮತ್ತು ಒಂದು ಸುಳಾದಿ "ಹಗರಣಮಾಡದಿರು ಹರಿಯೆ ನಿನಗೆ ಕರವ ಮುಗಿದು ಬೇಡಿಕೊಂಬೆ'' ಎಂದು ಮಾಡಿದ್ದಾರೆ. ( ಪ್ರಾರ್ಥನಾ ಸುಳಾದಿ ೫ ರಲ್ಲಿದೆ ) ೨ ಉಗಾಭೋಗ ಶೇಷಗಿರಿದಾಸರ ವಿಷಯವೆಂದು ಹಳೆಯ ಪುಸ್ತಕಗಳಲ್ಲಿ ಹಿರಿಯರು ಬರದಾರೆ ಇಲ್ಲಿ ಸ್ವಲ್ಪ ವಿಚಾರಾಂಶ ವಾಗಿದೆ. ಶೇಷಗಿರಿದಾಸರಾದ ಮಕ್ಕಳಿಗೆ ೨ ವರುಷ ಆಯುಷ್ಯವಿತ್ತ ಮೇಲೆ ಕಾಯಲೇಗುಣವಾದದ್ದೇನೊ ನಿಜ. ಆದರೆ "ಇವನಿಗೆ ಉತ್ತಮ ವಾದ ಸಂತತಿ ಇದೆ ಎಂದರಿದು ಪ್ರಾರ್ಥಿಪೆ" ಎಂದು ೨ನೇ ಉಗಾಭೋಗದಲ್ಲಿ ಹೇಳಿದ್ದಾರೆ. ಮಹಾಜ್ಞಾನಿಗಳು ದೂರದರ್ಶಿಗಳಾದ ದಾಸರ ಪ್ರಾರ್ಥನೆ ದೂರಾದಿತೆ? ದಾಸರ ಮಕ್ಕಳಾದ ಶೇಷಗಿರಿದಾಸರಿಗೆ ಮಕ್ಕಳಿದ್ದಿಲ್ಲವೆಂಬುದು ಪರಂಪರಾ ಆಗತ ಇತಿಹಾಸವಾದರೂ ಸರಿಯೆ.

ಆದರೆ ೨ ವರುಷ ಆಯುರ್ದಾನನಂತರ, ಶೇಷಗಿರಿದಾಸರಿಗೆ ಒಂದು ಕೂಸು ಪುಟ್ಟಿ ಚಿಕ್ಕ ಬಾಲನಿರುವಾಗ್ಗೆ ಆಯುಷ್ಯ ಮುಗಿದಿರಬಾರದೇಕೆ? ಇತ್ಯಾದಿ ವಿಚಾರಂಶವಾಗಿವೆ. ಈ ಉಗಾಭೋಗವು ಮಕ್ಕಳ ಶೇಷಗಿರಿ ದಾಸರ ವಿಷಯವೋ ಅಥವಾ ಇನ್ನೊಬ್ಬ ಭಕ್ತನ ವಿಷಯವೋ ತಿಳಿಯದಾದರೂ, ಪೂರ್ವಜರು ತಪ್ಪು ವಿಷಯಗಳನ್ನು ಕಲ್ಪಿಸಿ ಬರೆದಿಲ್ಲ ವೆಂಬುದು ಧೃಡನಂಬಿಕೆ ಇದೆ. ಹೀಗೆ ಆಯುರ್ದಾನ ಇತ್ತಮೇಲೆ ೨ ವರ್ಷನಂತರ ಶೇಷಗಿರಿದಾಸರಿಗೆ ಕಾಲ ಮೃತ್ಯುಒದಗಿ ಯಾತ್ರಾ ಮಾಡಿದ ವಿವರ ಹಿಂದೆ ಸವಿಸ್ತರಬಂದಿದೆ. ಆಗ್ಗೆ ೧೨ ಪದಗಳು ದಾಸರೆ ರಚಿಸಿರುವರು. ದಾಸರ ಮಹಾಮಹಿಮೆ, ಇಂಥದು.

## ೨ ಮೋಹನದಾಸರಿಗೆ ಬಂದ ಅಪಮೃತ್ಯುನಿವಾರಣೆ

ಹಿಂದೆ ಆನೆಗುಂದಿ ಭೀಮಣ್ಣನಾಯಕನ ರೋಗಿಷ್ಟ ಚಿಕ್ಕ ಶಿಶುವನ್ನು ಶ್ರೀ ವಿಜಯದಾಸರು ತೆಗೆದುಕೊಂಡು ವ್ರಣನಿವಾರಣ ಮಾಡಿ ಮೋಹನನೆಂದು ಕರೆದದ್ದು ವಾಚಕರು ಮರೆತಿರಲಿಕ್ಕಿಲ್ಲ. ಅವರಿಗೆ ಮುಂಜಿ ಮದುವೆಮಾಡಿ ಸಾಕಿ ಸಲಹಿ ತತ್ವೋಪದೇಶಮಾಡಿ ಮೋಹನ ವಿಠಲನೆಂಬೊ ಅಂಕಿತಪ್ರದಾನಮಾಡಿ ಅಪರೋಕ್ಷಜ್ಞಾನಿಗಳನ್ನಾಗಿ ಮಾಡಿದ್ದರು. ಸಾಕಿದ ಮಕ್ಕಳು ಶ್ರೀ ದಾಸರ ಮನೆಯಲ್ಲೇ ಇದ್ದು ಸಂಸಾರ ಭಾಗವಹಿಸಿದ್ದರು. ದಾಸರು ಮೊಹನದಾಸರಲ್ಲಿ ಮಕ್ಕಳಂತೆ ಪ್ರೇಮ. ದಾಸರು ತೀರ್ಥಯಾತ್ರಾಕ್ಕೆ ಹೊರಡುವದು ನಿಶ್ಚಯವಾದಿತು. ದಕ್ಷಣದೇಶ ಯಾತ್ರಾಕ್ಕೋ, ಅಥವಾ ಕಾಶಿ ಯಾತ್ರಾಕ್ಕೆ ಇದು ಗೊತ್ತಾಗದ ವಿಷಯು. ದೂರದರ್ಶಿಗಳಾದ ದಾಸರು ಮುಂದಿನ ವಿಚಾರವನ್ನು ತಿಳಿದ ಮಹಾಜ್ಞಾನಿಗಳು ಅಪ್ಪಾ ಮೋಹನ್ನ ನೀನು ಈ ಸಲ ಮನೆ ಬಾಗಿಲನ್ನು ಕಾಯ್ದುಕೊಂಡು ಮನೆಯಲ್ಲಿರು ಎಂದು ಆಜ್ಞಾಯಿತ್ತರು. ಮತ್ತು ಅವರ ಕುಟುಂಬ ತಮ್ಮ ಸೊಸೆಯನ್ನು ಕರೆದು, ಅಮ್ಮಾ ನಿನಗೆ ಏನಾದರೂ ಆಪತ್ತುಬಂದರೆ ಧೈರ್ಯ ಬಿಡಬೇಡ. ನಮ್ಮನ್ನು ಧ್ಯಾನ ಮಾಡು ನಾವು ರಕ್ಷಿಸುವೆವೆಂದು ಏಕಾಂತದಲ್ಲಿ ಹೇಳಿ ಇತರ ಶಿಷ್ಯಪರಿವಾರದೊಡನೆ ಯಾತ್ರೆಗೆ ತೆರಳಿದರು. ಕುಟುಂಬ ಸಹಿತ ಮೋಹನ ದಾಸರು ಚೀಕನಬರಿವಿಯಲ್ಲೇ ದೇವರನ್ನು ಭಜಿಸುತ್ತ ಇದ್ದರು.

ಕೆಲವು ದಿನಗಳ ಮೇಲೆ, ಮೋಹನದಾಸರಿಗೆ ಯಾವ ಜಡ್ಡು ಆಲಸ್ಯವಾಗಲಿಲ್ಲ. ಕೂತು ಕೂತಿರಲಿಕ್ಕೆ ಪ್ರಾಣವೇ ಇಲ್ಲದಂತಾಯಿತು. ಶ್ವಾಶೋಚ್ಛಾಸವೇ ಇಲ್ಲದಾಗಲು ಮರಣ ಬಂದೊದಗಿತೆಂದು, ಹೆಂಡತಿಯು ಗಾಬರಿಯಾಗಿ ಅಯ್ಯೊ ಅಯ್ಯೊ ಅದೃಷ್ಟವೇ ಎಂದು ಚೀರಿಕೊಂಡಳು. ನೂರಾರು ಜನ ನೆರದರು ಬಹು ದುಃಖಿಷ್ಟರಾಗಿ ಅಳಲಾರಂಭಿಸಿದರು. ಹೆಂಡತಿಯ ಶೋಕವು ಹೆಚ್ಚಿತು ಅಯ್ಯೊ ವಿಜಯರಾಯರೇ ಈ ಆಪತ್ತಿನಿಂದ ರಕ್ಷಿಸರಿ ರಕ್ಷಿಸರಿ ಎಂದು ಪದೇ ಪದೇ ದೊಡ್ಡ ಧ್ವನಿಯಿಂದ ವಿಜಯರಾಯರನ್ನು ಕೂಗಹತ್ತಿದಳು. ಅಂದಿನ ಹಗಲು ರಾತ್ರಿ ಕಳೆದಿತು. ಮುಂದಿನ ತಯಾರಿ ನಡೆಯಿತು. ಹೆಂಡತಿ ತಡೆದಳು.

ಈ ಅವಧಿಯಲ್ಲಿ ಯಮದೂತರು ಮೋಹನದಾಸರ ಯಾತನಾ ಶರೀರವನ್ನು ತೆಗೆದುಕೊಂಡು ಯಮಲೋಕಕ್ಕೆ ಹೋದರು. ಈ ಮೋಹನದಾಸರನ್ನು ಧರ್ಮನ ಮುಂದೆ ನಿಲ್ಲಿಸಿದರು. ಜ್ಞಾನಿಯಾದ ಯಮಧರ್ಮರಾಜನು ಇವರ ಧರ್ಮಾಧರ್ಮ ವಿಚಾರಣೆಗಾಗಿ ಜ್ಞಾನಮಯ ಯಮದಂಡವನ್ನು ಶಿರಕ್ಕೆ ಸ್ಪರ್ಶ ಮಾಡಿದನು. ಆಗ್ಗೆ ಮೋಹನದಾಸರು ತಮ್ಮಿಂದಾದ ಪುಣ್ಯ ಪಾಪಗಳನೆಲ್ಲ ಸತ್ಯವಾಗಿ ನುಡಿಯಲಾರಂಭಿಸಿದರು. ನಾನು ಪಾಪಕೃತ್ಯಗಳನ್ನು ಕನಸಿನಲ್ಲಿ ಸಹ ಮಾಡಿಲ್ಲ. ನನ್ನ ತಂದೆಯಾದ ಗುರುಗಳು ಶ್ರೀ ವಿಜಯದಾಸರು. ಜ್ಞಾನಿಶ್ರೇಷ್ಠರ ಉಪದೇಶದಿಂದ ಸದಾ ಹರಿಭಜನೆ ಮಾಡುತ್ತ ಹರಿದಾಸರನ್ನು ನಿಂದಿಸದೇ ಉತ್ತಮರಲ್ಲಿ ಭಕ್ತಿಮಾಡುತ್ತಲಿರುವೆನು. ನಿರಪರಾಧಿಯಾದ ನನ್ನನ್ನು ತಮ್ಮ ಭೃತ್ಯರು ಯಳತಂದಿರುವರೆಂದು ಬಿನ್ನೈಸಲು, ಸೂಕ್ಷ್ಮಧರ್ಮ ಪ್ರವರ್ತಕರಲ್ಲಿ ಶ್ರೇಷ್ಠನಾದ ಧರ್ಮರಾಜನು ಅಹೋ ಈತನಲ್ಲಿ ಅಧರ್ಮಗಳಾವು ಇಲ್ಲ ಏನುಕಾರಣ ಅಕಾಲದಲ್ಲಿ ಶಳೆದು ತಂದಿರೆಂಬ ವಿಚಾರ ಮಾಡತೊಡಗಿದನು.

ಇತ್ತ ಚೀಕನಬರಿವೆಯಲ್ಲಿ ಜನರು ಹೊತ್ತಾಯಿತು, ಹಳಸು ಹೆಣವನ್ನು ಮನೆಯಲ್ಲಿಟ್ಟುಕೊಳ್ಳುವದು ಧರ್ಮವಲ್ಲಾ ಮುಂದಿನ ಕೆಲಸ ಸಾಗಲೆಂದು ಅವಸರಪಡಿಸಿದರೂ, ಹೆಂಡತಿಯು ನಾನು ಮೃತದೇಹ

ಕೊಡುವದಿಲ್ಲ. ಶ್ರೀ ವಿಜಯರಾಯ ವಿಜಯರಾಯ ರಕ್ಷಿಸು ರಕ್ಷಿಸೆಂದು ಪುನಃ ಪುನಃವಾಗಿ ಕೂಗಲಿಕ್ಕೆ ಹತ್ತಿದಳು. ಜನರು ಏನು ತಿಳಿಯದೇ ಸುಮ್ಮಗೆ ನಿಂತರು. ಹೆಂಡತಿಯು ಮತ್ತು ಹೆಚ್ಚಿನ ಧ್ವನಿಯಿಂದ ವಿಜಯರಾಯರೆಂದು ಕೂಗುತ್ತಿರುವ ಧ್ವನಿಯು ಜ್ಞಾನಿಗಳಾದ ಸಾಂಶ ದೇವತೆಗಳು ಶ್ರೀ ವಿಜಯದಾಸರು ದೂರದಲ್ಲಿದ್ದರೂ ಕೇಳಿ ತಿಳಿದು ತಾವು ಸ್ವತಃ ತಮ್ಮ ದೇಹದಿಂದಲೇ ಯಮಲೋಕಕ್ಕೆ ತೆರಳಿದರು. ಮರ್ತ್ಯ ರಿಗೆ ಆಶ್ಚರ್ಯವಾದರೂ ದೇವತೆಗಳಿಗೆ ಅಂಶದಿಂದ ಬ್ರಹ್ಮಾಂಡದಲ್ಲಿ ಎಲ್ಲಿ ಬೇಕಾದರೂ ಸಂಚರಿಸುವ ಸಾಮರ್ಥ್ಯ ಉಂಟು. ಯಮಧರ್ಮ ರಾಜನು ಶ್ರೀ ವಿಜಯದಾಸರನ್ನು ನೋಡಿದಕೂಡಲೇ ಆಸನದಿಂದೆದ್ದು, ಉಚಿತವಾದ ಆಸನವನ್ನು ದಾಸರಿಗೆ ಕೊಟ್ಟು ಅರ್ಘ್ಯಪಾದ್ಯಾಚಮನ ಗಳಿಂದ ಪೂಜಿಸಿದರು. ಜ್ಞಾನಿಗಳಾದ ಭಗವದ್ಭಕ್ತರಿಗೆ ಎಲ್ಲ ಲೋಕ ದಲ್ಲಿಯೂ ಮರ್ಯಾದೆ ಆಗ್ಗೆ ದಾಸರು ಧರ್ಮರಾಜನೇ ನಿರಪರಾಧಿ ಯಾದ ನಮ್ಮ ಶಿಷ್ಯಮಗ ಮೋಹನನನ್ನು ಅಕಾಲದಲ್ಲಿ ಏಕೆ ಎಳೆದು ತರಿಸಿದೆ. ಬಿಟ್ಟುಬಿಡೆಂದು ಹೇಳಲು ವಿಚಾರದಲ್ಲಿ ಮಗ್ನನಾದ ಯಮ ಧರ್ಮನು ಚಿತ್ರಗುಪ್ತರನ್ನು ಕರೆಸಿ ವಿಚಾರ ಮಾಡಿದನು. ಆಗ್ಗೆ ಚಿತ್ರ ಗುಪ್ತರು ಲೆಕ್ಕ ಆಯುರ್ಮಾನ ಪುಣ್ಯಾಪಾಪವಿಚಾರ ಮೋಹನದಾಸರದು ನೋಡುತ್ತಾರೆ. ಎಲ್ಲಿಯೂ ಸಿಗದು ಚೀಕನಬರಿವಿ ಗ್ರಾಮದಲ್ಲಿ ಮೊನಪ್ಪ ನೆಂಬೋ ಪಾಂಚಾಳನ ಆಯುಷ್ಯ ಮುಗಿದದೆ. ನಮ್ಮ ತಪ್ಪು ತಿಳು ವಳಿಕೆಯಿಂದ ಮೋನಪ್ಪನ ಬದಲಾಗಿ ಈ ಮೋಹನದಾಸರೆಳೆದು ತಂದಿರುವರು. ಲೆಕ್ಕದಲ್ಲಿ ಪರಿಪಾಟ (ತಪ್ಪು) ವಾಜ್ಞಯಾಗಿದೆ ಎಂದು ಬಿನ್ನೈಸಲು, ಧರ್ಮರಾಜನು ಶ್ರೀ ವಿಜಯದಾಸರಿಂದ ಕ್ಷಮೆ ಬೇಡಿ ದನು. ಮತ್ತು ಧರ್ಮನು ವಿಷ್ಣು ದೂತರಿಗೆ ಆಜ್ಞಾಪಿಸಿ ಇವರನ್ನು ಪುನಃ ತೆಗೆದುಕೊಂಡು ಹೋಗಿ ಚೀಕನಬರಿವಿಗೆ ಮುಟ್ಟಿಸಿರೆಂದು ಆಜ್ಞಾ ಇತ್ತನು. ಮತ್ತು ಆಯುಷ್ಯಮುಗಿದ ಮೋನಪ್ಪ ಪಂಚಾಳನನ್ನು ಕರದು ತನ್ನಿರೆಂದು ಯಮದೂತರಿಗೆ ಆಜ್ಞಾ ಮಾಡಿದನು.

ಇದನ್ನು ಮೋಹನದಾಸರು ಯಮಲೋಕದಲ್ಲಿ ಕಣ್ಣಾರೆ ನೋಡು ತ್ತಾರೆ. ಶ್ರೀ ವಿಜಯದಾಸರನ್ನು ವಂದಿಸಿ ಸ್ತೋತ್ರ ಮಾಡಿದರು.

ಸುಖಿಯಾಗಿರು ಎಂದು ಉಭಯರ ಆಶೀರ್ವಾದವಾಯಿತು. ಶ್ರೀ ವಿಜಯದಾಸರು ಯಮಧರ್ಮ ಲೋಕದಿಂದ ತೆರಳಿದರು. ಯಮ ಧರ್ಮನ ಆಜ್ಞೆಯಂತೆ ಮೋಹನದಾಸರನ್ನು ಚೀಕನಬರಿವಿಗೆ ತಂದು ಅವರವರ ಮನೆಯಲ್ಲಿ ಬಿಟ್ಟರು. ತಕ್ಷಣವೇ ಮೃತಕಾಯದಲ್ಲಿ ಮೋಹನ ದಾಸರ ಜೀವನವು ಪ್ರವೇಶವಾದಿತು ಚೇತರಿಸಿದರು. ಅತ್ತ ಪಂಚಾಳ ಮೋನಪ್ಪ ಮೃತನಾದ ಆಶ್ಚರ್ಯಚಕಿತರಾಗಿ ಎಲ್ಲರೂ ಹಿಂದಕ್ಕೆ ಸರಿ ದರು. ನಿದ್ರೆಯಿಂದೆಚ್ಚರಿಸಿದ ಮನುಷ್ಯನಂತೆ ಮೋಹನದಾಸರು ಎದ್ದು ಕುಳಿತು ಇದೇನು ಗದ್ದಲವೆಂದು ಕೇಳಿ ಗುರುಗಳ ಪಾದ ಧ್ಯಾನವನ್ನು ಮಾಡುತ್ತ ಕಂಠ ಉಬ್ಬಿ "ತಂದೆ ವಿಜಯರಾಯ ವ್ಯಾಳ್ಯಗೆ ಬಂದ್ಯೋ ವಿಜಯರಾಯ । ಹಿಂದೇ ಸುಜನ್ಮವು ಮುಂದೇಸುಜನ್ಮವು ಒಂದು ತಿಳಿಯದೆಂದೆಂದಿಗೂ ಎನ್ನಯ ॥ ಪಲ್ಲ ॥ ಹೀಗೆ ಮೂರು ನುಡಿ ಸ್ತೋತ್ರ ಗೈದಿರುವರು. (ಪದ ೨೫ ಪುಟ ೨೧).

ಹೇ ತಂದೆಗಳಾದ ವಿಜಯರಾಯರೇ ನೀವು ಈ ವ್ಯಾಳ್ಯ ಯಮ ಲೋಕಕ್ಕೆ ಬಂದು ರಕ್ಷಣಮಾಡಿದಿರಿ. ಹಿಂದೆ ಮುಂದೆ ಎಷ್ಟು ಜನ್ಮ ಗಳೋ ತಿಳಿಯಲಾರೆ. ಎಲ್ಲ ಜನ್ಮಗಳಲ್ಲಿ ನೀವೇ ಎನಗೆ ರಕ್ಷಕರು ಸೂರ್ಯನ ಸುತನಾದ ಯಮಧರ್ಮರಾಜನು ಯಾರು ಏನು ಎಂಬ ವಿಚಾರಮಾಡದೇ ಮೋಹನನನ್ನು ಕರೆದುಕೊಂಡು ಬನ್ನಿರೆಂದು ತನ್ನ ಭೀಕರವಾದ ದೂತರಿಗೆ ಆಜ್ಞಾಯಿತ್ತನು. ಆಗ್ಗೆ ಯಮದೂತರು ತಿಳಿಯದೇ ನಿನ್ನ ಪರಿಚಾರಕನಾದ ಎನ್ನನ್ನು ಈ ಮರ್ತ್ಯಲೋಕದಿಂದ ದೇಹವನ್ನು ಬಿಡಿಸಿ ಯಮಲೋಕಕ್ಕೆ ಒೈದರು. ಆಗ್ಗೆ ನನ್ನ ಪತ್ನಿಯು ನೀವಿತ್ತ ನಂಬಿಕೆಯ ಧೈರ್ಯದಿಂದ, ಸ್ತ್ರೀಯಳಾದರೂ ಧೈರ್ಯತಾಳಿ ಮನಸ್ಸು ಗಟ್ಟಿಹಿಡಿದು ಎರಡನೇ ವಿಚಾರ ತಾರದೆ ಸ್ಥಿರಮನಸ್ಸಿನಿಂದ ಶ್ರೀ ವಿಜಯದಾಸರೇ ರಕ್ಷಕರೆಂದು ತಿಳಿದು ಹೇ ಹರೇ ಮಧುಸೂದನನೆ ಮೋದ ತೀರ್ಥರೆ ಶ್ರೀ ವಿಜಯರಾಯರ ಅಂತರಂಗದಲ್ಲಿಪ್ಪರೇ ರಕ್ಷಿಸರಿ ರಕ್ಷಿಸರಿ, ಹೇ ವಿಜಯರಾಯರೇ, ವಿಜಯರಾಯರೇ, ನೀವೆಗತಿ ಕಾಪಾಡಿ ರೆಂದು ಧೈರ್ಯದಿಂದ ಪುನಃ ಗಟ್ಟಿಯಾಗಿ ಕೂಗಿದಳು. ಹೀಗೆ ಯಮ ದೂತರು ಎನ್ನ ಕರಗಳನ್ನು ಕಟ್ಟಿ ಯೆಳೆದುಕೊಂಡು ಯಮಧರ್ಮ

ಲೋಕಕ್ಕೆ ಪೋದರು. ಭಾರ್ಯಳ ಮೊರೆಯನ್ನು ಕೇಳಿ ಹೇ ವಿಜಯ್ಯ ರಾಯ ನೀನು ತಂದೆ, ಮಗನಮೇಲಿನ ಕರುಣದಿಂದ ಯಮಧರ್ಮ ಲೋಕಕ್ಕೆ ಬಂದು ಆತನಿಂದ ಪೂಜಾಗೊಂಡು ತಪ್ಪು ತಿಳುವಳಿಕೆಯಿಂದ ಎನ್ನನು ಎಳತಂದಿರುವರೆಂದು ವಿಚಾರ ಮಾಡಿಸಿದಿರಿ. ಶ್ರೀ ಹರಿಯಾದ ಮೊಹನವಿಠಲನ ಪದಗಳನ್ನು ಅಲ್ಲೆ ತೋರಿಸಿ ಪುನಃ ಧರಿಗೆತಂದು ಬಿಟ್ಟಿರಿ. ನೀವೆಂಥ ಕರುಣಾಳುಗಳು ಯಮಲೋಕಕ್ಕೆ ಸಹ ಬಂದು ರಕ್ಷಿಸಿದಿರಿ. ಎಂಥ ಮಹಾತ್ಮರು ಎಂಥ ಕರುಣಾಳುಗಳು ಎಂದು ಸ್ತೋತ್ರಗೈದಿರುವರಲ್ಲದೆ ಯಾತ್ರಾದಿಂದ ತಿರುಗಿ ಬಂಡ ಮೇಲೆ ಶ್ರೀ ವಿಜಯರಾಯರ ಸಂದರ್ಶನಾನಂದದಿಂದ "ಪರಮ ಹರುಷವಾಯಿತು ವಿಜಯರಾಯ। ಗುರುಗಳಂಘ್ರಿಯನೇ ಕಂಡು॥ ಪರಿಪರಿಯ ಜನು ಮದ ಥರಥರದಘಗಳು। ತಿರುಗಿ ನೋಡದಲೇವೆ। ತೆರಳಿ ಪೋದವು ಇಂದು" ಮೂರುನುಡಿ ಶ್ರೀ ವಿಜಯರಾಯರ ಸ್ತೋತ್ರ ಗೈದಿರುವರು ( ಪದ ೨೨ ಪುಟ ೨೦ ನೋಡಿ ).

ಮೋಹನದಾಸರಿಗೆ ಬಂದ ಅಪಮೃತ್ಯುನಿವಾರಣ ಗೈಸಿದ ನೈಜ ಸಂಗತಿ. ಸ್ವತಃ ಮೋಹನದಾಸರೇ ಪದರೂಪದಿಂದ ಪೇಳಿರುವಂತೆ ಮೋಹನದಾಸರ ಪರಂಪರಾಗತ ಅವರ ವಂಶಜರಿಂದಲೂ ಕೇಳಿದ ಸಂಗತಿಗಳಿವೆ. ಇಷ್ಟು ಆಧಾರವಾಗಿದ್ದಾಗ್ಯೂ- ಕೆಲವ ಮಹನೀಯರು ಮೋಹನದಾಸರು ಆನೆಗುಂದಿಗೆ ವಿಜಯರಾಯರಿಂದ ಅಪ್ಪಣೆತೆಗೆದು ಕೊಂಡು ಹೋದರು ಅಲ್ಲಿ ಈ ಸಂಗತಿ ಒದಗಿತೆಂದು ಬರೆದಿರುವರು. ದಾಸರು ಚಿಕ್ಕಮಗುವಾದ ಮೋಹನನ್ನು ಕಾಪಾಡಿ ದತ್ತಮಗನನ್ನು ಮಾಡಿಕೊಂಡುಬಿಟ್ಟಿದ್ದರು. ದತ್ತಪುತ್ರನಾದ ಮೇಲೆ ಮೋಹನದಾಸರು ಚೀಕನಬರಿವಿಯಲ್ಲೆ ಶ್ರೀ ವಿಜಯರಾಯರ ಸನ್ನಿಧಿಯಲ್ಲೆ ಇದ್ದರು. ಹರಿಗುರುಗಳಲ್ಲಿ ಪರಮವಿಶ್ವಾಸ ಧೃಡತರಭಕ್ತಿ ಸೋತ್ತುಮರಿಗೆ ಸದಾ ಮನ್ನಣೆ ಮಾಡುತ್ತ ಕನಸಿನಲ್ಲಾದರೂ ಉತ್ತಮರಿಗೆ ಅವಮಾನ ಬಯಸು ತಿದ್ದಿಲ್ಲ. ಮತ್ತು ಯಾವ ಸಂಪತ್ತು ಒಲ್ಲೆಯಾವ ಜನ್ಮಬಂದರೂ ಬರಲಿ ದಾಸರ ಮನೆಯಮುಂದೆ ಕುನ್ನಿಯಾಗಿರುವ ಸೌಭಾಗ್ಯವನ್ನ ಕೊಡೆಂದು ಶ್ರೀ ಲಕ್ಷ್ಮೀನಾರಾಯಣರನ್ನು ಸ್ತೋತ್ರ ಮಾಡಿದ್ದಾರೆ. ಹೀಗಿರಲು

ಮೋಹನದಾಸನು ಉತ್ತಮರಿಗೆ ಅವಮಾನ ಮಾಡಿರುವನು. ಈತನ ಶಿರಸ್ಸು ಕರಗಸದಿಂದ ಕೊಯ್ಯಿರೆಂದು ಯಮರಾಜನು ಆಜ್ಞಾಮಾಡಿದ ನಂತೆ ಉತ್ತಮರ ನಿಂದ್ಯಯಿಂದ ಮೋಹನದಾಸರನ್ನು ಯಮಲೋಕಕ್ಕೆ ಎಳದೊಯ್ದರಂತೆ ಒಬ್ಬರು ಬರೆದಾರೆ.

ಮೋಹನದಾಸರೇ " ಕಾರ್ಯಾಕಾರ್ಯವು ತಿಳಿಯದೆ ನಿನ ಪರಿ ಚಾರ್ಯನ ಯಳೆತಿರೆ ಭಾರ್ಯಳು ಮೊರೆ ಇಡೆ " || ಎಂದು ಹೇಳಿರು ವರು. ದೇವತೆಗಳಲ್ಲಿ ಸಹ ಕೆಲಕಾಲ ಪರಿಪಾಟ ಆಗುವ ಸಂಭವಉಂಟು ಈ ದೇವ ಮರ್ಮವನ್ನೂ ದಾಸರ ವಾಕ್ಯಗಳನ್ನು ಸರಿಯಾಗಿ ನೋಡಿ ಅರ್ಥ ಸರಿಪಡಿಸಿಕೊಳ್ಳದೇ ಮನಬಂದಂತೆ ಬರೆದರೆ ಜ್ಞಾನಿಗಳಿಗೆ ಎಷ್ಟು ಮನಕ್ಲೇಶವಲ್ಲದೆ ದೊಡ್ಡವರುಕ್ತಿಯನ್ನರಿಯದೇ ದೊಡ್ಡವರಲ್ಲಿ ಅವಮಾನ ಕಲ್ಪಿಸಿದರೆ, ಯಮರಾಜನು ನೀನು ಜ್ಞಾನಿಗಳಲ್ಲಿ ವೃಥಾಕಲ್ಪಿಸಿರುವಿ ಯೆಂದು ಹೀಗೆ ಬರೆದವರ ಶಿರವನ್ನು ಕರಗಸದಿಂದ ಚನ್ನಾಗಿ ಕೊಯಿಸುವನುಸತ್ಯ

ಇನ್ನು ನಿಜವಾಗಿಯೂ ಮೋಹನದಾಸರು ಉತ್ತಮರಿಗೆ ಅಮ ರ್ಯಾದೆಮಾಡಿಲ್ಲ. ಮತ್ತು ಪಾಪಕೃತ್ಯಗಳನ್ನು ಕನಸಿನಲ್ಲಿ ಮಾಡಿಲ್ಲ ವಾದಮೇಲೆ ಜ್ಞಾನಿಯಾದ ಮೋಹನದಾಸರಿಗೆ ಯಮಲೋಕಕ್ಕೇಕೆ ಎಳದೊಯ್ದರು. ಯಮಲೋಕ ದರ್ಶನವಾಗಬೇಕಾದರೆ ಇವರಲ್ಲಿ ಏನಾದರೂ ಪಾಪವಿರಬೇಕು. ಪಾಪನಿಮಿತ್ಯ ಯಮದರ್ಶನವಾದಿತೆಂದು ಕೆಲವರಿಗೆ ಸಂಶಯ ಹುಟ್ಟಬಹುದು. ಉತ್ತಮರಲ್ಲಿ ಪಾಪಕಲ್ಪಿಸುವದು ತಮೋಜೀವಿಗಳ ವ್ಯಾಪಾರ. ಸಂಶಯಪಡುವದು ಮಿಶ್ರಜೀವಿಗಳ ವ್ಯಾಪಾರ ಉತ್ತಮರಲ್ಲಿ ಪಾಪಕಲ್ಪಿಸದೆ ಜ್ಞಾನಿಗಳೆಂದು ಸಂಭಾವಿಸು ವದು ಸತ್ವಜೀವರ ಲಕ್ಷಣ. ಹೀಗೆ ತ್ರಿವಿಧರು ತಮ ತಮ್ಮ ಯೋಗ್ಯತೆಯಂತೆ ತಿಳಿಯುವದು ಅವರ ಸ್ವಭಾವಕ್ಕೆ ಉಪಾಯವಿಲ್ಲ.

ಮೋಹನದಾಸರಿಗೆ ಯಮಲೋಕದ ದಕ್ಷಿಣ ಬಾಗಿಲಲ್ಲಿರುವ ಪಾಪಿಗಳಿಗಾಗುವ ಯಮದೇವರ ದರ್ಶನಾಗಿಲ್ಲ. ಉತ್ತರ ದಿಶೆಯಲ್ಲಿರುವ ಧರ್ಮರಾಜನ ಪಟ್ಟಣ ಉತ್ತರ ದ್ವಾರವಾದ ಯಮಧರ್ಮರಾಜನ ದರ್ಶನ ಪುಣ್ಯವಂತರಿಗೆ ಆದಂತೆ ಮೋಹನದಾಸರಿಗೆ ಧರ್ಮ ಮಹಾ

ಪ್ರಭುವಿನ ದರ್ಶನವಾಗಿದೆ. ದೇವತೆಗಳಿಗೆ ನಿರಯವಿಲ್ಲವೆಂಬ ಸಿದ್ಧ ಪ್ರಮೇಯವನ್ನು ಮರೆಯಬೇಡರಿ.

ಇಂತು ಶ್ರೀ ವಿಜಯದಾಸರು ಮೋಹನದಾಸರಿಗೆ ಬಂದ ಅಪಮೃತ್ಯು ನಿವಾರಣೆಗೈದದ್ದು ದೇವತೆಗಳಿಗೆಲ್ಲ ಆಶ್ಚರ್ಯಕರವಾದಿತು.

## ೩. ಚಾಗಿಕೇಶವರಾಯನಿಗೆ ಬಂದ ಕಾಲಮೃತ್ಯು ನಿವಾರಣೆ ಮಾಡಿದ್ದು ಮತ್ತೂ ಮಹತ್ವವಾಗಿದೆ.

ಚೀಕನಬರವಿಯಿಂದ ಮೂರು ಹರದಾರಿ ಮೇಲೆ ತುಂಗಾನದಿ ದಾಟಿ ಚಾಗಿ ಎಂಬ ಗ್ರಾಮ ಇರುವದು. ಚೀಕನಬರವಿಯಿಂದ ಅಯನೂರು, ಹೆಡಿಗನಹಾಳು, ಮುಂದೆ ತುಂಗಾನದಿ ದಾಟಿದರೆ ಹಿರೇಚಾಗಿ ಎಂಬ ಗ್ರಾಮ ತುಂಗಾತಟಗಲ್ಲೆ ಇರುವದು. ಹಿರೇಚಾಗಿ ದಾಟಿ ಒಂದು ಮೈಲು ಮೇಲೆ ಸಣ್ಣ ಚಾಗಿ ಎಂಬ ಊರು ಇದೆ. ಈ ಎರಡೂ ಗ್ರಾಮಗಳು ಆದವಾನಿ ತಾಲ್ಲೂಕಿಗೆ ಸೇರಿವೆ.

ಹೀರೆಚಾಗಿಯಲ್ಲಿ ಪೂರ್ವದಿಂದಲೂ ಕುಲಕರ್ಣಿಯವರ ಮನೆತನದವರು ಕಣ್ವಶಾಖೆಯವರಾಗಿರುವರು. ಅಲ್ಲಿ ದೇಸಾಯಿಯರ ಮನೆತನದವರು ಮಾಧ್ವ ವೈಷ್ಣವರಾಗಿರುವರು. ಶ್ರೀ ವಿಜಯದಾಸರ ಕಾಲದಲ್ಲಿ ಹಿರೆಚಾಗಿಯಲ್ಲಿ ಸುಪ್ರಸಿದ್ಧ ದೇಸಾಯಿ ಚಾಗಿ ಕೇಶವರಾಯನೆಂಬ ಸದ್ಗೃಹಸ್ಥ ಭಗವದ್ಭಕ್ತನಾಗಿದ್ದನು. ದೈವಿಸಂಪತ್ತಿನಿಂದ ಕೂಡಿದವನು. ಬಂದ ಅತಿಥಿ ಅಭ್ಯಾಗತರ ಪೂಜಾ ಮಾಡಿಕೊಂಡು ಹರಿಭಜನೆ ಮಾಡುತ್ತ ಕಾಲಕಳೆಯುತ್ತಿದ್ದನು. ಆಗ್ಗೆ ಆತನಿಗೆ ೭೦ ವರುಷ ಸುಮಾರು ಆಗಿವೆ. ವೃದ್ಧಾಪ್ಯಕಾಲ ಜಡ್ಡಾಗಿದೆ. ಕಾಲಮೃತ್ಯು ಸಮೀಪಿಸಿದೆ. ಮಕ್ಕಳು ವೈದ್ಯರಿಂದ ಔಷಧೋಪಚಾರ ನಡಿಸಿದಾಗ್ಯೂ ಜಡ್ಡು ಗುಣಮುಖವಾಗಲಿಲ್ಲ. ದೈವವಶಾತ ಮೃತ್ಯುವಿಗೆ ತುತ್ತಾದನು. ಮಕ್ಕಳಿಗೆ ಬಂಧು ಬಳಗ ನೆರೆಹೊರೆಯವರಿಗೆಲ್ಲ ಅತಿ ದುಃಖವಾದಿತು. ಪತಿವ್ರತೆಯಾದ ಹೆಂಡತಿಗಂತೂ, ನನ್ನ ಮುತ್ತೈದಿತನಕ್ಕೆ ಹಾನಿಯುಂಟಾದಿತು. ಪತಿಯನ್ನು ಕಳೆದುಕೊಂಡೆ. ವಿಧವೆಯಾಗಿ ಬಾಳುವದಕಿಂತಲೂ, ಪತಿ ಪಾದೋದಕವನ್ನು ತೆಗೆದುಕೊಂಡು ಸಹಗಮನವೇ ಲೇಸು. ಹೀಗೆ ಮನದಲ್ಲಿ ಮರಗಹತ್ತಿದಳು.

ಆದಿನವೇ ಯಾದವಗಿರಿ ಆದವಾನಿ ಮಾರ್ಗವಾಗಿ ಚೀಕನಬರವಿಗೆ ಹೋಗಲು, ಯಾತ್ರಾ ಮುಗಿಸಿಕೊಂಡು ಶ್ರೀ ವಿಜಯರಾಯರು ಶ್ರೀ ಗೋಪಾಲದಾಸರಿಂದ ಸಹಿತವಾಗಿ ಆಗಮಿಸಿ ಹಿರೆಚಾಗಿ ಗ್ರಾಮದಲ್ಲಿ ಶ್ರೀ ಪ್ರಾಣದೇವರ ಗುಡಿಯಲ್ಲಿ ಇಳದಿದ್ದರು. ಮಹಾ ಭಾಗವತಶ್ರೇಷ್ಠರೂ ಜ್ಞಾನಿಗಳಾದ ಶ್ರೀ ವಿಜಯದಾಸರು ಆಗಮಿಸಿದ ವರ್ತಮಾನವನ್ನು ಪತಿವ್ರತಾಶಿರೋಮಣಿಯಾದ ಚಾಗಿ ಕೇಶವರಾಯನ ಧರ್ಮಪತ್ನಿ ಕೇಳಿದೊಡನೆ ಈ ಆಪತ್ಕಾಲದಲ್ಲಿ ದೊಡ್ಡವರ ಸಂದರ್ಶನ ಮಾಡಿ, ಅವರಾಜ್ಞೆಯಂತೆ ಆಚರಿಸುವದು ಮುಖ್ಯವೆಂದು ತಿಳಿದು ಆ ವೃದ್ಧ ಹೆಂಗಸು ಶ್ರೀ ವಿಜಯದಾಸರಿದ್ದೆಡೆಗೆ ಬಂದು ಉಭಯದಾಸರಿಗೂ ಭಕ್ತಿಯಿಂದ ಶಿರ ಸಾಷ್ಟಾಂಗ ಪ್ರಣಾಮಗಳನ್ನು ಮಾಡಿದಳು. ಶ್ರೀ ವಿಜಯದಾಸರು ಆಗ್ಗೆ "ಸುಮಂಗಲೀಭವ ಸುಮಂಗಲೀಭವ" ಎಂದು ಹರಸಿ ಏಳಮ್ಮಾ ಏಳು ಎಂದು ಸಂತೈಸಿದರು. ಆಗ್ಗೆ ಪತಿವ್ರತೆಯು ಎದ್ದು ಕೈಜೋಡಿಸಿ, ಮಹಾ ಸ್ವಾಮಿ ವಿಜಯದಾಸರೇ ನನ್ನ ಪತಿಯು ಪರಲೋಕ ಪೈದಿದ್ದಾನೆ. ವೈಧವ್ಯ ಪ್ರಾಪ್ತಿಯಾಗಿದೆ. ತಮ್ಮ ಮಂಗಲನುಡಿ ಸತ್ಯಮಾಡಿರಿ. ಮುಂದೆ ಎನಗೆ ಧರ್ಮಮಾರ್ಗ ತೋರಿರಿ. ಪತಿಯನ್ನಗಲಿ ನಾಸಿರಲಾರೆನೆಂದು ದೈನ್ಯದಿಂದ ಬೇಡಿಕೊಂಡಳು.

ಆ ಪತಿವ್ರತೆಯ ಹಿಂದೆ, ಮಗ ಕೆಲ ಆಪ್ತರು ಊರಿನ ಭಕ್ತರು ಬಂದಾರೆ. ಎಲ್ಲರೂ ದಾಸರಿಗೆ ಕೈಜೋಡಿಸಿ ನಿಂತಿದ್ದಾರೆ. ದಾಸರ ಮುಖದಿಂದ ಬಂದ "ಸುಮಂಗಲೀಭವ" ಎಂಬ ಆಶೀರ್ವಚನವನ್ನು ಕೇಳುತ್ತಾರೆ. ಮೃತನಾದ ಚಾಗಿ ಕೇಶವರಾಯನ ಪತ್ನಿಯ ದೀನವಚನವನ್ನು ಕೇಳಿ ಮನುಜರಂತೆ ಗಾಬರಿಗೊಂಡವರಾಗಿ ದೀನದಯಾಳುವಾದ ಶ್ರೀಹರಿಯೇ ಭಕ್ತರ ಆಪತ್ತು ಪರಿಹರಿಸಿ ರಕ್ಷಿಸುವಲ್ಲಿ ನಿನ್ನ ಹೊರತಾಗಿ ಅನ್ಯರೊಬ್ಬರನ್ನು ಕಾಣೆ? "ಸುಮಂಗಲೀಭವ" ಎಂಬ ಎನ್ನ ಬಾಯಿಂದ ನುಡಿಸಿದ ವಚನವನ್ನು ಸತ್ಯಮಾಡು ಸತ್ಯಮಾಡು ಇಲ್ಲದಿದ್ದರೆ ನಿನ್ನ ಭಕ್ತವತ್ಸಲನೆಂಬ ಬಿರುದಿಗೆ ಕುಂದು. ಮಹಾಸ್ವಾಮಿ ರಕ್ಷಿಸೆಂದು ಮೃತನಾದ ಚಾಗಿಕೇಶವರಾಯನ ಮನೆಗೆ ಬಂದು, ಶವದ ಮೇಲೆ ಉದಕವನ್ನು ಪ್ರೋಕ್ಷಿಸಿ ಜ್ಞಾನದೃಷ್ಟಿಯಿಂದ ಇವನ ಆಯುರ್ಮಾನ ಮುಗಿದದೆ.

ಆದರೂ ಎನ್ನ ವಚನವನ್ನು ಸತ್ಯಮಾಡೆಂದು ದೇವರನ್ನು ಅತಿ ದೈನ್ಯದಿಂದ ಪ್ರಾರ್ಥಿಸಿದ್ದಾರೆ. ೧ ಸುಳಾದಿ ೧೩ ಉಗಾ ಭೋಗಗಳಿಂದ ಆಗಿನ ಕಾಲದಲ್ಲಿ ದಾಸರು ಪ್ರಾರ್ಥಿಸಿದ್ದಾರೆ.

ಚಿಪ್ಪಗಿರಿಯಲ್ಲಿರುವ ೧೮೦–೧೭೫ ವರ್ಷದ ಮುಂಚೆ ಬರೆದ ಹಳೆಯ ಪುಸ್ತಕದಲ್ಲಿ **ಚಾಗಿಕೇಶವರಾಯನ ಅಪಮೃತ್ಯು ನಿವಾರಣ ವಿಷಯ ಪ್ರಾರ್ಥನೆ** ಎಂದು ಸುಳಾದಿ ಉಗಾ ಭೋಗಗಳ ಮೇಲೆ ಬರೆದಿರುವರು. "ರುದ್ರಾಂತರ್ಗತ ನಾರಸಿಂಹ ಮೃತ್ಯುನಿವಾರಿಭದ್ರ ಫಲದಾಯಕದೋಷ ದೂರ" ಎಂಬ ಸುಳಾದಿ ಪ್ರಾರ್ಥನಾ ಭಾಗ ಸುಳಾದಿ (೧)ರಲ್ಲಿ ಅಚ್ಚಾಗಿದೆ. ಮಟ್ಟತಾಳದಲ್ಲಿ "ಹರಿ ನಿನ್ನ ಇದ್ದಂತೆ ಯನ್ನ ಶರೀರದೊಳಗೆ ನಿಂದು ಸ್ತೋತ್ರ ಮಾಡಿಸಿಕೊಂಡೆ। ಅರೆಮರೆ ಇದಕಿಲ್ಲ ಶಾಶ್ವತ ವಾಕ್ಯವೆಂದು। ನೆರೆನಂಬಿದೆ ನಾನು ನಾನಾ ವಿಧದಲ್ಲಿ। ನರರಿಗೆ ಬಂದಟ್ಟಿದ ವ್ಯಾಧಿನಿಲಲುಂಟೆ। ಎಂದು ಸ್ತೋತ್ರಮಾಡುತ್ತ ಮುಂದೆ ತ್ರಿವಿಡಿ ತಾಳದಲ್ಲಿ "ಮುನ್ನೆಪೇಳುವದೇನು ವಿಸ್ತರಿಸಿ। ಬಣ್ಣಿಸಿದೆ ಬಹು ಬಗೆಯಿಂದ ಈ ಅಬಲೆಯು ನಿನ್ನ ನಂಬಿಹಳಯ್ಯಾ ನೀನೆಬಲ್ಲೆ। ಧನ್ಯ ಜೀವನದಾಯ ಸುವಾಸತನವಿತ್ತು। ಮನ್ನಿಸುವದು ಇವಳ ತುತಿಗೆಮೆಚ್ಚಿ। ಬೆನ್ನ ಬಿದ್ದವರನ್ನ ಒಪ್ಪಿಸಿ ಕೊಡಲುಂಟೆ। ಬಿನ್ನಹಮಾಡಿದೆ ಇಷ್ಟೆ ಮಾತ್ರ। ತನ್ನ ಪತಿಯಕೂಡ ತಾಂಬೂಲ ಮೆಲುವ ಸಂ। ಪನ್ನ ಭಾಗ್ಯವಕೊಡು ಕಮಲನಾಭ। ಕನ್ನೈಲಕುಮಿ ರಮಣವಿಜಯ ವಿಠ್ಠಲರೇಯ। ಘನ್ನಮಹಿಮ ನಿನ್ನ ವಾಕ್ಯ ಅಮೃತಸಿದ್ಧ ॥೩॥ ಈ ಸುಳಾದಿಯಲ್ಲಿ ಪ್ರಾರ್ಥನೆಯು ಮನನ ಮಾಡುವದು. ಹೀಗೆ ೧೩ ಉಗಾಭೋಗಗಳಲ್ಲಿಯೂ ಪ್ರಾರ್ಥಿಸಿದ ನಾನಾ ವಿಧ ಪ್ರಾರ್ಥನೆ ತಿಳಿಯಲರ್ಹವಾಗಿವೆ. ಸ್ವಾಮಿ ಎನ್ನ ಬಾಯಿಂದ ನೀನು ನುಡಿಸಿದ ವಾಕ್ಯ ಸಿದ್ಧಮಾಡು. ನನ್ನ ವಾಕ್ಯವಲ್ಲ ನಿನ್ನದೆ ವಾಕ್ಯ ನೀನೆ ಸಿದ್ಧಗೈಸೆಸಮರ್ಥ ಕೊನೆಯ ಎರಡು ಉಗಾ ಭೋಗಗಳಲ್ಲಿ ನನ್ನ ಮಾತು ಮುಂಚಿದೆ ನೀನು ಸತ್ಯಮಾಡೆಂದು ದೈನ್ಯದಿಂದ ಸ್ತೋತ್ರ ಮಾಡಿರುವರಲ್ಲದೇ ಎನ್ನ ಆಯುಷ್ಯದೊಳಗಿನ ಮೂರುವರ್ಷ ಆಯುಷ್ಯದಾನ ಮಾಡಿ ಕೊಟ್ಟಿರುವೆ ರಕ್ಷಿಸಿ ಕಾಪಾಡೆಂದು ಪ್ರಾರ್ಥಿಸಿರುವರು. ಸ್ತೋತ್ರ ಭಾಗ ಸುಳಾದಿಯಲ್ಲಿ ಎಲ್ಲವೂ ಕೊಟ್ಟಿವೆ ನೋಡುವದು. ಇಲ್ಲಿ ೨ ಉಗಾ

ಭೋಗ ೫೨–೫೩ ಮಾತ್ರ ಅತ್ಯಾವಶ್ಯಕವೆಂದು ಕೊಡಲಾಗಿದೆ. ೫೨ ಉಗಾಭೋಗ.

ಮಾತು ಮುಂಚಿತು ಕಾಣೊ ಹೆಂಗಳೆಯಾ ಮನೋವೃತ್ತಿಗೆ। ಆತುಮದೊಳಗಿದ್ದ ಆತ್ಮ ಕೇಳು। ಭೂತಳದೊಳಗ ಭಕ್ತರಾಧೀನ ನೀನೆಂದು। ಖ್ಯಾತವಾಗಿದೆ ನೋಡು ಸರ್ವದಲ್ಲಿ। ನೀತ ಗುಣವಂತ ನಿನ್ನವರ ದಾಸಾನು ದಾಸ। ಜ್ಞಾತ ಅಜ್ಞಾತದಲಿ ನುಡಿದೆನಯ್ಯಾ। ನೀತ ವಕದಿಂದಲಿ ನುಡಿ ಪಾಲಿಸದಿರಲು ದಾತರೊಬ್ಬರ ಕಾಣೆ ಬೊಮ್ಮಾಂಡದಿ। ಯಾತರವ ನಾನಲ್ಲ ನಿನ್ನ ನಾಮವೆ ಗತಿ। ಬೆನ್ನಾತುಕಾಯೊ ಎನ್ನಮನ ದೈವವೆ। **ವಾತಾಂರ್ಗತ** ನಮ್ಮ ವಿಜಯ ವಿಠ್ಠಲರೇಯ। ಪ್ರೀತನಾಗು ಎನ್ನ ಸ್ತುತಿಗೆ ವೈದೋರಿ" ॥ ಮತ್ತೆ ಮುಂದೆ ೫೩ ನೇ ಉಗಾ ಭೋಗದಲ್ಲಿ "ದೇವ ನಿನ್ನ ಪಾದದಾಣೆ ನಿನ್ನ ಭಕತರಾಣೆ ಈ ವಚನ ಸತ್ಯಮಾಡುವದು ಎನಗೆ। ಇವನ ಜೀವನದಾನವ ಕೊಡು ಇದೇ ದೇಹವೆ ಇರಲಿ। **ಮೂರು ವರುಷ ಎನಗಿದ್ದ ಆಯುಷ್ಯದೊಳಗಿತ್ತೆ** ಕಾವದಲ್ಲದೆಯಿನ್ನು ಸುಮ್ಮನಿಪ್ಪದು ಸಲ್ಲ। ಸಾವಿರ ಬ್ರಹ್ಮಭೋಜನ ಮಾಡಿಸುವೆನು। ದೇವ ನಿನ್ನ ಪಾದದಾಣೆ ನಿನ್ನ ಭಕುತರಾಣೆ। **ಈ ವ್ಯಾಳಿಗೆ ಬಂದ ಮೃತ್ಯು ಓಡಿಸಬೇಕು**। ಭೂವಿಬುಧರೆಲ್ಲರು ಕಷ್ಟಬಡುವದು ನೋಡು। ಕೋವಿದರಾಯ ಎನ್ನಾಶೆ ಕೇಳಿದಗತ್ಯ। ಪಾವನ್ನ ಮೂರುತಿ ವಿಜಯವಿಠ್ಠಲರೇಯ **ಜೀವೇಶನಿಂದಲ್ಲಿ** ರಕ್ಷಣೆ ಮಾಡಿಸು ॥ ಎಂದು ಬಹುಸಥಿಯಿಂದ ದೇವರನ್ನು ಪ್ರಾರ್ಥಿಸಿದರು. ಆಗ್ಗ ಅವರ ಬಿಂಬನಾದ ಹರಿ ವಿಜಯವಿಠಲನು ಆಯುರೂಪನಾದ ಜೀವೋತ್ತಮನದ್ವಾರಾ ತಾನು ಆ ಜೀವನ ದ್ವಾರಾ ಪ್ರವೇಶ ಮಾಡಿದನು. ವಾಯುದೇವರು ಆಯುರ್ದಾನಕ್ಕೆ ಮುಖ್ಯ ಅಭಿಮಾನಿಗಳು ದಾಸರ ಮೂರುವರುಷ ಆಯುಷ್ಯದಾನವನ್ನು ಶ್ರೀ ಹರಿಯು ವಾಯುದ್ವಾರಾ ಸ್ವೀಕರಿಸಿ ನಿಜ ದಾಸರವಾಕ್ಯ ಸತ್ಯಮಾಡಿದನು. ಕೇಶವರಾಯನ ಮೃತ ದೇಹ ನಿದ್ರೆಯಿಂದೆದ್ದಂತೆ ಚೇತರಿಸಿಕೊಂಡಿತು. ಚಾಗಿ ಕೇಶವರಾಯನು ಎದ್ದು ಕುಳಿತನು. ರೋಗವೆಲ್ಲ ಹಿಂದಾಗಿದೆ. ಪುಷ್ಟನಾಗಿದ್ದಾನೆ, ದಾಸ ರನ್ನು ನೋಡುತ್ತಾನೆ ಭಕ್ತಿಯಿಂದ ಉಭಯದಾಸರಿಗೆರಗಿ ಕೈಜೋಡಿಸಿ ಪ್ರಾರ್ಥಿಸಿ ಆಯುರ್ದಾನವಿತ್ತು ಪರೋಪಕಾರಿಗಳೇ ಎನ್ನನು ರಕ್ಷಿಸಿದಿರಿ.

ಉದ್ಧರಿಸಿರೆಂದು ಪ್ರಾರ್ಥಿಸಿದನು. ಆಗ್ಗೆ ದಾಸರು ಶ್ರೀ ಹರಿಯು ಸಮರ್ಥ ನೆಂದು ತಿಳಿದು ಅಪ್ಪಾ ಭಕ್ತ ಕೇಶವರಾಯ ಸಾವಿರ ಬ್ರಾಹ್ಮಣರ ಭೋಜನ ಮಾಡಿಸೆಂದು ಆಜ್ಞಾ ಇತ್ತರು. ಹಳ್ಳಿ ಅಲ್ಲಿ ಸಾವಿರಜನರು ಬ್ರಾಹ್ಮಣರೆಲ್ಲಿ ದೊರೆಯುವದು ಕಷ್ಟವೆಂದು ಚಿಂತಿಸುತ್ತಿದ್ದನು. ಆಗ್ಗೆ ಒಬ್ಬ ವೃದ್ಧ ಜ್ಞಾನಿ ಬ್ರಾಹ್ಮಣರು ಅಪ್ಪಾ ಕೇಶವರಾಯ ನಿನಗೇಕೆ ಚಿಂತೆ "ಏಕಂ ಸಂತಂಬಹುಧಾ ಕಲ್ಪಯಂತೀ" ಎಂಬಂತೆ ಜಗತ್ತನ್ನೇ ಉದರದಲ್ಲಿ ಧರಿಸಿದ ಹರಿಯು ಉಭಯದಾಸರಲ್ಲಿ ಪ್ರತ್ಯಕ್ಷವಾಗಿರುವನು. "ದ್ವಾಸಪ್ತತಿ ಸಹಸ್ರ ನಾಡಿಗಳಲ್ಲಿ ಭೃಹತಿ ಸಹಸ್ರ ಸ್ತ್ರೀಪುರುಷ ಬ್ರಾಹ್ಮಣ ಮುತ್ತೈದಿಯ ರೂಪದಿಂದ ೩೬ ಸಾವಿರ ರೂಪದಿಂದ ಶ್ರೀ ಹರಿಯು ಇದುವನು. ಈ ಅನಂತನ ತೃಪ್ತಿಯೇ ಮುಖ್ಯವಾದುದೆಂದು ಪ್ರಾಣಾಗ್ನಿ ಹೋತ್ರಖಂಡ ಉಪನಿಷತ್ ವಾಕ್ಯದಂತೆ ಒಬ್ಬರಲ್ಲ ಇಬ್ಬರು ಜ್ಞಾನಿಗಳು ದೊರತಾರೆ ಭೋಜನ ಮಾಡಿಸಿರೆಂದು ಹೇಳಿದರು. ಧರ್ಮಪತ್ನಿಯಾದ ಕೇಶವರಾಯನ ಹೆಂಡತಿಯು, ಪತಿಯು ಪಾದಕ್ಕೆರಗಿ ದಾಸರನ್ನು ನಮಿಸಿ ನನಗೆ ಮುತ್ತೈದೆತನವನ್ನು ಇತ್ತು ರಕ್ಷಿಸಿದಿರೆಂದು ಪ್ರಾರ್ಥಿಸಿದಳು. ವೃದ್ಧರಾದರೂ, ಸುಮಂಗಲಿಯರೇ ಪತಿಯಸಂಗಡ ತಾಂಬೋಲು ಮೆಲಲು, ಅರ್ಹರು. ಸಕಲರಿಗೂ ಆನಂದವಾಯಿತು. ಅಂದು ನೆರವಷ್ಟು ಬ್ರಾಹ್ಮಣರ ಸಂತರ್ಪಣೆ ಅತಿ ವಿಭವದಿಂದಾಯಿತು. ಶ್ರೀ ವಿಜಯ ಗೋಪಾಲದಾಸರ ಉಭಯ ಪದಕೆರಗಿ ಅವರನ್ನು ಭೋಜನಾದಿಗಳಿಂದ ತೃಪ್ತಿಬಡಿಸಿ ಪುನಃ ಪುನಃ ಪ್ರಾಣದಾತೃರು ತಾವೇ ಭವತಾರಕರೆಂದು ಚಾಗಿಕೇಶವರಾಯನು ಪ್ರಾರ್ಥಿಸಿದನು. ದಾಸರು ಚೀಕನಬರಿವೆಗೆ ನಡೆ ತಂದರು. ಕೇಶವರಾಯನು ಮುಂದೆ ಮೂರು ವರುಷ ಜೀವಿಸಿ ದಾಸರಿಂದ ಉದ್ಧೃತನಾದನು. ಕಾಲಮೃತ್ಯುವಿನನ್ನು ಸಹಜೈಸಿದ ದಾಸರ ಮಹಿಮೆಗೆ ದೇವತೆಗಳಿಗೆ ಸಹ ಅಚ್ಚರತೋರಿತು. ಮುಂದೆ ಕೆಲವು ದಿನಗಳಲ್ಲಿಯೇ ಸಾವಿರ ಬ್ರಾಹ್ಮಣ ಭೋಜನ ದಾಸರದ್ವಾರಾ ಕೇಶವರಾಯನು ಮಾಡಿಸಿದನು. ಇಷ್ಟು, ನೈಜವಾದ ಸಂಗತಿ, ಆಧಾರ ಹಿರಿಯರು ಬರೆದ ಪುಸ್ತಕದ ಮೇಲಿಂದ ಜ್ಞಾನಿಗಳಿಂದ ಕೇಳಿದ ವಚನ. ಇದು ಸತ್ಯವೋ, ಚಾಗಿಯ ಕುಲಕರ್ಣಿ ಕೇಶವರಾಯ, ತುಂಗಾತಟವಿರುವ ಚಾಗಿಯ

ಭಾವಿಯಲ್ಲಿ ನೀರಿಲ್ಲದೇ ಕತ್ತೆಗೆ ನೀರು ಕುಡಿಸಿದ್ದು ಕೇಶವರಾಯನ ಮೊಮ್ಮಗನಿಗೆ ಆಯುಷ್ಯವನ್ನಿತ್ತದು ಮುದುಕೆ ಅಜ್ಜಿ ತನ್ನ (೭) ವರ್ಷ ಆಯುಷ್ಯವನಿತ್ತ ದಂತ ಕಥೆಯು ನಿಜವೋ ತಿಳಿಯದು. ಆ ಕೇಶವ ರಾಯರು ಕುಲಕರ್ಣಿ ಕಣ್ವಶಾಖೆಯುವನಲ್ಲ. ದೇಸಾಯಿ ಮನೆತನ ದವರು. ಚಾಗಿಯು ತುಂಗಾಟವು ನೀರಿನ ಅನಾನುಕೂಲವೆಂದಿಗೂ ಇಲ್ಲ. ದಾಸರ ಮನೆತನದ ಹಳೆಯ ಪುಸ್ತಕದ ಬರಹವು ನಿಜವೋ ದಾಸರ ಪರಂಪರೆ ಬಂದ ಇತಿಹಾಸ ನಿಜವೋ. ದೂರ ದೇಶದಿಂದ ಬಂದು ಏನೋ ಕಥೆ ಕೇಳಿ ತಮ್ಮ ಊಹಗಳನ್ನು ಕಲ್ಪಿಸಿ ಬರೆದ ಕರ್ನಾಟಕ ಭಕ್ತಿವಿಜಯದ ಮಾತು ಸತ್ಯವೋ ವಾಚಕರೇ ತಜ್ಞತೆಯಿಂದ ತಿಳಿಯ ಬಹುದಾಗಿದೆ. ಮತ್ತು ಸಂಪ್ರದಾಯಜ್ಞರಿಂದ ತಿಳಿದು ಕೆಲವು ಆಧಾರ ಮೇಲಿಂದ ೧೯೨೯ ಇಸವಿಯಲ್ಲಿ ತೆನಗಿನಲ್ಲಿ ಬರೆದ ಪ್ರಮುಟೂರ ನರಸಿಂಗ ರಾವು ಬಿ. ಎ. ರಜಿಷ್ಟ್ರಾರು "ಚಾಗಿಚೀಕಲ ಕೇಶವರಾಯುಡು ಅನುನಾತ ನಿಕಿ ೩ ಸಂವತ್ಸರ ಮುಲುತಮು ಆಯುಸ್ಸು ನಿಚ್ಚಿ" ಎಂದು ಪುಟ ೧೧ ರಲ್ಲಿ ನಿಜ ಬರೆದಿರುವರು.

ಮುಖ್ಯವಾಗಿ ಇತಿಹಾಸ ಸಂಶೋಧನದ ಬಗೆಬೇರುಂಟು. ಹಿಂದಿನ ಶಿಲಾಶಾಸನ ಕಾಗದಪತ್ರ ಪದ ಪದ್ಯ ಮತ್ತು ಪದ ಪದ್ಯಗಳಿಂದಲೂ ಸಂಪ್ರದಾಯಜ್ಞರಿಂದಲೂ, ಮತ್ತು ಸ್ಥಳಿಕ ಪೂರ್ವಿಜರ ವಚನವು ಮುಖ್ಯವಾದವು ಬೇರೊಂದು ಕಲ್ಪಿಸಿದರೆ ನಿಜವಾದ ಚರಿತ್ರೆಯಲ್ಲ. ದಾಸರ ಪದ ಸುಳಾದಿಗಳನ್ನೇ ಪದೇ ಪದೇ ಮನನಮಾಡಿ ಸಂಪ್ರಧಾಯ ಗುರು ಗಳಿಂದ ತಿಳಿಯುವದು ಮುಖ್ಯವಾದ ಕರ್ತವ್ಯ.

## ೪ ವೇಣು ಗೋಪಾಲದಾಸರಿಗೆ ಬಂದ ಅಪಮೃತ್ಯು ನಿವಾರಣೆ

ಆದವಾನಿ ಬಸಾಲತಜಂಗನ ದಿವಾನ ತಿಮ್ಮಣ್ಣನವರು ಶ್ರೀ ವಿಜಯ ರಾಯರ ಶಿಷ್ಯರಾಗಿ ತತ್ವೋಪದೇಶ ಅಂಕಿತ ಪೊಂದಿದ್ದರೆಂಬುದು ವಾಚಕರು ಮರೆತಿರಲಿಕ್ಕಿಲ್ಲ. ಈ ಪಂಗನಾಮದ ತಿಮ್ಮಣ್ಣನಯ್ಯನವರು ಏನೋ ಉತ್ಸವನಿಮಿತ್ಯ ತಮ್ಮ ಗುರುಗಳಾದ ಶ್ರೀ ವಿಜಯದಾಸರನ್ನು ಗೋಪಾಲ ದಾಸರನ್ನು ಕರೆಸಿಕೊಂಡಿದ್ದರು. ಶ್ರೀ ವಿಜಯರಾಯರ ಕೆಲ ಶಿಷ್ಯರು

ಶ್ರೀ ಗೋಪಾಲದಾಸರ ಕೆಲ ಶಿಷ್ಯರು ಸಹವಾಗಿ ಆದವಾನಿಗೆ ಬಂದಿದ್ದು ಕೆಲವು ದಿನಗಳಿದ್ದರು ಆ ಕಾಲದಲ್ಲಿ ಆಕಸ್ಮಿಕವಾಗಿ ಅಂಟು ರೋಗವಾದ ಮಾರಿಕಾ ಉಪದ್ರವು ಆದಿತೆಂದು ಹಿರಿಯರವಚನ. ಆಗಿನ ಕಾಲ ಶ್ರೀ ವೇಣುಗೋಪಾಲ ವಿಠಲರಾದ ಪಂಗನಾಮದ ತಿಮ್ಮಣ್ಣಯ್ಯನವರಿಗೆ ಈ ರೋಗವು ಬಂದೊದಗಿ ಅಪಮೃತ್ಯುಗೆ ಗುರಿಯಾದರು. ಎಲ್ಲ ಶಿಷ್ಯರು ಗಾಬರಿಯಾಗಿ ಈ ಮಹಾ ಆಪತ್ತಿನಿಂದ ರಕ್ಷಿಸಲು ಶ್ರೀ ವಿಜಯರಾಯರನ್ನು ಪ್ರಾರ್ಥಿಸಿದರು. ಶ್ರೀ ವೇಣು ಗೋಪಾಲದಾಸರು ಸಹ ೨ ಪದಗಳಿಂದ ಶ್ರೀ ಆಪತ್ತು ಪರಿಹಾರ ವಿಷಯ ಸ್ತೋತ್ರಮಾಡಿದ್ದಾರೆ. "ನಿನ್ನ ನಂಬಿದ ನರಗೆ ಅನ್ಯರಾಶಿಗಳೇನೋ ಚನ್ನಗುರು ವಿಜಯರಾಯ। ಬನ್ನ ಬಡುವೆನೋಜೀಯ ಘನ್ನಭವದೊಳು ಶಿಲುಕಿ ಇನ್ನು ಕಡೆ ಹಾಯ್ಸೊಬೇಗ॥" ಮುಂದೆ ೨ ನುಡಿಯಲ್ಲಿ ಕ್ಷೀರವಾರುಧಿಸೇರಿ ನೀರು ಮಜ್ಜಿಗೆಗಾಗಿ। ಚೀರಿ ಒದರುವದುಚಿತವೇ ? । ದಾರಿಯಲಿ ಸುಧೆಯು ರಸ ಸೂರೆಯಾಗಲು ಜಲದ ಮಾರು ಹುಡುಕುವದುಚಿತವೆ। ನೂರಾರು ವಸನದ ಹೇರು ಮನೆಯೊಳಗಿರಲು। ಕೋರಿಯುಡುವದುಚಿತವೆ ॥ ವಾರವಾರಕೆ ಹರಿಯು ತೋರುವರನ ಬಿಟ್ಟು ಕ್ರೂರರನು ಸೇವಿಸುವದಾರಿಗುಚಿತವೆ ಗುರುವೆ॥ ೨ ॥ ಹೀಗೆ ಪದ ೩೫ ಪುಟ ೨೯ ರಲ್ಲಿ ಸ್ತೋತ್ರ ಮಾಡಿರುವರಲ್ಲದೆ ಪದ ೩೬ ಪುಟ ೩೦ ರಲ್ಲಿ "ಕಾಯೊ ಕಾಯೋ ಗುರುರಾಯ ವಿಜಯರಾಯ ಕಾಯೊ ಕಾಯೊ" ಎಂದು ಪ್ರಾರ್ಥಿಸಿರುವರು. ಶ್ರೀ ಗೋಪಾಲದಾಸರ ಶಿಷ್ಯರು. ತಮ್ಮಂದಿರಾದ ಗುರು ಗೋಪಾಲವಿಠಲರು (ಪದ ೩೯ ಪುಟ ೩೧) ಕಾಯೋಗುರುರಾಯ ಕವಿಗೇಯ ಆಯಾಸ ಪರಿಹರಿಸೊ ರಾಯ ಗುರುರಾಯ ॥ ಈ ಪದದ ೪ ನೇ ನುಡಿಯಲ್ಲಿ ॥ "ಶಪಥದಿ ವೇಣುದಾಸನ್ನವಿಪಥ ನೀ ಪೊರೆಯದಿರಲು ತಪಸು ಇದ್ದೇನು ಫಲವ್ರೋಕೃಪಣವತ್ಸಲನೇ" ಎಂದು ಶ್ರೀ ವಿಜಯದಾಸರನ್ನು ಶ್ರೀ ವೇಣು ಗೋಪಾಲದಾಸರ ಆಪತ್ತು ಪರಿಹಾರ ವಿಷಯ ಪ್ರಾರ್ಥಿಸಿರುವರು. ಆಗ್ಗೆ ಕರುಣಿಗಳಾದ ಶ್ರೀ ವಿಜಯರಾಯರು ಅವರ ಪ್ರಾರ್ಥನೆಯನ್ನು ಮನ್ನಿಸಿ ವೇಣು ಗೋಪಾಲದಾಸರಿಗೆ ಬಂದ ಅಪಮೃತ್ಯು ಪರಿಹರಿಸಲು ತಾವು (೧) ಸುಳಾದಿ "ನಂಬಿದೆ ಎಲೋ ಹರಿ ಅಂಬರ ರೂಪಕಾರಿ ಬೆಂಬಲನಾಗು

ಭವರೋಗನೀಗು " ಎಂಬುವ ಸುಳಾದಿ ಮಟ್ಟತಾಳದಲ್ಲಿ ಅಪಮೃತ್ಯು ಸಾಮಿಪಿಸಿದೆ ಎನ್ನ (ಇನ್ನು) ಅಪಹಾಸವಲ್ಲವೋ। ಕೃಪೆಯಿಂದಲಿ ನೋಡು ಅಪರಂ ಪರಮ ಮಹಿಮ। ತಪಸಿಗಳ ಒಡೆಯಾ ಕಪಿ ವಿಜಯವಿಠಲ ಉಪಶಮನಗೈಸೊ ॥ ೨ ॥ ಮುಂದೆ ಜತೆಯಲ್ಲಿ " ಜತೆತಪ್ಪದಂತೆ ಜತನವ ಮಾಡಿ ನಿಜಭಾಗ। ವತರೊಳಿಡು ನಮ್ಮ ವಿಜಯವಿಠಲದಕ್ಷ॥ ಭಗವದ್ದಾಸರ ಜತೆ ತಪ್ಪದಂತೆ ಮಾಡಿ ಸಲಹೆಂದು ತಾವು ಪ್ರಾರ್ಥಿಸಿದರಲ್ಲದೇ ಗೋಪಾಲದಾಸರಿಗೆ ಶ್ರೀ ಹರಿಯನ್ನು ಪ್ರಾರ್ಥಿಸಿ ವೇಣುದಾಸನ್ನ ಪ್ರಾಣ ರಕ್ಷಿಸೆಂದು ಆಜ್ಞೆಯಿತ್ತರು. ಗುರುವನುಗ್ರಹದಿಂದ ಶಿಷ್ಯರ ಮಹತ್ಮೆ ಪ್ರಕಾರ ಗುರುವಚನದಂತೆ ಗೋಪಾಲದಾಸರು ಕೆಳಕಂಡ ಪದವನ್ನು ಮಾಡಿ ಶ್ರೀ ಹರಿಯನ್ನು ಪ್ರಾರ್ಥಿಸಿ ವೇಣು ಗೋಪಾಲವಿಠಲರಿಗೆ ಬಂದ ಅಪಮೃತ್ಯು ಪರಿಹರಿಸಿದರೆಂದು " ವೇಣಿಸುಮಪುರದಾಸರ ಹಳೆಯ ಪುಸ್ತಕದಲ್ಲಿ ಈ ರೀತಿ ಬರೆದಿರುವರು.

**ಕಾರ್ತಿಕ ಬ॥ ೧೪ ಗುರುವಾರ ಚಿ॥ ಪಂಗನಾಮ ತಿಮ್ಮಣ್ಣಗೆ ಆಯುರಾರೋಗ್ಯ** ಗುರುಗಳ ಕರುಣದಿಂದ ಮಂಗಳವಾಗಲಿ. ವೇಣು ಗೋಪಾಲರ ಬಿಂಬನನ್ನು ಪ್ರಾರ್ಥಿಸಿರುವರು.

## ಪದ ರಾಗ ಕಲ್ಯಾಣಿ ಝಂಪಿತಾಳ

ವೇಣು ಗೋಪಾಲವಿಠಲದಾತ ಮಹಾಪ್ರಭುವೆ। ನಾ ಬೇಡುವೆನು ವರವ। ಪ್ರಾಣಿ ಈತಗೆ ಬಂದ ಹಾನಿ ಹಿಂದಕೆ ಮಾಡಿ ಕ್ಷೋಣಿಯಲಿ ನಿಲಿಸಿ ಸಲಹೋ ಸ್ವಾಮಿ ॥ ಪಲ್ಲ ॥ ಸಾಧು ಜೀವರ ಸೃಜಿಸಿದುದದಕೆ ಫಲವೇನಿಲ್ಲಿ। ಬಾಧೆ ತಂದಿತ್ತಬಳಿಕ। ಈ ದಾವಶಕ ವತ್ಸರಾಯು ಮನಷ್ಯರಿಗೆ। ಮರಿಯಾದೆ ಇಲ್ಲದೆ ಪೋಯಿತೊ ॥ ಬಾಧಕವೇನೀತನಿಂದ ಅಪರಾಧ ಆಯು। ಆದದ್ದು ಕೊರತೆಯಿನ್ನು।' ಸಾಧುಗಳ ಸಮ್ಮತ ಸನ್ಮಾರ್ಗ ಪ್ರವರ್ತ। ಕಾದ ಜೀವಿಗೆ ಬರಿದೆ ಬಾಧೆ ಬಡಿಸುವರೆ ॥ ೧ ॥ ಚಿಂತಾಮಣಿಯ ವೃಕ್ಷವಿಂತಾದಕಾರಣ ಎಲ್ಲ। ಚಿಂತಿಪದು ಸಂತರುಗಳು। **ಪಿಂತಿನಾ ಜನುಮದಲಿ ಅಪಮೃತ್ಯು ಪರಿಹಾರ।** ಚಿಂತಾಯಕಾ ಕಳದಿಲ್ಲವೆ। ಚಿಂತಿತನಾಗಿಪ್ಪ ನಮ್ಮ ಹರಿಯರಿಂದ। ಸಂತೋಷ ಬಡಿಸಿನಿನ್ನ।

ಎಂತು ಪರಿ ಅವರು ಬಂದು ದುರಿತವು ಕಳೆದು। ಸಂತೋಷವಮಾಡು ಮನಕೆ ಕರುಣಿ ॥ ೨ ॥ ಬಿತ್ತಿಬೀಜವ ಬೆಳಸಿ ಕೊಯ್ಯುಕುಳಿತವಗೆ। ಮಾರು ತ್ತರವು ಇಲ್ಲ ಖರಿಯಾ। ಕಿತ್ತುತಾ ದಂಟುಗಳ ಬಾಹೋದರೊಳಗಾಗೆ। ಪ್ರತ್ಯೇಕ ಬಳ್ಳಿಯಿಂದ। ಸುತ್ತಿದ ದಂಟನು ಬಿಟ್ಟು ಕೊಡುವವರು ಸ್ನೇಹ। ಮತ್ತೆ ಬಳ್ಳಿಯು ಮೇಲಿಟ್ಟು। ಸುತ್ತ ಜನರು ಬಳ್ಳಿಯಂತೆ ಇವನಿಂದು ಪಾ। ವಿತ್ರರಾಗಿಹರು ಉಳಹೋ ಸಲಹೊ ॥ ೩ ॥ ಆವಜನುಮದಲಿಂದ ನಾವಾವೊ ಅರಿಯೆ। ನೋವು ಮನಕಿನ್ನು ಬಹಳಾ। ಜೀವರಾಗತಿಗಳು ನೀನು ಬಲ್ಲಿಯೊ ಸ್ವಾಮಿ। ಸೇವ್ಯ ಸೇವಕರ ಸ್ಥಿತಿಯು। ಈ ವಸುಧಿಯಲಿ ನಿನ್ನ ಶರಣರೇ ಸ್ವಲ್ಪವು ಆವ ಅಸುರರೆ ಬಹಳ। ಸೇವಾನುಸೇವಕರ ಬಿನ್ನ ಪವ ನೀ ವೊದಗಿ ಕೇಳಿ ಸಾಕು ಹರಿಯೆ ॥ ೪ ॥ ಪ್ರಾರ್ಥಿಸಿದೆ ನಿನ್ನ ಭಕತನ ಆರ್ತಿಯನು ಮನದಲಿ। ಕರ್ತುಯಾದದರಿಂದಲೀ ॥ ಕೀರ್ತಿ ನಿನ್ನನು ಭಕತ ಸ್ವಾರ್ಥನೆಂಬಾ ಬಿರಿದು। ವ್ಯರ್ಥ ಅನ್ಯರಿಗೆ ತುತಿಸೆ। ಕರ್ತು ನೀನಾಗಿ ತಾನಿಂದು ಮಾಡಿಸುವಂಥ। ಸತ್ಕರ್ಮಗಳು ಉಂಟು। ಪಾರ್ಥ ಸಖ ಚಲುವ ಗೋಪಾಲವಿಠಲ ಅಪ। ಮೃತ್ಯು ಪರಿಹರಿಸಿನ್ನು ಭಕತನ್ನ ಸಲಹೋ ॥ ೫ ॥.

ಈ ಪ್ರಕಾರ ಗುರುಗಳ ಆಜ್ಞೆಯಿಂದ ಶ್ರೀ ಹರಿಯನ್ನು ಸ್ತೋತ್ರ ಮಾಡಿದರು. ಶ್ರೀ ಧನ್ವಂತ್ರಿನಾಮಕ ಹರಿಯು ಸಂತುಷ್ಟನಾಗಿ, ಶ್ರೀ ವೇಣು ಗೋಪಾಲದಾಸರಿಗೆ ಬಂದ ಅಪಮೃತ್ಯು ಪರಿಹರಿಸಿ, ಆಯುರಾ ರೋಗ್ಯವಿತ್ತು ಸಲಹಿದನು.

ಈ ವಿಷಯವನ್ನೇ ತಂದೆ ಗೋಪಾಲವಿಠಲರು. ಶ್ರೀ ಗೋಪಾಲ ದಾಸರ ಸ್ತೋತ್ರ (೮೫) ನುಡಿ ಪದದಲ್ಲಿ; " ಪ್ರಾಣಸಖಗಪ ಮೃತ್ಯು ಬರುತಿರೆ। ವೇಣು ಗೋಪಾಲಕೃಷ್ಣನಾ ॥ ನಾನ ಪರಿಯಲಿ ಪ್ರಾರ್ಥಿಸಿ ಇನ್ನು ಹಾನಿ ಹಿಂದಕೆ ಮಾಡ್ದನಾ ॥ ೫೫ ॥ ಎಂದು ಕೊಂಡಾಡಿರುವರು. ಈ ಪ್ರಕಾರ ಶ್ರೀ ವಿಜಯದಾಸರು ಗೋಪಾಲದಾಸರ ದ್ವಾರಾ ಮಹಿಮೆ ಯನ್ನು ತೋರಿ ವೇಣು ಗೋಪಾಲದಾಸರ ಅಪಮೃತ್ಯು ಪರಿಹರಿಸಿದರು. ಶ್ರೀ ಹರಿಯೊಲಿದಮೇಲೆ ಏನುಂಟು ಏನಿಲ್ಲ ಮೂವರು ದೇವಾಂಶ ಸಂಭೂ

ತರು, ಮರುಳು ಮಾನವರಲ್ಲ ವಿಜಯರಾಯರು ಗೋಪಾಲದಾಸರ ದ್ವಾರವೇ.

**೫ ಇನ್ನು ಶ್ರೀ ಜಗನ್ನಾಥದಾಸರಿಗೆ ಬಂದ ಕ್ಷಯರೋಗ ಪರಿಹರಿಸಿ ಅಪಮೃತ್ಯು ನಿವಾರಣಗೈ**ಸಿದ ಮಹತ್ಮೆ ಬಹು ಆಶ್ಚರ್ಯಕರವಾಗಿದೆ. "ಕುಂಡಲಾಗಿರಿಯಲ್ಲಿ ವಿಪ್ರನು। ಕಂಡು ವಿಜಯರಾಯರಾ। ದಂಡನಮನವ ಮಾಡಿ ಕೇಳ್ದನು। ದ್ದಂಡ ಕ್ಷಯರೋಗ ಕಳಿತ್ವರಾ ॥ ೪೮ ॥ ಹರುಷದಿಂದುತ್ತನೂರು ಸೇರಲು ಪರಿಹರಾಗುವದೆಂದನು। ಬರಲು ಭಕ್ರಿಯವೊಳಗೆ ನಾಲ್ವೊತ್ತೊರುಷ ಆಯುವನಿತ್ತನು ॥ ೪೯ ॥ ಸುಧಸು ಪಾತ್ರದಿಪಿಡಿದು ಹರಿಯನು ಮುದದಿ ಸ್ಮರಿಸುತ ಕೊಟ್ಟನು। ಪದುಮನಾಭನು ಕೋಪದಿಂದಿರೆ ಶ್ರೀದಬಾರೆಂದು ಕರೆದನು ॥ ೫೦ ॥ **ತಂದೆ ಗೋಪಾಲವಿಠಲರು** ಈ ಪ್ರಕಾರ ಶ್ರೀ ಗೋಪಾಲದಾಸರ ಸ್ತೋತ್ರಗೈದಿರುವರು.

ಶ್ರೀ ವಿಜಯದಾಸರ ಅವತಾರನಂತರ ಸುಮಾರು ೪೫ ವರುಷದ ಮೇಲೆ ಬ್ಯಾಗವಾಟದಲ್ಲಿ ನರಸಪ್ಪ ಕರಣಿಕರಲ್ಲಿ ಜನಿಸಿದ ಶ್ರೀನಿವಾಸಪ್ಪನವರು ದೊಡ್ಡವರಾಗಿ ಶ್ರೀ ವರದೇಂದ್ರ ಶ್ರೀಗಳವರಲ್ಲಿ ವಿದ್ಯಾಭ್ಯಾಸ ಮಾಡಿ ಮಹಾ ಪಂಡಿತರೆನಿಸಿದರು. ಲೋಕದಲ್ಲಿ ಶ್ರೀನಿವಾಸಾಚಾರ್ಯರೆಂದು ಪ್ರಸಿದ್ಧರಾದರು. ಶ್ರೀ ವಿಜಯದಾಸರ ಖ್ಯಾತಿ ಬಹಳ. ಅವರ ಶಿಷ್ಯಗುಂಪು ನೋಡಿ ಸಹಿಸದೆ **ಕೂಸಿಮಗ ದಾಸನ ಜ್ಞಾನವೇನು ?** ಕನ್ನಡ ಪದವನ್ನು ಹಾಡುವದೇನು ? ಇತ್ಯಾದಿ ಮಾರ್ಮಿಕ ವಚನಗಳಿಂದಾ ದಾಸರ ಶಿಷ್ಯರಮುಂದೆ ನಿಂದಾ ಮಾಡಹತ್ತಿದರು. ದಾಸರ ಶಿಷ್ಯರಾದ ಗೋಪಾಲದಾಸರು ಗುರುಗಳ ನಿಂದ್ಯಯನ್ನು ಸಹಿಸಲಾರರು. ಕಾಲ ಬರಬೇಕೆಂದು ಸುಮ್ಮನಿದ್ದರು. ಸೋತ್ತಮರ ನಿಂದ್ಯಯಿಂದ ಶ್ರೀನಿವಾಸಾಚಾರ್ಯರಿಗೆ ಉದರ ಶೂಲೇ ಪ್ರಾರಂಭ. ಸಣ್ಣಾಗಿ ಜ್ವರವೇ ಕ್ಷಯ ರೋಗಕ್ಕೆ ಹಾಕಿತು ದೇಹವು ಕೃಶವಾದಿತು. ಮುಖದ ಕಾಂತಿ ಅಡಗಿತು ಮಂತ್ರಾಲಯಕ್ಕೆ ಪೋಗಿ ಸೇವಾ ಮಾಡಿದರು. ವೆಂಕಟಗಿರಿಗೆ ಶ್ರೀ ವಿಜಯದಾಸರಲ್ಲಿ ಪೋಗಿ ಶರಣಾಗತರಾಗಿರೆಂದು ಆಜ್ಞಾ ಆಯಿತು. ತಾಯಿಯಾದ ಲಕ್ಷ್ಮಮ್ಮನವರು ಅವರ ಹೆಂಡತಿ ಸಹಿತ ವೆಂಕಟಗಿರಿಗೆ

ಹೊರಟರು. ಶ್ರೀನಿವಾಸಾಚಾರ್ಯರು ಬಹುಶ್ರಮದಿಂದ ಶೇಷಪರ್ವತಕ್ಕೆ ಮುಟ್ಟಿಕೊಂಡರು. ದೇವರ ಸಂದರ್ಶನ ಮಾಡಿದರು. ಆಗ್ಗೆ ಶ್ರೀ ವಿಜಯ ದಾಸರು ಇತರ ಶಿಷ್ಯರೊಂದಿಗೆ ವೆಂಕಟಗಿರಿಯಾತ್ರೆಗೆ ಬಂದಿದ್ದರು. ಶ್ರೀ ವಿಜಯದಾಸರಿದ್ದೆಡೆಗೆ ಪೋಗಿ ದಂಡವತು ಪ್ರಣಾಮಗಳನ್ನು ಮಾಡಿದರು. ಅಪರಾಧಕ್ಷಮಿಸಿ ಉದ್ಧರಿಸಬೇಕೆಂದು ತಾಯಿ ಮಕ್ಕಳಿಬ್ಬರು ಪುನಃ ಪುನಃ ಪ್ರಾರ್ಥಿಸಿದರು. ಆಗ್ಗೆ ವಿಜಯದಾಸರು ನೀನೇನು ಅಪರಾಧ ಮಾಡಿರುವೆ, ನಮ್ಮಪ್ಪ ವೆಂಕಟನು, ನಿನ್ನಿಂದ **ಕೂಸಿಮಗ ದಾಸನೆಂದು ನುಡಿಸಿದ್ದು** ಸತ್ಯವಾಗಿದೆ ನಮ್ಮಗೇನು ಯಾವತರದ ಸಿಟ್ಟು ಕೋಪವಿಲ್ಲ. ದಾಸನಾಗ ಬೇಕಾದರೆ ಅವರ ಮಾತೃವಾದ ತಾಯಿಯು ಶಿಶುವಿನಂತೆ ನಿಷ್ಪಾಪಿ ಕೂಸಿ ಯಾಗಿರಬೇಕು. ವಂಶಶುದ್ಧತೆ ಬೇಕು. ನಮ್ಮ ನಿಷ್ಪಾಪಿಯಾದ ಕೂಸಮ್ಮ ನಲ್ಲಿ ಜನಿಸಿದ್ದಕ್ಕಾಗಿ ನನ್ನಗೆ ನೈಜವಾದ ದಾಸ ಹೆಸರು ಇಟ್ಟಿರೇ ಇದರಲ್ಲಿ ತಾವು ಆಡಿದ ತಪ್ಪೇನು ? ಎಂದು ಶ್ರೀನಿವಾಸಾಚಾರ್ಯರಿಗೆ ಕೇಳಲು ಆಗ್ಗೆ ಆಚಾರ್ಯರು ತಾವು ಮಹಾಜ್ಞಾನಿಗಳು ಬಾಲಕನ ಅಪರಾಧ ಕ್ಷಮಿಸಲು ಪುನಃ ಪ್ರಾರ್ಥಿಸಿ ನಮನ ಮಾಡಿದರು. ಕರುಣಾಳುಗಳು ದಾಸರು ಆಚಾರ್ಯರೇ ಹಾಗೆ ಆಗಲಿ, ನಾನು ನಿಮ್ಮ ರೋಗ ಕಳೆಯಲು ಈಗ ಕಾಲವಲ್ಲ, ನೀವು ಸಜ್ಜನರು ರೋಗ ಪೀಡಿತರಾಗಿ; ಆ ರೋಗ ಭಯದಿಂದಾದರೂ ಮಹಾಪರಾಧವೆಂದು ಪಶ್ಚಾತ್ತಾಪ ಹುಟ್ಟಿದೇಸರಿ. ನೀವು ಉತ್ತನೂರಿಗೆ ಹೋಗಿರಿ ಅಲ್ಲಿ ಗೋಪಾಲದಾಸರಿದ್ದಾರೆ. ಅವರೇ ನಿಮಗೆ ನೀತ ಗುರುಗಳು, ಅಲ್ಲದೇ ಅವರಿಗೆ ತಮ್ಮ ಗುರುಗಳ ನಿಂದಾಕೇಳಿ ಬಹು ಖಿನ್ನರಾಗಿದ್ದಾರೆ. ಅವರಲ್ಲಿ ನೀವು ರೋಗಕಳೆಯಲು ಪ್ರಾರ್ಥಿಸಿರಿ. ಉದ್ಧರಿಸುವರೆಂದು ಆಜ್ಞೆಯಿತ್ತು, ಉತ್ತನೂರಿಗೆ ಕಳುಹಿದರು. ದಾಸರ ಆಜ್ಞೆಯಂತೆ ಶ್ರೀನಿವಾಸಾಚಾರ್ಯರು ಗಪ್ಪಾಲಿ ಸಂಸ್ಥಾನದಲ್ಲಿ ಸೇರಿದ ಉತ್ತನೂರಿಗೆ ಬಂದರು.

ಇತ್ತ ಉತ್ತನೂರಲ್ಲಿದ್ದ ಶ್ರೀ ಗೋಪಾಲದಾಸರು ಜಾತಾಪರೋಕ್ಷಿ ಗಳು ಶ್ರೀ ವಿಜಯರಾಯ ಶಿಷ್ಯರು ಗುರುಗಳ ಪ್ರೇರಣೆಯಂತೆ ಜ್ಞಾನ ದೃಷ್ಟಿಯಿಂದ ತಿಳಿದರು. ಶ್ರೀನಿವಾಸಾರ್ಯರು ಉತ್ತನೂರಿಗೆ ಬಂದು ಶ್ರೀ ವೆಂಕಟನ ಸನ್ನಿಧಿಯಲ್ಲಿದ್ದ ಶ್ರೀ ಗೋಪಾಲದಾಸರ ಪಾದಕ್ಕೆರಗಿ

ಮಹನೀಯರೇ ಎನ್ನ ಅಪರಾಧ ಕ್ಷಮಿಸಬೇಕೆಂದು ದಂಡವತು ಪ್ರಣಾಮ ಗಳನ್ನರ್ಪಿಸಿ, ಬಂದ ಕ್ಷಯರೋಗ ಕಳೆದು ರಕ್ಷಿಸಿರೆಂದು ಪ್ರಾರ್ಥಿಸಿದರು. ಜ್ಞಾನಿಗಳಾದ ಗೋಪಾಲದಾಸರು ಸೋತ್ತಮರ ನಿಂದಾ ದ್ರೋಹದಿಂದ ಈತನ ಆಯುಷ್ಯವೆಲ್ಲ ಕ್ಷೀಣವಾಗಿದೆ. ಸಜ್ಜೀವಿ ಈತನಿಂದ ಮುಂದೆ ಲೋಕೋದ್ಧಾರವಾಗಬೇಕಾಗಿದೆ. ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವು ಶ್ರೀ ಹರಿ ಮಾಡಿಸಿದ್ದಾನೆಂದು ತಿಳಿದರು. ಮತ್ತು ಆಧಿಕಾರಿಕ ವಾಣಿಯಿಂದ ಇನ್ನು ಮೇಲೆ ಇಂಥ ದೊಡ್ಡವರ ನಿಂದ್ಯ ನೀನು ಮಾಡುವಿಯೋ ಎಂದು ಕೇಳಲು ಶ್ರೀನಿವಾಸಾಚಾರ್ಯರ್ ಇಲ್ಲದಾಸರೆ ಸರ್ವಥಾ ಕನಸಿನಲ್ಲಿ ಸಹ ಉತ್ತಮರಲ್ಲಿ ದ್ರೋಹ ಕಲ್ಪಿಸುವದಿಲ್ಲೆಂದು ಪ್ರತಿಜ್ಞಾ ಮಾಡಿಸಿದರು. ಶ್ರೀನಿವಾಸಾಚಾರ್ಯರ ಮನಸ್ಸು ಕರಗಿದೆಂದು ತಿಳಿದರು. ಆಗ್ಗ ಶ್ರೀ ಗೋಪಾಲದಾಸರು ನಿತ್ಯಾ ಸ್ನಾನಾನ್ಹೀಕ ದೇವತಾರ್ಚನೆ ನೈವೇದ್ಯ ವಾದಬಳಿಕ, ದೇವರಿಗೆ ಸಮರ್ಪಿಸಿದ ಕೆಂಜೋಳದ ಭಕ್ರಿಯ (ರೊಟ್ಟಿ)ನ್ನು ಅಭಿಮಂತ್ರಿಸಿ "ಎನ್ನ ಬಿನ್ನಪಕೇಳು ಧನ್ವಂತ್ರಿ ದಯಮಾಡು ಸಣ್ಣವನು ಇವಕೇವಲಾ" ಎಂದು ಧನ್ವಂತ್ರಿ ದೇವರನ್ನು ಪ್ರಾರ್ಥಿಸಿದರು. ಮತ್ತು ತಮ್ಮ ಆಯುಷ್ಯದಲ್ಲಿಯ ನಾಲ್ವತ್ತು ವರುಷ ಆಯುಷ್ಯ ಶ್ರೀ ವಿಜಯ ರಾಯರ ಸೂಚನೆಯಂತೆ ಭಕ್ರಿಯೊಳಗೆ ಆಯುರ್ದಾನ ದೇವತೆಗಳನ್ನು ಸನ್ನಿಧಿಕರಿಸಿದರು. ಶ್ರೀನಿವಾಸಾಚಾರ್ಯರಿಗೆ ಆ ಕೆಂಜೋಳದ ರೊಟ್ಟಿ ಕೊಟ್ಟು ತಿನ್ನಲು ಆಜ್ಞಾಪಿಸಿದರು. ಕ್ಷಯರೋಗಿ ಮನುಜಗೆ ರೊಟ್ಟಿ ತಿಂದು ಅರಗಿಸುವ ಶಕ್ತಿ ಸಾಲದು, ಆಗ್ಗ ಗೋಪಾಲದಾಸರು ಅನುಗ್ರಹಿಸಿ ಅವರ ಮೈಮೇಲೆ ಕೈಯಾಡಿಸಿ ರೊಟ್ಟಿ ಶ್ರೀನಿವಾಸಾಚಾರ್ಯರಿಗೆ ತಿನಿಸಿ ದರು. ಕ್ರಮೇಣ ರೋಗವು ಪರಿಹಾರವಾದಿತು. ಕ್ಷೀಣಾಯು ಆದ ಆಚಾರ್ಯರಿಗೆ ಆಯುಸ್ಸು ಹೆಚ್ಚಿತು. ಗುರುಕೃಪೆಯಾಗಿ ಮಂತ್ರೋಪದೇಶ ವಾದಿತು. ದಿವ್ಯ ಜ್ಞಾನಪುಟ್ಟಿ ಶ್ರೀ ಗೋಪಾಲದಾಸರ ದ್ವಾರಾ ಶ್ರೀ ವಿಜಯದಾಸರಲ್ಲಿ ನಿಸ್ಸೀಮ ಭಕ್ತಿಯುಂಟಾದಿತು. ಶ್ರೀ ಗೋಪಾಲ ದಾಸರು ನೀನು ಪಂಥರಪುರಕ್ಕೆ ಹೋಗಿ ಭೀಮರಥಿ ಸ್ನಾನಮಾಡು ಆಗ್ಗ ದೇವರು ನಿನಗೆ ಅನುಗ್ರಹಿಸುವನು. ಶ್ರೀ ಪಾಂಡುರಂಗನ ದರ್ಶನ ಮಾಡಿಕೊ ಎಂತ ಆಜ್ಞಾಯಿತ್ತರು. ಗುರುಗಳಾಜ್ಞೆಯಂತೆ ಪಂಥರಿಗೆ

ಪೋಗಿ ಭೀಮರಥಿಯಲ್ಲಿ ಅವಗಾಹನ ಸ್ನಾನ ಮಾಡುವಾಗ್ಗೆ ಒಂದು ಚೌಕ ಕರಿಕಲ್ಲು ಮೇಲೆ "ಜಗನ್ನಾಥ ವಿಠ್ಠಲವೆಂಬ ಅಂಕಿತ ಬರದದ್ದು ಶ್ರೀನಿವಾಸಾಚಾರ್ಯರ ತಲೆಯಮೇಲೆ ಬಂದುಕುಳತಿತು. ಆಗ್ಗೆ ಜಗನ್ನಾಥ ವಿಠಲಾಂಕಿತದಿಂದ "ಪಿಡಿ ಎನ್ನ ಕೈಯ್ಯಾ ರಂಗಯ್ಯಾ" ಎಂಬೊ ಪದ ಸ್ತೋತ್ರಮಾಡಿ ಪಾಂಡುರಂಗನ ದರ್ಶನದಿಂದ ಪುನೀತರಾದರು. ಪಂಢರಿ ಯಾತ್ರೆಯಿಂದ ಮರಳಿಬಂದು ಶ್ರೀ ಗೋಪಾಲದಾಸರ ದ್ವಾರಾ ಶ್ರೀ ವಿಜಯರಾಯರ ಸಂದರ್ಶನ ಮಾಡಿಕೊಂಡು ಉದ್ಧೃತರಾದರು. ಲೋಕದಲ್ಲಿ ಜಗನ್ನಾಥದಾಸರೆಂದು ಪ್ರಖ್ಯಾತರಾದರು ಶ್ರೀ ವಿಜಯ ರಾಯರ ಸಂದರ್ಶನಾನಂದದಿಂದ, ತಮ್ಮ ಅಪರಾಧವನ್ನು ಕ್ಷಮಾಪನ ಮಾಡಿ ಉದ್ಧಾರಗೈದ ಮಹತ್ಮೆ ಜ್ಞಾನ ಪೂರ್ವಕವಾಗಿ ಸಧೃಡಸ್ನೇಹದಿಂದ

"ರತುನ ದೊರಕಿತಲ್ಲ ಎನಗೊಂದು ರತುನ ದೊರಕಿತಲ್ಲ || ರತುನ ದೊರಕಿತು ಎನ್ನ ಜನುಮ ಪವಿತುರವಾಯಿತು || ಎಂದು ಸ್ತೋತ್ರಗೈಯುತ್ತ ೨ ನೇ ನುಡಿ "ಪಥದಿನಾ ಬರುತಿರಲು ಥಳಥಳವೆಂದು ಅತಿ ಕಾಂತಿಯು ಕಾಣಲು ಬೆರಗಾಗುತ | ಅತಿ ಚೋದ್ಯನವಾಡಲು | ಸೇವಿಸುತಿರೆ || ಸತತ ಕರ ಪಿಡಿದಾದರಿಸಿ | ಮನೋರಥವ ಪೂರೈಸುತಲಿ ಎನಗೆ | ಸನ್ಮತಿಯ ಪಾಲಿಸಿ ಮೋಕ್ಷ ಪಥವನೆ | ಅತಿಶಯದಿ ತೋರಿಸುತ | ಪೊರೆಯುವ || ೨ || ಹೀಗೆ ೩ ನುಡಿ ಸ್ತೋತ್ರ ಮಾಡಿರುವರು. (ಪದ ೩೭ ಪುಟ ೩೦)

ಇಂತು ಗೋಪಾಲದಾಸರ ದ್ವಾರಾ ಜಗನ್ನಾಥದಾಸರಿಗೆ ರೋಗ ನಿವಾರಣ ಆಯುರ್ದಾನ ಮಂತ್ರೋಪದೇಶ ಮಾಡಿ ಉದ್ಧರಿಸಿದ ಪರಮ ಕರುಣಾಳುಗಳು, ಪರರು ಬಗೆದ ನಿಂದ್ಯಗಳನ್ನು ಮನಕೆತಾರರು. ಶ್ರೀ ವಿಜಯದಾಸರ ಅನುಗ್ರಹದಿಂದಲೇ ಜಗನ್ನಾಥದಾಸರ ದ್ವಾರಾ ಶ್ರೀ ಹರಿ ಕಥಾಮೃತಸಾರ ಗ್ರಂಥವು ಸಜ್ಜನರಿಗೆ ಉದ್ಧಾರಕ್ಕೆ ಕಾರಣವಾಗಿದೆ.

ಹೀಗೆ ಒಂದಲ್ಲ ಎರಡಲ್ಲ ಅನೇಕ ಸದ್ಭಕ್ತರ ಅಪಮೃತ್ಯು ಪರಿಹರಿಸಿ ತಾವು ಸ್ವತಃ ಆಯುರ್ದಾನ ಮಾಡಿ, ಕೆಲ ಭಕ್ತರನ್ನು ಶ್ರೀ ಗೋಪಾಲ ದಾಸರ ದ್ವಾರಾ ಆಯುಸ್ಸು ಕೊಡಿಸಿ ರಕ್ಷಿಸಿದ ಮಹಾ ಮಹಿಮೆಯುಳ್ಳ ಶ್ರೀ ವಿಜಯದಾಸರಿವರು.

ಆಗಲೂ ಕೆಲ ಜನರು ಕುಚೋದ್ಯದಿಂದ ಏನು ಆಯುಸ್ಸು ಕೊಟ್ಟರೊ ? ಅಪಮೃತ್ಯುನಿವಾರಣ ಮಾಡಿದರೊ ತಿಳಿಯದು. ಏನೊ ದಾಸರು ಬೂಟಾಟಿಕೆ ಹೂಡಿಕೊಂಡು ಜನಕ್ಕೆ ಮೋಹ ಗೊಳಿಸುವರೆಂದು ಈಗಲು ಕೆಲವರು ಏನ್ರೀ–ನಿಮ್ಮದಾಸರು ಆಯುಸ್ಸು ಕೊಟ್ರಂತೆರೀ– ಎಂದು ವ್ಯಂಗ ಮಾತುಗಳಾಡುವದು ಸಹ ಕೇಳುತ್ತೇವೆ. ಕೇಳಿದವರಿಗೆ ಸರಿಯಾದ ಉತ್ತರವೂ ಹೇಳಿ ಸಮಾಧಾನಗೊಳಿಸುತ್ತೇವೆ. ಕುಚೇದ್ಯ ರಿಗೆ ಕುಚೋದ್ಯವೆ ಸರಿ, ಮನುಜ ಜಾತಿಯಲ್ಲೇ (೪) ಲಕ್ಷಯೋನಿ ಪ್ರಭೇದ ಅವರ ಜ್ಞಾನ ಗುಣ ಕರ್ಮಶೀಲ ಬೇರೆಯುಂಟು. ಮುಕ್ತಿ ಯೋಗ್ಯರಲ್ಲಿ ದೇವ, ಋಷಿ, ಪಿತೃ, ಪ:( ರಾಜರು) ನರಮನುಜರೆಂದುಂಟು. ಅವರವರ ಲೋಕ ಅನ್ನ ವಸ್ತ್ರ ಆಯುಸ್ಸು ಅಧಿಕಾರ ಬೇರೆ ಬೇರೆ ದೇವರು ಕೊಟ್ಟಿದ್ದಾನೆ. ಧರ್ಮಸ್ಥಾಪನ ಮಾಡಲು ಬಂದ ಸಾಂಶ ದೇವತೆಗಳು ಏನು ಬೇಕಾದದ್ದು ಪೂರೈಸಲು ಸಮರ್ಥರಿರುವರು. ಪಂಚ ಭೂತಗಳು ಯೋಗಿಶ್ರೇಷ್ಠರ ಆಧೀನವಾಗಿರುತ್ತವೆ. ತ್ರಿಲೋಕ ಸಂಚಾರ ತ್ರಿಕಾಲಜ್ಞಾನ ತಮ್ಮಕಿಂತಲೂ ಅಧಮಜೀವರ ಜ್ಞಾನ ಅವರಿಗುಂಟು. ಮೃತ್ಯುಮಾರಿಗಳೆಲ್ಲ ದೇವತೆಗಳಾಧೀನರಾಗಿರುವರು. ಈ ಮೃತ್ಯು ಮಾರಿ ಗಳು ದೇವತೆಗಳ ಆಜ್ಞಾ ಮೀರಲರಿಯರು. " ಕಾಲನಾಮಕ ಭಗವಂತ ನಿನ್ನಯ ಭೀತಿ। ಕಾಲ ನಾಮಕಳಾದ ದುರ್ಗಿಯಳಿಗೆ। ಕಾಲಗರುಡ ಶೇಷರಿಗೆ ದುರ್ಗಾಭಯ। ಕಾಲಯಮುನಿಗೆ ಇವರ ಭಯ। ಕಾಲನೆಂಬೋ ಯಮುನ ತಮ್ಮನಿಗೆ ಆಗುವದೊ। ಕಾಲ ಮೃತ್ಯುವಿಗೆ ಈ ಕಾಲನಭಯ। ಕಾಲದೂತರಿಗೆ ಭಯ ಇವರಿಂದಾಗುವದು। ಕ್ಷುದ್ರಕಾಲ। ದೇವತೆಗಳಿಗೆ ದೂತರ ಭಯ। ಕಾಲಕಾಲಕೆ ಇರಲು ಸ್ವಾತಂತ್ರದಲಿ ಲೇಶ। ಕಾಲ ವಾದರೂ ನರನ ಮುಟ್ಟುವರೆ। ಕಾಲನಿಯಾಮಕ ನಿನ್ನ ನಂಬಲು ಸರ್ವ। ಕಾಲದಲಿ ಸುಖ ಉಂಟು ನಿರೋಗದಿ। ಕಾಲದೇಶತಾ ಪೂರ್ಣ ವಿಜಯ ವಿಠ್ಠಲ ನಿನ್ನ। ಕಾಲಿಗೆ ಎರಗುವೆನು ಕರವಿಡಿದು ಸಲಹೊ॥ ಎಂದು ಶ್ರೀ ವಿಜಯರಾಯರ ವಚನ. ಚಾಗಿ ಕೇಶವರಾಯನ ವಿಷಯ ಪ್ರಾರ್ಥಿಸಿ ದಂತೆ ಮೃತ್ಯುಮಾರಿ ಯಮರಾಯ ಉತ್ತಮ ದೇವತೆಗಳ ಆಧೀನರಾಗಿ ರುವರು. ದೇವತೆಗಳಾದ ಭೀಷ್ಮದ್ರೋಣರೆ ಸಾಕ್ಷಿ. ಸ್ವಚ್ಛಂದ ಮರಣಿ

ಗಳಾಗಿದ್ದರು. ಅಲ್ಲದೆ, ದೇವರು ಬ್ರಹ್ಮಾಂಡದಲ್ಲಿ ಒದೊಂದು ಅಧಿಕಾರ ಒಬ್ಬೊಬ್ಬ ದೇವತೆಗಳಿಗೆ ಕೊಟ್ಟು ಅವರಲ್ಲಿ ನಿಂದು ಕಾರ್ಯನಡೆಸುವನು. ಒಬ್ಬ ಧನಿಕ ಕೋಟ್ಯಾಧೀಶನಲ್ಲಿದ್ದ ದ್ರವ್ಯವು ಅವನ ಆಧೀನವಾಗಿ ಬೇಕಾದಷ್ಟು ದ್ರವ್ಯ ಕೊಟ್ಟಂತೆ ಜ್ಞಾನಾಯು ರೂಪರಾದ ವಾಯು ದೇವರು ದೇವತೆಗಳಲ್ಲಿ ನಿಂದು ಜ್ಞಾನವನ್ನು ಆಯಸ್ಸನ್ನು ಕೊಡಲು ಸಮರ್ಥರು. ವಾಯುಕೃಪೆಯಿಂದಲೇ ದಾಸರು ಆಯುರ್ದಾನ ಮಾಡಿದರು. ಜ್ಞಾನ ಕೊಟ್ಟರು ಮನುಜರಿಂದ ಸರ್ವಥಾ ಸಾಧ್ಯವಾಗದು ಇದು ಶತಸಿದ್ಧ.

ಲೋಕದಲ್ಲಿ ವೈಜ್ಞಾನಿಕರು ಎಷ್ಟೋ ಸೂಕ್ಷ್ಮತರ ಜಡ ರಸಾಯನಗಳಿಂದ ಗರ್ಭಕೋಶ ರಚಿಸಿ, ಗರ್ಭದಲ್ಲಿ ಕೆಲವು ದ್ರಾವಕದಿಂದ, ಮನುಜಾಕಾರ ದೇಹವನ್ನೂ ಸಹ ಮಾಡಬಲ್ಲರು. ಇದು ಕೆಲವು ದೇಶದಲ್ಲಿ ಕಂಡುಬಂದದೆ. ಆದರೆ ಅಶರೀರದಲ್ಲಿ ಪ್ರಾಣ ಚೇಷ್ಟಾ ಮಾಡಿಸಲು ಸಮರ್ಥರಾಗಿಲ್ಲ. ಅಗುವದೂ ಇಲ್ಲ. ಮಳೆ, ಜನನ, ಮರಣ, ಮನುಜ ಸಾಧೀನವಲ್ಲ. ಪ್ರಾಣಪ್ರದರಾದ ವಾಯುದೇವರು ಪ್ರವೇಶಿಸಿದರೆ ಜೀವನಿಗೆ ಚೇಷ್ಟಾಪ್ರವೃತ್ತ ಆಗುವದು. ಇದು ದೇವಶ್ರೇಷ್ಠರ ವ್ಯಾಪಾರ. ಮನುಷ್ಯನು ಶ್ವಾಸನಿರೋಧ ಮಾಡಿ, ಯೋಗ ಮಾರ್ಗದಿಂದ ಆಯುಸ್ಸು ಬೆಳಸಿಕೊಳ್ಳಬಹುದೆಂದು ಕೆಲ ಹಟಯೋಗಿಗಳ ಮತವು ನಿಜವಾದರೂ ಯೋಗ ಸಾಮರ್ಥ್ಯಯನ್ನು ಕೊಡುವವರಾರು? ಕೊಟ್ಟು ನಡೆಸುವವರಾರು? ಜೀವನು ದೇಹಕ್ಕೆ ಹೇಗೆ ಬಂದ? ತಂದವರಾರು? ಇಟ್ಟವರಾರು? ಇಟ್ಟಮೇಲೆಯೂ ಚೇಷ್ಟೆ ನಡಿಸುವರಾರು? ಈ ವಿಚಾರವನ್ನು ಶ್ರೀ ವಿಜಯದಾಸರ ಕವನಗಳಿಂದಲೇ ಗುರುದ್ವಾರಾ ತಿಳಿದುಕೊಂಡರೆ ಸಕಲ ಸಾಧನವು ಸಾಧ್ಯವಾಗುವಲ್ಲಿ ಸಂದೇಹವಿಲ್ಲ.

## ಶ್ರೀ ವಿಜಯದಾಸರ ಅವತಾರ ಮುಖ್ಯ ಕರ್ತವ್ಯ, ಅವರು ರಚಿಸಿದ ಪದ ಸುಳಾದಿ ಸಂಖ್ಯೆ

ಹಿಂದೆ ಸವಿಸ್ತರ ಪೇಳಿದಂತೆ ಅನೇಕ ಮಹಾ ಮಹಿಮೆಗಳನ್ನು ತೋರಿದ್ದು ದೇವತೆಗಳಾದವರಿಗೆ ಅಚ್ಚರವಲ್ಲ. ಇವರ ಅವತಾರ ಮುಖ್ಯ

ಕರ್ತವ್ಯವೇನಂದರೆ ದಾಸರೆ ಸುಳಾದಿ ೫ ಪುಟ ೬-೭ ರಲ್ಲಿ ಹೇಳಿರುವ ದೇನಂದರೆ " ಸಿರಿಮಧ್ವಮುನಿಕೃತ ಸಿದ್ಧಾಂತಸಾರವನ್ನು। ಗುರುವ್ಯಾಸ ಮುನಿ ಮುಖದಿಂದ ತಿಳಿದುಕೊಂಡು ತರತಮ್ಯ ಪಂಚಭೇದ ಮೊದಲಾದ ತತ್ವಗಳ। ಪರಿಶೋಧನವಗೈದು ಮಂದರಿಗೆ। ಹರಿಕರುಣವ ಮಾಳ್ಪ ತತ್ವರಹಸ್ಯವನ್ನು। ಪರಿಪರಿ ಸುಳಾದಿ ಪದ ಮುಖದಿ ಪ್ರಾಕೃತದಿ। ಸಿರಿ ವಿಜಯ ವಿಠಲನ ಪ್ರೀತಿಗೋಸುಗ। **ತಿರಿಪಾದೋನ ಪಂಚಲಕ್ಷ ಪೇಳಿ ಯೆಂದು** ॥ ೩ ॥ ಮುಂದೆ ಮಟ್ಟತಾಳದಲ್ಲಿ ಸಾಧು ಸಮ್ಮತವೆನಿಪಾ। ಪಾದಗಳ ಪೂರೈಸುತ। ವೋದ ಸಂಸ್ಕೃತವೆಂದು ಸಾದರದಲಿ ಪಠಿಸಿ। ಭೂಧರ ವಿಜಯವಿಠಲನ್ನ ಪಾದವನೆ ಕಾಂಬುವದೆ ಸತ್ಯ ॥ ೨ ॥ ವೆಂದು ಶ್ರೀ ವಿಜಯದಾಸರು ತಮ್ಮ ಅ ವ ತಾ ರ ಮುಖ್ಯ ಕರ್ತವ್ಯವಿದೆಂದು ಹೇಳಿದ್ದಾರೆ.

ಶ್ರೀ ಪುರಂದರದಾಸರು ರಚಿಸಿದ ಪಂಚಲಕ್ಷ ಪದಗಳಿಗೆ ತ್ರಿಪಾದೂನ ಮೂರು ಪಾದಕಡಿಮೆ ಎಂದು ಶ್ರೀ ವಿಜಯದಾಸರು ಕಂಠರವೀಣವಾಗಿ ಪೇಳಿದ್ದಾರೆ, ಚಿಪ್ಪಗಿರಿ ಸೋಮ ಪುರಹಳೆಯ ಪುಸ್ತಕದಲ್ಲಿಯೂ ಸಹ **" ತಿರಿಪಾದೋನ ಪಂಚಲಕ್ಷವೆಂದೆ ಇರುವದು "** ಇದಲ್ಲದೆ ಶ್ರೀ ಪುರಂದರದಾಸರು ರಚಿಸಿದ ಗ್ರಂಥ ವಿವರವು " ಜಗದ ಪಾವನಗೋಸುಗ ಸುರಮುನಿನಗಧರನ್ನೇ ಭಜಿಸಿ ಎಂಬ ಸುಳಾದಿಯ ಅಟ್ಟತಾಳದಲ್ಲಿ " ಸೃಷ್ಟಿ ಯೊಳಗೆ ಎಲ್ಲ ಗಣಿತ ಮಾಡಲಾಗಿ **ಮೆಟ್ಟಕೆತ್ರಿಪಾದ ಕಡಿಮೆ ಐದು ಲಕ್ಷ "** ಇಷ್ಟಾದವು ದಾಸರು ಪೇಳಿದ ಪದ। ಇಷ್ಟದೈವನಾದ ವಿಜಯ ವಿಠ್ಠಲಹರಿಯ ಗುಟ್ಟನಿಂದಲಿ ಸಲಿಸಿ ಕುಣಿ ಕುಣಿಸುತಲಿ ॥ ೬ ॥ (ಪುರಂ ದರದಾಸರು ಪ್ರಕಟನೆ (೧) ರಲ್ಲಿ ಸುಳಾದಿ (೧) ಪುಟ ೩೦ ನೋಡುವದು) ಅಲ್ಲದೆ ಪ್ರಕಟನೆ (೧) ಪುಟ ೮೦ ಪದ ೮೪ ರಲ್ಲಿಯೂ ಶ್ರೀ ಪುರಂದರ ದಾಸರು ವಾಸುದೇವನ ಕಥಾಚರಿತಾ ಮೃತಸಾರ। ವ್ಯಾಸರಾಯರನು ಗ್ರಹದಿ ಕ್ಲಪ್ತ ನಾಮಗಳ ಪೇಳ್ವೆ " ನೆಂಬ ಪದದಲ್ಲಿಯೂ ಸಹ ತಾವೆ ನಾಲ್ಕುಲಕ್ಷ ಇಪ್ಪತೈದುಸಾವಿರ ಪದಗಳೆಂದು ಹೇಳಿದ್ದಾರೆ. ಶುದ್ಧ ಪ್ರತಿ ನಮ್ಮಲ್ಲಿ ಅಪರೋಕ್ಷಜ್ಞಾನಿಗಳಾದ ಶ್ರೀ ಪ್ರಾಣೇಶದಾಸರು ಬರೆದಾರೆ; ಇಷ್ಟು ಪ್ರಮಾಣಗಳಿರಲು ಪಾದೋನ, ಲಕ್ಷಕ್ಕೆ ೨೫ ಸಾವಿರ ಪದ ಕಡಿಮೆ

ಇದ್ದವನ್ನು ಶ್ರೀ ವಿಜಯದಾಸರು ಪೂರೈಸಿರುವರೆಂದು ಪೇಳುತ್ತಾರೆ. ಇದ ರಂತೆ ಪ್ರಚಾರದಲ್ಲಿಯೂ ತಿಳುವಳಿಕೆಯಾಗಿದೆ. ಸಜ್ಜನರಾದವರು ವಿಚಾರ ಮಾಡಿ ಮೇಲಿನ ಎಲ್ಲ ಸುಳಾದಿ ಪದಗಳ ಆಧಾರ ಮೇಲಿಂದ ಮೂರು ಪಾದ ಕಡಿಮೆಗೆ ೭೫ ಸಾವಿರ ಪದಗಳನ್ನು ಮಾಡಿ ಪೂರೈಸಿದರೆಂದು ತಿಳಿ ಯುವದಾಗಿ ಪ್ರಾರ್ಥನೆ. **ಶ್ರೀ ವಿಜಯದಾಸರು ೭೫ ಸಾವಿರ ಪದ ಸುಳಾದಿಗಳಲ್ಲಿ** ಯಾವದು ಎಷ್ಟು ಸಂಖ್ಯಾ ಮಾಡಿರುವರೆಂಬುದು ಗೊತ್ತಾಗಿಲ್ಲ.

ಮುಖ್ಯ ಸಾರಾಂಶವೇನಂದರೆ ಮಧ್ವಮತದ ತತ್ವಗಳ ಮುದ್ದೆ ಮಾಡಿ ತತ್ವೋಪದೇಶಗೈದಿರುವರು. ಶ್ರೀ ಪುರಂದರದಾಸರು ಯಾವ ವಿಷಯ ಬಿಟ್ಟಿದ್ದರು. ಶ್ರೀ ವಿಜಯದಾಸರು ಆ ವಿಷಯಗಳನ್ನು ಪೂರೈ ಸಿದರೆಂದು ಶ್ರೀ ವಿಜಯದಾಸರು ರಚಿಸಿದ ಸುಳಾದಿಗಳ ಅರ್ಥವೇ ಸಾಕ್ಷಿ ಯಾಗಿವೆ. ಶ್ರಮಬಟ್ಟು ೧೫ ವರ್ಷದಿಂದ ಸಂಶೋಧನ ಮಾಡಿದಾಗ್ಯೂ ೫೨೫ ಸುಳಾದಿಗಳೇ ದೊರೆತವೆ. ಇದರಕಿಂತಲೂ ಹೆಚ್ಚಿನ ಸುಳಾದಿಗಳು ಯಾರವೂ ದೊರೆತಿಲ್ಲ. ಸುಳಾದಿಗಳಲ್ಲಿ ಅಲ್ಲಲ್ಲಿ ಶ್ರೀ ವಿಷ್ಣು ಸಹಸ್ರ ನಾಮಗಳನ್ನು ಪರಿವರ್ತನೆ ಮಾಡಿರುವರು. ಇದು ಏನು ಕಾರಣ ವಿರ ಬಹುದೆಂದು ವಿಚಾರಾಂಶವಾಗಿತ್ತು. ವಿಷ್ಣು ಸಹಸ್ರ ನಾಮಾರ್ಥ ವಿಚಾರ ಮಾಡುವದರಲ್ಲಿ "ಬೃಹತಿಸಹಸ್ರಋಕ್" ಈ ಬ್ರಹತಿಸಹಸ್ರ ಋಕ್ಕುಗಳ ಶ್ರುತ್ಯ ಅರ್ಥವೇ ಸುಳಾದಿ ರೂಪವಾಗಿ ರಚಿಸಿದ್ದಾರೆಂದು ನಿರ್ಧಾರವಾಗಿ ಹೇಳಬಹುದು. "ಮಧ್ವಮುನಿ ಹೃದಯವೇ ಪ್ರಾಕೃತ ಗ್ರಂಥವಿದು ಜನರಿಗೆ ಪೇಳಬೇಕಾದುದೆಂದು" ದಾಸರೆ ಹೇಳಿದ್ದಾರೆ. ಕೆಲವೆಡೆ ಬೃಹತೀಸಹಸ್ರಋಗಾರ್ಥಗಳನ್ನು ನೋಡಿ ಮನಸ್ಸಿಗೆ ಆನಂದ ವಾದಿತು. ಎಷ್ಟೋ ಜನರನ್ನು ಕುರಿತು ಕೇಳಿಕೊಂಡರೂ ಒಬ್ಬರಿಂದಲೂ ಮನಸ್ಸು ತೃಪ್ತಿಯಾಗಲಿಲ್ಲ.

ಶ್ರೀ ಮತ್ಪೂಜ್ಯ ಪಂಡಿತವರ್ಯ ಮಧ್ವಶಾಸ್ತ್ರಸಂಪನ್ನ ಜಾಳಿಹಾಳ ಶ್ರೀನಿವಾಸಾರ್ಯರು ದಾಸರಾಯರ ಅನೇಕ ಸುಳಾದಿಗಳನ್ನು ಮನನ ಮಾಡಿರುವರು. ಈ ಜ್ಞಾನಿಗಳ ಮುಂದೆ ವಿಜ್ಞಾಪಿಸಲು ಸರಿಯಾಗಿ ಇವೆಲ್ಲ ಸುಳಾದಿಗಳ ಋಗಾರ್ಥಬೋಧಕ ಬೃಹತೀಸಹಸ್ರಶ್ರುತಿಗಳ ಅರ್ಥ

ವಿವೆ. ಕೆಲವು ಪೂರ್ತಿ ದೊರೆತಿಲ್ಲವೆಂದು ಆಜ್ಞಾಪಿಸಿದರು. ಅವರ ವಚನ ದಿಂದ ನನ್ನ ಮನಸ್ಸಿನಲ್ಲಿ ದಾಸರು ಸರಿಯಾಗಿ ತಿಳಿಸಿರುವರೆಂದು ಆನಂದ ಪಟ್ಟೆನು.

ಇವೆಲ್ಲವೂ ಶ್ರುತಿಗಳ ಅರ್ಥವಿವೆ ಅಲ್ಲಲ್ಲಿ ಕೆಲ ಶ್ರುತಿಗಳನ್ನೇ ಉದಾ ಹರಿಸಿರುವರು. ವೇದಾರ್ಥ ಉಪನಿಷದರ್ಥ, ಪುರಾಣಾರ್ಥ, ಭಾರತಾರ್ಥ ಅನೇಕ ಉಪಪುರಾಣಾರ್ಥಗಳೇ ದಾಸರ ಕವನಗಳಲ್ಲಿ ತುಂಬಿ ತುಳುಕು ತ್ತಿವೆ. ಪರಮತ ನಿರಾಕರಣಪೂರ್ವಕ ಮಧ್ವಮತಸಾರವನ್ನು ವಿವರಿಸಿ ಅನೇಕ ತತ್ವಗಳನ್ನು ಚನ್ನಾಗಿ ತಿಳಿಸಿ ಪ್ರಮೇಯ ವಿವರಿಸಿ ಪೇಳುವಲ್ಲಿ ಶ್ರೀ ವಿಜಯದಾಸರಿಗೆ ಸರಿಗಾಣೆ !! ಶ್ರೀ ಪುರಂದರದಾಸರ ಪಟ್ಟದಾನೆ.

ಶ್ರೀ ಮಧ್ವಾಚಾರ್ಯರ ಗ್ರಂಥಗಳಿಗೆ ಶ್ರೀ ಟೀಕಾರಾಯರ ಟೀಕೆ ಗಳಿದ್ದಂತೆ ಶ್ರೀ ಪುರಂದರ ಉಪನಿಷತುಗಳಿಗೆ ಟೀಕಾರೂಪವಾದ ಅರ್ಥ ಬೋಧಿಸುತ್ತವೆ. ಶಾಸ್ತ್ರಾರ್ಥ ವಿಚಾರತರತಮ ಪಂಚಭೇದಜ್ಞಾನ ದೇವರ ಸೃಷ್ಟಿವಿಚಾರ ಸಾಧನವಿಚಾರ, ಉಪಾಸನಾ ಸ್ತೋತ್ರಗಳೆಲ್ಲ ಪ್ರಮೇಯ ಪುಂಜವಾದವುಗಳನೆಲ್ಲ ಬೋಧಿಸುತ್ತ ಶಿಷ್ಯರನ್ನು ಉದ್ಧಾರ ಮಾಡಿದರಲ್ಲದೇ ಮಾಯಾವಾದಿಗಳನ್ನು ಸದೆಬಡೆದರು. ಸಾಕ್ಷಾತ ಶಿಷ್ಯ ರಾದ ಶ್ರೀ ಗೋಪಾಲದಾಸರು ಮೋಹನದಾಸರು ವರ್ಣಿಸಿರುವರು.

**ಶ್ರೀ ವಿಜಯದಾಸರು ರಾಮಶಾಸ್ತ್ರಿಯೆಂಬ** ವಾದಿಯನ್ನು ಜೈಸಿ ಶ್ರೀ ವಾದೀಂದ್ರಸ್ವಾಮಿಗಳಿಂದ ಮುದ್ರಾಧಾರಣಮಾಡಿಸಿ ಆತನಿಗೆ ತತ್ವೋಪದೇಶ ಗೈದ ಸಂಗತಿ ವಿಚಾರಾರ್ಹವಾಗಿದೆ. ವಾದಿನಿಗ್ರಹ ಶಕ್ತಿಯೂ ದಾಸರಲ್ಲೇ ಅತಿ ವಿಚಿತ್ರವಾಗಿತ್ತೆಂದು ಪೇಳಿದ್ದಾರೆ. ಶ್ರೀ ವಿಜಯದಾಸರ ಕಾಲದಲ್ಲಿ ರಾಮಶಾಸ್ತ್ರಿಗಳೆಂಬ ಉದ್ದಾಮ ಅದ್ವೈತ ಪಂಡಿತರು ಅನೇಕ ಬಗೆಯಾಗಿ ಅದ್ವೈತ ಶಾಸ್ತ್ರವನ್ನು ಬೀರುತ್ತಲಿದ್ದರು. "ಪುಶಿಯು ಜಗವೆಲ್ಲ ದೈವವು ತಾನೆನುತ। ಅಸಮವೇದ ಪೌರುಷ ಎಂಬಂಥ। ಭಸುಮಧಾರಿಯನೇ ಕರದೆ। ಅವನ। ಅಸುರ ಭಾವವನೆಲ್ಲ ಮುರಿದೆ ನಮ್ಮ। ಬಿಸಿಜಾಕ್ಷಪರನೆಂದು ಒರದೇ ಸ್ವಾಮಿ। ಎಸೆವದ್ವಾದಶ ನಾಮ ಪಂಚ ಮುದ್ರೆಯನಿಡಿಸಿ। ನಸುನಗುತಲವನ ಪೊರದೆ ಬಿಡದೆ ॥ ೪ ॥

ಎಂದು ಮೋಹನದಾಸರ ವಚನ ಪದ ೨೭ ಪುಟ ೨೩ ಮತ್ತು "ಭೇದ ವಿಲ್ಲಯೆಂಬ ಮಾಯವಾದಿ ರಾಮಶಾಸ್ತ್ರಿ ಬಂದು। ಪಾದಕೆರಗಿ ಅವನ ತಮವ ಛೇದಿಸಿ ಸುಜ್ಞಾನವಿತ್ತೆ ॥೧॥ ವಾದಿಗಿರಿಗೆ ಇಂದ್ರಸ್ಥಾನೀಯ ರಾದ ಗುರುಗಳಿಂದ ಮುದ್ರಾಧಾರಣೆಯ ಕೊಡಿಸಿ ಪರಮ। ಆದರದಿಂದ ಅವನ ಕಾಯ್ದೆ ॥೨॥ ಭಸುಮವನ್ನೆ ತೆಗಸಿ ಅವನ ನೊಸಲ ಲೂರ್ಧ್ವ ತಿಲಕ ಪಚ್ಚಿಸಿ। ಎಸವ ಪಂಚಮುದ್ರಿ ದ್ವಾದಶನಾಮ ಧರಿಪಂತೆ ಮಾಡಿದೆ ॥೩॥ ಎಂದು ಮೋಹನದಾಸರ ಪದ ೨೩ ಪುಟ ೨೦ ರಲ್ಲಿ ವಿವರಣೆ ಇದೆ. ಹೀಗೆ ಅನೇಕ ಜನವಾದಿಗಳನ್ನು ಗೆದ್ದರು.

ಮುಂದೆ ಮತ್ತು "ಶ್ರೀ ಮನೋಹರ ಒಡೆಯ ವಿರಂಚಿಯ್ಯೋಮ ಕೇಶಸುರರು ಆತನ। ತಾಮರಸಗ ಧೂಳಿಗರೆಂದು ಈ ಮರಿಯಾದಿಗಳ ಪೇಳ್ದೆ ॥೪॥ ಇಂತು ಹರಿಸರ್ವೋತ್ತಮನು ರಮಾ ಬ್ರಹ್ಮಾದಿಗಳು ತದ್ದಾಸರು ಜಗತ್ತು ಸತ್ಯವೆಂದು ಬೋಧಿಸಿದರಲ್ಲದೆ "ಧರೆಯೊಳಿದ್ದ ಭಕ್ತ ಜನರ ಪೊರೆವನೆಂಬ ಬಿರಿದು ಒಹಿಸಿ। ಸಿರಿ ಮೋಹನವಿಠಲನಂಘ್ರಿ ಸರ ಸಿರುಹವ ಎನಗೆ ತೋರ್ದೆ॥ ಎಂದು ಮೋಹನದಾಸರ ವಚನವಲ್ಲದೆ ಶ್ರೀ ಗೋಪಾಲದಾಸರು ಸಹ "ಮಧ್ವಮತಕೆ ಅವಿರುದ್ಧವಾಗಿ ಕವನ ಬದ್ಧಾದಿ ವಿಜಯರಾಯ। **ಶಬ್ದ ಸಂಗುತಿಯಿಂದ ಸಿದ್ಧಾಂತ ತತ್ವ ಮುದ್ದೆ ಮಾಡಿದಿಯೊ ॥** ವಿಜಯರಾಯ। ತಿದ್ದಿ **ತತ್ವಸಾರ ಸುಳಾದಿ ಪದಗಳು** ಬುದ್ಧಿಲಿ ವಿಜಯರಾಯ। ತದ್ಧಿಮಿಧಿಮಿಕೆಂದು ಹೃದಯಾಲ ಯದಿ ಹರಿಯ ಎದ್ದು ಕುಣಿಸಿದೆಯೊ ॥ವಿ॥ ೧೧॥ ಹೀಗೆ ಎಲ್ಲ ಶಿಷ್ಯರು ದಾಸರನ್ನು ಹೊಗಳಿರುವರು. ಇತರ ಮತಗಳ ತತ್ವಗಳು ಸರಿಯೆಲ್ಲವೆಂದು ಬಹು ಯುಕ್ತಿ ಶಾಸ್ತ್ರಾರ್ಥಗಳಿಂದ ಪೇಳಿದ್ದಾರೆ. ಇವರು ಕೇವಲ ಬರಿ ಗೊಡ್ಡು ಕನ್ನಡ ದಾಸರಲ್ಲದೇ ಸಂಸ್ಕೃತ ಭಾಷೆಯ ತಜ್ಞರೂ ಶಾಸ್ತ್ರಜ್ಞರೂ ತತ್ವವೇತ್ತರೂ ಇದ್ದು, ಭಕ್ತಜನ ಉದ್ಧಾರಾರ್ಥವಾಗಿ ಶ್ರೀ ಪುರಂದರ ದಾಸರ ಮಾರ್ಗವನ್ನೇ ಪಿಡಿದು ಪ್ರಾಕೃತಭಾಷಾದಲ್ಲಿ ಅನೇಕ ಪದ ಸುಳಾದಿ ವೃತ್ತನಾಮ ಉಗಾಭೋಗಗಳನ್ನು ರಚಿಸಿರುವರು. ಇಂಥ ಮಹಾ ಮೇಧಾವಿಗಳು.

## ಸಾಹಿತ್ಯ ಸಾಂಗತ್ಯ ವಿಭಾಗ

ಮಹಾ ಅಪರಿಮಿತ ಸಮುದ್ರವಾಗಿದೆ. **"ಶಬ್ದಸಂಗುತಿಯಿಂದ ಸಿದ್ಧಾಂತ ತತ್ವಮುದ್ದೆ ಮಾಡಿದಿಯೊ ವಿಜಯರಾಯ"** ಎಂದು ಗೋಪಾಲದಾಸರು ಶಬ್ದಸಂಗತಿ ಎಂಬ ಒಂದೇ ಪದದಲ್ಲಿ ಸಾಹಿತ್ಯ ಸಾಂಗತ್ಯವೆಲ್ಲ ಅಡಕವಾಗಿದೆ. ಶ್ರೀ ದಾಸರು ಭಾಷಾತಜ್ಞರಲ್ಲ ಛಂದಸ್ಸು ವ್ಯಾಕರಣ ಅಲಂಕಾರ ರಸಭಾವವನ್ನರಿದವರಲ್ಲವೆಂದು ಕೆಲವರು ಹೇಳುತ್ತಾರೆ.

ದಾಸರು ಸಾಹಿತ್ಯ ಸಮುದ್ರ ಶಫರಿಗಳು, ಸಾಂಗತ್ಯರತ್ನಾಕರರು, ಛಂದಸ್ಸು ಅಲಂಕಾರಾಬ್ಧಿ ಮಣಿಗಣ ಭೂಷಿತರು. ಸದ್ವಿದ್ಯಾವಾರಿಧಿಗಳು, ಭಾಷಾಶಬ್ದ ಲಾಲಿತ್ಯಾದಿ ಸಾರಸ್ವತರು, ಮಹಾ ವ್ಯಾಕರಣಾಂಬೋಧಿ, ಗಳು, ಯತಿವಡಿ–ಗಣ–ಪ್ರಾಸು ಪ್ರಾಸಾದಿಕ ಸಾಗರರು. ದುರ್ಮತಾಬ್ಧಿ ವಡಭಾನಲರು, ಮಧ್ವಮತಾಬ್ಧಿ ಚಕೋರ ಚಂದ್ರಮರು. ದಾಸ ಸಾಹಿತ್ಯವು ಸಪ್ತದ್ವೀಪ ಸಪ್ತಸಮುದ್ರ ಸಪ್ತಲೋಕ ಸಪ್ತಪ್ರಾಕಾರ ಧಾಮತ್ರಯದಲ್ಲಿ ವ್ಯಾಪಿಸಿ, ವ್ಯಕ್ತತಯಾ ಸದಾ ಇರುವ ಮಹಾ ಆಳವಾದ ಸಾಹಿತ್ಯಸಾಗರ ಮನುಜರಿಂದ, ಪಾರುಗಾಣಲು ಶಕ್ಯವಲ್ಲ.

ಶ್ರೀ ವಿಜಯದಾಸರ ಸಾಹಿತ್ಯದಲ್ಲಿ ವಿಶ್ವ ಸಾಹಿತ್ಯವೇ ತುಂಬಿ ತುಳುಕುತ್ತಲಿವೆ. ವಿಶ್ವ ಸಾಹಿತ್ಯದ ಮೇಲ್ಮಟ್ಟನಲ್ಲಿರುವ ಹರಿದಾಸ ಸಾಹಿತ್ಯವನ್ನು ಅನೇಕಜನರು ಪೊಗಳಿದ್ದಾರೆ. ವೇದ-ಉಪನಿಷತ್ ಇತಿಹಾಸ ಪುರಾಣಾದಿಗಳ ಅರ್ಥ ಸಂಗೀತಶಾಸ್ತ್ರ ರಾಗ ತಾಳಲಯ ಅಭಿನಯಶಾಸ್ತ್ರ, ಭರತಶಾಸ್ತ್ರ, ಶಬ್ದಶಾಸ್ತ್ರ, ಯೋಗಶಾಸ್ತ್ರ, ವ್ಯಾಕರಣ ಛಂದಸ್ಸು ಅಲಂಕಾರಾದಿಗಳು ಇರುವವಲ್ಲದೆ ರಸಸ್ಥಾಯಿ ಅಂಗ ಉಪಾಂಗ ರಸಗಳು ತುಂಬಿ ತುಳುಕುತ್ತವೆ. ಭಾಷಾಲಾಲಿತ್ಯ, ಭಾಷಾಪ್ರೌಢಿಮೆ ಪ್ರಾಸು ಅನುಪ್ರಾಸು ಆದಿ ಅಂತ್ಯ ಮಧ್ಯಪ್ರಾಸುಗಳ ಸೊಬಗು ಹೆಚ್ಚಾಗಿದೆ. ಅಲ್ಲೆಲ್ಲೆ ಛಾಂದಸಿ ಪ್ರಯೋಗಗಳು ಸಾಹಿತಿಗಳನ್ನು ಅಚ್ಚರಗೊಳಿಸುವಂತಿವೆ. ಅಲ್ಲಲ್ಲೆ ದಾಸರ ಗುಟ್ಟು ಮುಂಡಿಗೆಗಳು ಭಾಷಾತ್ರವನ್ನು ತಿಳಿಸಿ ಭಾರತದಲ್ಲಿಯ ಭಾಷಾತ್ರಯ ಸಮಾಧಿ ಗುಹ್ಯ-ದರ್ಶನ, ಭಾಷಾ ನೆನಪಿಗೆ ತಂದು ಕೊಡುವಂತಿವೆ. ಜಾನಪದ ಸಾಹಿತ್ಯ ಪ್ರಯೋಗ

ಗಳು ಕಂಡು ಬರುತ್ತವೆ. ಈ ಕಾವ್ಯಗಳು ವಿಶೇಷವಾಗಿ ಸಾಂಗತ್ಯಕ್ಕೊಳ ಪಟ್ಟಿರುವದರಿಂದ ರಸಭರಿತವಾಗಿ ಮನಸ್ಸು ಕರಗಿಸುವ ಪ್ರಾಸಾದಿಕವಾಣಿ ಹರಿದಾಸ ಶ್ರೇಷ್ಠರದಾಗಿದೆ. ಶ್ರೀ ವಿಜಯದಾಸರು ಶ್ರೀ ಪುರಂದರದಾಸ ರಂತೆ ವಿಶೇಷ ಸಂಸ್ಕೃತ ಶಬ್ದಗಳನ್ನು ಪ್ರಯೋಗಮಾಡಿಲ್ಲ. ಕೇವಲ ಕನ್ನಡ ಶಬ್ದಗಳೇ ಪ್ರಯೋಗಿಸಿರುವರು. ಕನ್ನಡ ಭಾಷಾ ಶೈಲಿಯು ವರ್ಣನೀಯವಾಗಿದೆ.

ಭಗವಂತನ ಸ್ತೋತ್ರವು ಭಕ್ತಿರಸವೂ ಜ್ಞಾನ, ವೈರಾಗ್ಯಗಳನ್ನು ಬೋಧಿಸುವ ತತ್ವವಿಚಾರವೂ ಪ್ರಮೇಯ ಸನ್ನಿವೇಶವೂ ಅದರ ವಿವರ ಣೆಯು ಶ್ರೀ ವಿಜಯದಾಸರು ವಿಸ್ತರಿಸಿರುವಂತೆ ಮತ್ತಾರೂ ಹೇಳಿಲ್ಲ. ನವರಸಾಲಂಕಾರಗಳಲ್ಲಿಯೇ ಶ್ರೀ ಹರಿಯ ಮಹಿಮಾ ಕೊಂಡಾಡಿದ ಶ್ರೀ ವಿಜಯದಾಸರ ಸಾಹಿತ್ಯ ಮೇಲಾದದ್ದು.

ಶೃಂಗಾರ ರಸದಲ್ಲಿ ಶ್ರೀ ಕೃಷ್ಣನ ರಾಸಕ್ರೀಡಾದಿಗಳು ವೀರರಸದಲ್ಲಿ "ನರಸಿಂಹ" ಭೀಮಸೇನ ದೇವರ ಸ್ತೋತ್ರಗಳೂ, ಕರುಣಾರಸದಲ್ಲಿ– ಭಕ್ತಿಯುತರಾದ ಗೋಪಿಕಾಸ್ತ್ರೀಯರ ಭಕ್ತಿ ಶೃಂಗಾರಗಳಲ್ಲಿ ವಿರಹವೂ, ಶ್ರೀ ಹರಿಯ ಅನೇಕ ಸ್ತೋತ್ರ ಪ್ರಾರ್ಥನೆಗಳು ಅದ್ಭುತ ರಸಗಳಲ್ಲಿ ರಾಮಕೃಷ್ಣ ಹನುಮಭೀಮಾದಿ ದೇವತೆಗಳು ಮಾನವತ್ವೇನ ಅವತಾರ ದಲ್ಲಿ ದೋರಿದ ಅದ್ಭುತ ಲೀಲೆಗಳು ಕೆಲವು ವೇಳೆ ವೀರರಸದಿಂದ ಕೂಡಿ ರುವದು. ಹಾಸ್ಯರಸದಲ್ಲಿ ಶ್ರೀ ಕೃಷ್ಣನ ಬಾಲಲೀಲೆ ಗೋಪಿಕಾವಿಲಾಸ ರಾಮದೂತ ಹನುಮಂತ ರಾವಣ ಸಂವಾದ ಶ್ರೀ ಲಕ್ಷ್ಮೀನಾರಾಯಣರ ವಿನೋದ ಉಣಟಣೀ ಪದಗಳೂ, ಇದಕ್ಕೆ ಸಂಬಂಧಿಸಿರುವ ಭೀಭಿತ್ಸು ರಸವನ್ನೂ, ಮತ್ತು ವೀರರಸಕ್ಕೆ ಸಂಬಂಧಿಸಿದ ಭಯಾನಕ ರಸವನ್ನು ರೌದ್ರ ರಸವನ್ನು ಮನೋಹರವಾಗಿ ವರ್ಣಿಸಿರುವರು. ಶ್ರೀ ಹರಿದಾಸರೆಲ್ಲ ಶಾಂತ ರಸವನ್ನು ಇದಕ್ಕೆ ಸಂಬಂಧಿಸಿದ ಕರುಣಾ ರಸವನ್ನು ವಿಶೇಷವಾಗಿ ಪ್ರಯೋಗಿಸಿರುವರು. ಸಾಹಿತ್ಯಸಾಗರ ಅಪಾರ ಶ್ರೀ ಹರಿದಾಸರ ಪ್ರಾಸಾ ದಿಕ ವಾಣಿ ಅಮೋಘ. ಒಂದೊಂದು ವಿಷಯಗಳನ್ನೇ ಸವಿಸ್ತರವಾಗಿ ದಾಸರು ತಿಳಿಸಿದಷ್ಟು ವಿವರಿಸಿ ಬರೆದರೆ ಒಂದೊಂದು ಹೊತ್ತಿಗೆ ಯಾಗು ತ್ತವೆ. ಕಾಲವೂ ಆಯುಷ್ಯವೂ ಅನ್ನವೂ ದ್ರವ್ಯವೂ, ಬೇಕು. ಗ್ರಂಥ ಬಾಹುಲ್ಯಭಯದಿಂದ ಇಷ್ಟೇ ಸಂಕ್ಷೇಪದಿಂದ ವಿವರಿಸಿದೆ.

ಮುಖ್ಯವಾಗಿ ಶ್ರೀ ವಿಜಯದಾಸರು ಶ್ರೀ ಪುರಂದರದಾಸರಂತೆ ಅನೇಕ ಸುಳಾದಿಗಳನ್ನು ಉಗಾಭೋಗಗಳನ್ನು ಪದಗಳನ್ನು ರಚಿಸಿರುವರು. ಕೆಲವು ವೃತ್ತನಾಮುಗಳನ್ನು ಸಹ ಮಾಡಿದ್ದಾರೆ.

## ಪದವೆಂದರೆ ಏನು ಸುಳಾದಿ ಎಂದರೇನು

**ಉಗಾಭೋಗವೆಂದರೆ ಏನು :—** ಇದು ಮಾತ್ರ ಈಗ್ಗೆ ವಿಚಾರ ಮಾಡತಕ್ಕ ವಿಷಯವಾಗಿದೆ. ಯಾಕಂದರೆ ಹರಿದಾಸರ ಹೊರತಾಗಿ ಇತರ ಕವಿಗಳು ಸಂಗೀತದ ಈ ವಿಷಯವನ್ನೇ ಬಿಟ್ಟಿರುವರು. ಜೈನ ವೀರಶೈವಕವಿಗಳಂತೂ ಈ ಸುಳಾದಿ ಉಗಾಭೋಗಗಳ ಸಮೀಪಕ್ಕೆ ಸಹ ಹೋಗಿಲ್ಲ. ಈ ದೊರೆತ ಸುಳಾದಿಗಳ ಮೇಲಿಂದ–

ಹರಿದಾಸ ಪರಂಪರೆಯಲ್ಲಿ ಮೊದಲಿಗೆ ಆದ್ಯರು ೬೦ ಜನರು. ನಂತರ ಶ್ರೀ ಪಾದರಾಜರು ಶ್ರೀ ವ್ಯಾಸರಾಜರು ಶ್ರೀ ಹಯವದನರು ಶ್ರೀ ಪುರಂದರ ದಾಸರು ಅವರ ಸಮಕಾಲೀನರು ಕೆಲವರು ಕೆಲವು ಸಂಕ್ಷಿಪ್ತವಾಗಿ ಸುಳಾದಿ ಗಳನ್ನು ರಚಿಸಿರುವರು.

ಈ ಸುಳಾದಿಗಳ ಕನ್ನಡ ಭಾಷಾ ಪ್ರೌಢಿಮೆಯು ಶ್ರೀ ವಿಜಯದಾಸ ರಿಂದ ಅತಿ ವಿಸ್ತ್ರಿತವಾಗಿದೆಂಬುದಕ್ಕೆ ಏನು ಸಂದೇಹವಿಲ್ಲ. ಈ ಉಪ ಲಬ್ಧವಾಗಿರುವ ಅವರ ಸುಳಾದಿಗಳೇ ಸಾಕ್ಷಿ "ಹಿಂದೆ" ಬೇರೊಬ್ಬರಿಂದ ಪ್ರಕಟಿಸಿದ ಹರಿದಾಸತ್ಯ ಎಂಬ ಗ್ರಂಥದಲ್ಲಿ "ಸುಳಾದಿ ಸುಳುವಾದ ಹಾದಿ ಸುಳಾದಿ ಎಂಬುದಕ್ಕಿಂತ ಅರ್ಥದಲ್ಲಿ ಎಷ್ಟೇ ಭಿನ್ನಾಭಿಪ್ರಾಯ ವಿದ್ದರೂ ಬೇರೊಂದು ಸಮರ್ಪಕವಾದ ಅರ್ಥ ದೊರೆತಿಲ್ಲ ಸಂಗೀತಕಾರರು ಈ ಅರ್ಥವನ್ನು ಅರಿತಿಲ್ಲ" ವೆಂದು ಹಿಂದಿನ ಸಂಗೀತಕಾರ ಗ್ರಂಥಗಳನ್ನು ನೋಡದೆ ವಿಮರ್ಶೆ ಮಾಡದೇ ಬರೆದಿರುವರೆಂದು ತೋರುತ್ತದೆ.

ಈಗಿನ ಕಾಲದಲ್ಲಿಯೂ ಸಹ ಕೆಲಜನರು ಈ ಸುಳಾದಿಗಳ ಉಗಾ ಭೋಗ ಲಕ್ಷಣಗಳನ್ನು ಕಂಡು ಹಿಡಿದಿದಾರೆ. ಹಿಂದಿನ ಗಾನಶಾಸ್ತ್ರ ಕಲಾಭಿಜ್ಞರು ಈ ವಿಷಯ ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿರುವರು. ಈ ಸುಳಾದಿಗಳು ಕೇವಲ ಸಂಗೀತಕ್ಕೆ ಸೇರಿವೆ "ಸುಡು" ಶಬ್ದ ಗೀತೆ ಎಂತ ಅರ್ಥವಾಗುತ ದೆ.

ಸುಳಾದಿ ಸಪ್ತತಾಳ ಪೂರ್ವದ ಸಪ್ತದೇಶಿಯ ತಾಳಗಳು. ಇವುಗಳಿಂದಲೇ ಈಗ ಪ್ರಚಾರದಲ್ಲಿರುವ ಸಪ್ತತಾಳಗಳು ಹೊರಟವು. ಹಿಂದಿನ ಸಂಗೀತಕಾರರಲ್ಲಿ ಸುಪ್ರಸಿದ್ಧರಾದ.

**ವೆಂಕಟಮುಖಿ, ಚತುರ್ದಂಡಿ ಪ್ರಕಾಶಿಕಾದಲ್ಲಿ** "ಧ್ರುವೋಮಠ್ಯೋರೂಪಕಶ್ಚ ಝುಂಪಾತ್ರಿಪುಟ ಏವಚ। ಅಟ್ಟತಾಲೈಕತಾಲಶ್ಚೇತ್ಯಷ್ಟಾಲಂಕೃತಯುಸ್ಮೃತಾ॥ ಏತಾನ್ ಧ್ರುವಾದಿಕಾನ್ ಸಪ್ತ ತಾಲಾನ್ ಸೂಡಾದಿ ( ಸುಳಾದಿ ) ಸಂಜ್ಞಕಾನ್। ತಾಲಾಃ ಸೂಲಾದಿಕಶ್ಚೈತೇ ಸರ್ವೇ ಏವೇಶಿನಿರ್ಣಯಃ" ಎಂದು ಸುಳಾದಿಗಳ ಲಕ್ಷಣವನ್ನು ಹೇಳಿದ್ದಾರೆ

## ಉ ಗಾ ಭೋ ೀ ಗ

ಉದ್ಗ್ರಾಹಾ ಭೋಗ ಆಲಾಪದ ೫ ಧಾತುಗಳು ೧) ಉದ್ಗ್ರಾಹ ೨) ಮೇಲಾಪಕ ೩) ಧ್ರುವ ೪) ಅಂತರ ೫) ಆಭೋಗ, ( ಸಂಗೀತ ರತ್ನಾಕರ ೪ ನೇ ಪ್ರಬಂಧ ೮-೯ ಶ್ಲೋಕಗಳು) ಹೀಗೆ ಸುಳಾದಿ ಉಗಾಭೋಗಗಳ ಲಕ್ಷಣಗಳನ್ನು ಈ ವೆಂಕಟಮುಖಿ ಗೋವಿಂದ ದೀಕ್ಷಿತ ಪುತ್ರನು ತಮ್ಮ ತಂದೆಗಳ ಸಂಗೀತ ಸುಧಾನಿಧಿಯಲ್ಲಿ ಬರೆದಿರುವದನ್ನು ತಾನು ಬರೆದಿರುವೆನೆಂದು ಹೇಳಿದ್ದಾರೆ. ಅಂದರೆ ಸುಳಾದಿಗಳು ಪೂರ್ವಕಾಲದಿಂದಲೂ ಸಂಗೀತದಲ್ಲಿ ಸೇರಿವೆನ್ನುವದಕ್ಕೆ ಆಧಾರ.

ಈ ವೆಂಕಟಮುಖಿಗಳು ವಿಜಯ ರಾಘವನಾಯಕನ ಕಾಲದವರು ವಿಜಯರಾಘವನಾಯಕನ ತಂದೆ ರಘುನಾಥನ ಭೂಪಾಲನಕಾಲ ೧೬೧೪ ಇಸವಿ ಎಂತ ಗೊತ್ತಾಗುತ್ತದೆ. ಎಂದರೆ ಈಗ ೩೫೦ ವರ್ಷ ಪೂರ್ವದಲ್ಲೆ ವೆಂಕಟಮುಖಿಗಳು ತಮ್ಮ ತಂದೆಗಳು ಬರೆದ ಪರಂಪರಾಗತ ಸಂಗೀತ ಶಾಸ್ತ್ರವನ್ನೇ ಬರೆದಿರುವರು. ಈ ವೆಂಕಟಮುಖಿಗಳ " ಚತುರ್ದಂಡೀ ಪ್ರಕಾಶ .ದಕ್ಷಣ ಭಾರತದಲ್ಲೆಲ್ಲ ಸುಪ್ರಸಿದ್ಧ ಲಕ್ಷಣ ಗ್ರಂಥವಾಗಿದೆ. ಈ ವೆಂಕಟಮುಖಿಗಳು ರಾಗ ಮೇಳಗಳ ಸಂಖ್ಯೆ ೭೨ ಎಂದು ನಿಶ್ಚೈಸಿದ್ದಾರೆಂದು ತಿಳಿಯುತ್ತದೆ ". ( ಇದು ವಿಚಾರಂಶ).

ಹಿಂದಿನ ಪೂರ್ವರಾಗಮಾಲಿಗೆ ಸಂಗೀತ ಶಾಸ್ತ್ರಾನುಗುಣ್ಯವಾಗಿ ಸುಳಾದಿ ಉಗಾಭೋಗಗಳನ್ನು ಹೆಚ್ಚಾಗಿ ಬಳಿಕಿಗೆ ತಂದವರು ಮೊದಲು

ಹರಿದಾಸರು ಆದ್ಯರು ಶ್ರೀಪಾದರಾಜಾದಿ ಪ್ರಭೃತಿಗಳು ಹರಿದಾಸರೆಲ್ಲರೂ ಕೇವಲ ಭಕ್ತಿ ಪಂಥದವರು ಆ ಭಕ್ತಿಪಂಥ ಮಾರ್ಗಾವಿಲಂಬಿಗಳಾಗಲು ಸಾಧನದ ಬಗೆ ಸಾಧನದಲ್ಲಿ ಮನಸ್ಸಿನ ಭಾವ ಪ್ರಾಮುಖ್ಯ, ಆ ಮನೋಭಾವ ವ್ಯಕ್ತತೆಗೆ, ಮೊದಲಿಗೆ ದುಷ್ಕರ್ಮಾಚರಣ ಪರಿತ್ಯಾಗ ಸತ್ಕರ್ಮಾಚರಣೆ ರತರಾಗುವಿಕೆ, ಗುರುಸೇವಾ, ಗುರುಮುಖ ಶಾಸ್ತ್ರವಿಚಾರ, ವಿಚಾರವಾದುದು ಮನನ. ಮನನಾಂತರ, ಆತ್ಮಸಂಯಮನ ಧ್ಯಾನ, ಧ್ಯಾನಕ್ಕೆ ಮನಸ್ಸು ದೃಢೀಕರಿಸುವಿಕೆ, ಧಾರಣ ಧ್ಯಾನದಿಂದ ವಿಷಯ ವಾಸನಾ ನೀಗುವಿಕೆ, ವಿಷಯರಾಹಿತ್ಯದಿಂದ ವೈರಾಗ್ಯ–ವೈರಾಗ್ಯದಿಂದ ಸಾಮಾನ್ಯ ಭಕ್ತಿ, ಇದರಿಂದ ವಿಜ್ಞಾನ–ವಿಜ್ಞಾನದಿಂದ ವಿಶೇಷ ಭಕ್ತಿ, ಇದರಿಂದ ಪರಮಾತ್ಮನ ಪ್ರಸಾದ-ಪ್ರಸಾದದಿಂದ ಪರಮಾತ್ಮನ ಸಾಕ್ಷಾತ್ಕಾರ ಬಿಂಬ ದರ್ಶನ, ನಂತರ ಮಹಾ ಪ್ರಸಾದದಿಂದ ಸಂಚಿತಾಗಾಮಿ ಕರ್ಮನಾಶ, ಪ್ರಾರಬ್ಧ ಅನುಭೋಗಕ್ಷಯ, ವಿಶೇಷಾಕಾರವಾದ ಬಿಂಬದರ್ಶನ ಲಿಂಗ ದೇಹಭಂಗ ಸ್ವಸೂರೂಪಾನಂದಾವಿರ್ಭಾವಮೋಕ್ಷ, ಈ ಪ್ರಕಾರ ಮೆಟ್ಟಿಲು ಒಂದೊಂದು ಮೆಟ್ಟಿಲುಗಳಗಳಲ್ಲಿ ಮನೋಗತ ಭಾವವು ಒಂದೊಂದು ಪರಿಯಾಗಿರುವದು.

ಈ ಸಾಧನಗತವಾದದೆಲ್ಲ ೭ ಮೆಟ್ಟಿಲಗಳಲ್ಲಿರುವವು. ಈ ೭ ಮೆಟ್ಟಿಲುಗಳಲ್ಲಿ ಮನೋವಿಕಾಸ ಅದರ ಭಾವಗಳು ಬೇರೆ ಬೇರೆ ಯಾಗಿರುವವು. ಅಲ್ಲದೇ ಧ್ಯಾನಗತ ವಿಷಯವು ಸಹ ೭ ವಿಭಾಗವಾಗಿ ಸಪ್ತ ಮರುತಗಳ ಕಾರ್ಯ ಅಲ್ಲಿ ಸಪ್ತದೇವತೆಗಳು ಅಭಿಮಾನಿತ್ವೇನ ನಿಯಮನ. ಅಲ್ಲಿರುವ ಮನೋಭಾವುಗಳ ಲಕ್ಷಣ ಗುರುಹರಿ ಪ್ರಸಾದವುಳ್ಳ ಅಧ್ಯಾತ್ಮ ಕೋವಿದ ಜ್ಞಾನಿಗಳಾದ ಗುರುಗಳಿಂದ ತಿಳಿಯಬಹುದಾಗಿದೆ. ಇಲ್ಲಿ ಸೂಕ್ಷ್ಮರೀತಿ ದಿಗ್ದರ್ಶನಮಾಡಿ ಸಿದ್ದಾದರೂ ಗುರುಕೃಪೆ ಮುಂದಿರಿವ ಮನಸ್ಸು ಕೈ ಲೆಕ್ಕಣಿಯನ್ನು ಹಿಂದೊತ್ತಿ ತಡೆದ ಮನೋ ಅನುಭವವೇ ಸಾಕ್ಷಿ ಇಷ್ಟು ಸಾಕು.

ಈ ಮನೋಭಾವಗಳು ಅಧ್ಯಾತ್ಮಕೋವಿದರಾದ ಅಪರೋಕ್ಷ ಜ್ಞಾನಿಗಳಲ್ಲೇವೆ ವ್ಯಕ್ತಗೊಳಿಸುವವು ತಮ್ಮ ಅನುಭವವನ್ನು ಶಿಷ್ಯರಿಗೆ ಬೋಧಿಸಲು ಹರಿದಾಸವರ್ಯರೇ ಸುಳಾದಿ ಉಗಾಭೋಗಗಳ ಪ್ರವೃತ್ತಕ

ರಾದರು. ಇತರರಿಂದ ಸಾಧ್ಯವಲ್ಲ ಸಾಧ್ಯವಾಗಲೂ ಕಾರಣವಿಲ್ಲ. ಈ ಮನೋಭಾವಗಳನ್ನು ದಾಸವರ್ಯರು ಸಪ್ತ ತಾಳಗತವಾದ "ಸೂಡಾದಿ" ಸುಳಾದಿ (ಳ, ಡ, ಯೋರಭೇದ ಎಂಬ ನಿಯಮದಂತೆ) ಸುಳಾದಿಯು ಸಂಗೀತ ಪ್ರಬೇಧವಾದ ಗಾನವಿದ್ಯ. ಪದ ( ಕೀರ್ತನವು ) ಅನೇಕರಾಗ ಮಾಲಿಕೆಗಳಲ್ಲಿದ್ದು ಒಂದೇ ತಾಳದಲ್ಲಿದ್ದಂತೆ, ತದ್ವಿಪರೀತವಾಗಿ ಒಂದೇ ರಾಗ ಅನೇಕ ತಾಳಗತಿಗಳಲ್ಲಿರುವದು ಸುಳಾದಿ.

ಮೇಲೆ ವಿವರಿಸಿದಂತೆ ಸುಳಾದಿಗಳು ಅಪರೋಕ್ಷಜ್ಞಾನಿಗಳ ಧ್ಯಾನಾನುಭವಸಾರವತ್ತಾದವು. ದೇಶಕಾಲ ಸ್ವಭಾವ ಗುಣಾನುಸಾರ ಮನೋಭಾವ ರಸಗಳ ಉತ್ಪತ್ತಿ ಆಯಾಭಾವ ಅನುಸರಿಸಿ ಯಾವ ಭಾವ ದಲ್ಲಿ ಯಾವರಾಗ, ಯಾವ ಕಾಲದಲ್ಲಿ ಯಾವರಾಗ, ರಾಗಗಳಿಗೆ ಅನು ಸಾರವಾಗಿ ಲಯಗತಿ ತಕ್ಕಂತೆ ತಾಳಗಳ ನಿಯಮವು, ಆಯಾ ಕಾಲ ರಾಗತಾಳಗಳಿಗೆ ಮುಖ್ಯಾಭಿಮಾನಿ ದೇವತೆಗಳಾರು. ತಕ್ಕ ಫಲವೇನು ಇತ್ಯಾದಿ ಕಾಲಜ್ಞಾನವೂ ಸಂಗೀತ ಶಾಸ್ತ್ರದ ಪುರಾತನ ತಜ್ಞರಲ್ಲಿ ಮಾತ್ರ ಕಂಡಿದೆ. ದೇಶ–ಕಾಲ–ಭಾವರಸಕ್ಕನುಕೂಲವಾದ ರಾಗ ತಾಳಗಳಲ್ಲಿ ಚನ್ನಾಗಿ ಬಲ್ಲ ತ್ರಿಕಾಲದರ್ಶಿಗಳ ಪದ–ಸುಳಾದಿ ಮುಂತಾದವುಗಳೇ ಪ್ರಾಸಾದಿಕವಾಣಿ. ಈ ಪ್ರಾಸಾದಿಕವಾಣಿಯೇ ಜನರ ಮನಸ್ಸನ್ನು ಕರಗಿ ಸುವದು. ಸ್ವಿಚ್-ತಿರುಹೆ ಎಲೆಕ್ಟ್ರಸಿಟಿ ಪವರ ಬಲಬಿನಲ್ಲಿ ಪ್ರಕಾಶಮಾ ನವಾದಂತೆ ಸಜ್ಜನರ ಮನೋಂಧಕಾರ ಅಜ್ಞಾನ ಹರಿಸಿ ಸುಜ್ಞಾನ ಪ್ರಕಾಶ ಮಾಡುವದು ಇದೇ ಪ್ರಾಸಾದಿಕ ವಾಣಿಯು. ಈಗಿನ ನಾಟಕ, ಸಿನೇಮಾ, ಆಧುನಿಕರ ಕಾವ್ಯಗಳಂತಲ್ಲ.

ಸುಳಾದಿ ಧ್ರುವಾದಿ ೭ ಸಪ್ತತಾಳಗಳಲ್ಲಿ ಮಿಶ್ರಜಾತಿ ಖಂಡಜಾತಿ ಮುಂದಾತ ೫–೫ ವಿಭಾಗದಂತೆ ಒಟ್ಟಗೆ ೩೫ ತಾಳಗಳಾಗುವವು. ಇದರ ಲಕ್ಷಣವೂ ಬೇರೆ. ಸಂಗೀತಗಹನ ವಿಷಯ, ಇಲ್ಲಿ ವಿವರಿಸಲು ಶಕ್ಯವಿಲ್ಲ.

ಆದರೆ ಸುಳಾದಿಗಳಲ್ಲಿ ಸಪ್ತತಾಳಗಳೇ ಏಕೆ ಇರಬೇಕು. ಕೆಲವು ಸುಳಾದಿಗಳಲ್ಲಿ ೫ ತಾಳ ಇಟ್ಟರುವರು. ರೂಪಕತಾಳ ಝಂಪಾ ಇನರ ದಿಲ್ಲ. ಸುಳಾದಿಕಾರರಾದ ಜ್ಞಾನಿಗಳ ವಿಷಯ, ವಸ್ತುಭಾವಜನ್ಯರಸ

ಪ್ರಕರಣವು ಅಜ್ಞರಿಂದರಿಯಲಸಾಧ್ಯ. ಧ್ರುವಾದಿ ತಾಳಗಳಲ್ಲಿ ಒಂದೊಂದು ತಾಳಕ್ಕೆ ಮಾತ್ರಾ ಉಂಟು. ಧ್ರುವತಾಳಕ್ಕೆ ೧೪ ಆದಿತಾಳಕ್ಕೆ ೮ ಮಾತ್ರಾ ಇದರ ಗೊಂದಲಕ್ಕೆ ಹೋದರಂತೂ ಸಂಗೀತ ಶಾಸ್ತ್ರವೇ ಸುವಿಚಾರಕಷ್ಟತರ ಗ್ರಂಥಬಾಹುಲ್ಯ ಕಾರಣ ಯಾವ ತಾಳದಲ್ಲಿ ಯಾವ ಭಾವ ಇದು ಗಹನ ವಿಷಯವೇ ಆಗಿದೆ

## ಸುಳಾದಿಗಳಲ್ಲಿ ಸಾಮಾನ್ಯ ವಿವರಣೆ

ಧ್ರುವತಾಳದಲ್ಲಿ— ವಸ್ತು ನಿಶ್ಚಯ ವಿಷಯ
ಮಠ್ಯತಾಳದಲ್ಲಿ— ವಸ್ತುವಿನ ಗುಣಧರ್ಮ ನಿರೂಪಣೆ.
ರೂಪಕದಲ್ಲಿ— ವಸ್ತುವಿನ ಗುಣಧರ್ಮ ಕಾರಣ ವಿವೇಚನೆ.
ಝಂಪಾದಲ್ಲಿ— ವಸ್ತು ಗುಣಧರ್ಮ ಕಾರಣ ಕಾರ್ಯರೂಪದಿ ಮನಸ್ಸಿನಲ್ಲಿ ಪರಿಣಮಿಸುವಿಕೆ.
ತ್ರಿಪುಟದಲ್ಲಿ— ಗುಣಧರ್ಮ ಕಾರ್ಯ ಪ್ರಾಪ್ತಿವಿಷಯ ಪ್ರಾರ್ಥನೆ.
ಅಟ್ಟತಾಳದಲ್ಲಿ— ಮನೋವೇಗ ಸ್ತೋತ್ರ ಸಂಗೀತ ತಾಳ ಕುಣಿತ.
ಆದಿತಾಳದಲ್ಲಿ— ಸ್ತೋತ್ರಾನಂದದಲ್ಲಿ ನಲಿದಾಡುವಿಕೆ ಮತ್ತು ಸ್ವಲ್ಪ ಹೆಚ್ಚಿನವೇಗ ಕುಣಿತ.

ಹೀಗೆ ಮನೋಭಾವವು ಪರಮಾತ್ಮನಲ್ಲಿಟ್ಟು **ಹರಿಯನ್ನು ಕುಣಿಸ್ಯಾಡುವ ಹರಿದಾಸರ ಸುಳಾದಿಗಳಿವು ಸುಲಭವಾದ ಹಾದಿಯಲ್ಲ.** ಮುಂದೆ ಜತೆಯಲ್ಲಿ ಎಲ್ಲ ೭ ತಾಳದಲ್ಲಿ ಹೇಳಿರುವದು. ಜತೆ (ಸರಿ) ಯಾಗಿ ಕೂಡಿಕೊಂಡು ಬರುವದು. ಅಂದರೆ ಎರಡು ಸರಳ ರೇಖೆಗಳು ಹೇಗೆ ಜತೆಯಾಗಿರುವವೋ ಹಾಗೆಯೆ ಸಮನ್ವಯಿಸುವದು. ಪದದ ಅರ್ಥ ಪಲ್ಲವಿಯಲ್ಲಿದ್ದಂತೆ ಸುಳಾದಿಗಳ ಅರ್ಥ ಅಭಿಪ್ರಾಯ ಜತೆಯಲ್ಲಿರುವದು. ಹೀಗೆ ಸುಮ್ಮನೇ ಬರೆದರೇನೂ ಪ್ರಯೋಜನವಾಗದು. ಸುಳಾದಿ ಸಂಗೀತದಲ್ಲಿ ಹಾಡಿ ತೋರಿಸುವ ಗಮಕಿಗಳಾದ ಪೂರ್ವಜ ಸಂಪ್ರದಾಯಜ್ಞರು ಬೇಕು. ೩–೪ ಜನರವಿನಾ ಹೆಚ್ಚಿಗೆ ಕಾಣೆವು.

ಈಗಿನ ಕಾಲದಲ್ಲಿ ಈ ಸುಳಾದಿಗಳು ಸಂಪ್ರದಾಯಕ ಪೂರ್ವಕವಾಗಿ ಹೇಳುವರ ಅಭಾವ ಮೂಲಕ ನೂತನ ನೂತನ ಸುಳಾದಿಗಳ

ಪ್ರಚಾರವಾದಾಗ್ಯೂ ಎಂದೂ ಕೇಳದವರಿಗೆ ಸುಳಾದಿಗಳೆಂದರೆ ನಿದ್ದೆ ಬಂದೆ ಬರುತ್ತದೆ. ಅಥವಾ ಕ್ಲೋರೋಪಾರಮ್ ಇಂಜಕ್ಷನ್ ಕೊಟ್ಟಂತಾಗುತ್ತದೆ.

ಅಪರೋಕ್ಷಜ್ಞಾನಿಯ ಧ್ಯಾನಾನುಭವನಂತರ ಮನೋಭಾವ ವಿಕಾಸವಾಗಿ ಅನುಭವ ಜನ್ಯಜ್ಞಾನ ಸುಲಭವಾಗಿ ತನ್ನಿಂತಾನೆ ಮೇಲ್ಕಂಡ ಲಕ್ಷಣಗಳಲ್ಲಿ ಹೋರಬೀಳುವವು. ಸುಳಾದಿ ಎಂದು ಹಿರಿಯರಿಂದ ಕೇಳಿದ ವಿವೇಚನೆ ಸರಿಯಾಗಿ, ಸುಳಾದಿ ಪ್ರಚಾರ ಕಾರ್ಯದಲ್ಲಿ ಸಾಧನಭಾಗ ಪ್ರಕಟವಾದ ಕಾಲಕ್ಕೆ ಗಾನಶಾಸ್ತ್ರಜ್ಞರಾದ ಪಿ. ಸಾಂಬಮೂರ್ತಿಯವರು ಹಿಂದು ಪೇಪರ ದ್ವಾರಾ ವಿಮರ್ಶೆ ಮಾಡಿದಾಗ್ಗೆ ಸವಿಸ್ತರ ಇಂಗ್ಲೀಷಿನಲ್ಲಿ ವಿವರಿಸಿರುವರು ಅದನ್ನು ನಮ್ಮ ಪ್ರಕಟನೆ (೧೨) ಸ್ತೋತ್ರಭಾಗ ಸುಳಾದಿ, ಮುನ್ನುಡಿ (ಭಕ್ತಿಯ ಭಾವ) ಪುಟ ೧೨ ರಿಂದ ೧೯ ವರೆಗೆ ನೋಡುವದಾಗಿ ಪ್ರಾರ್ಥನೆ. ಇನ್ನೂ ನಮ್ಮಲ್ಲಿ ಪೂರ್ವಿಕ ಸಂಗೀತ ಶಾಸ್ತ್ರ ಮರ್ಮಜ್ಞರು ಉಂಟೆಂತೆಯೇ ಜಗತ್ತಿನಲ್ಲಿ ದಾಸರ ಕವನಗಳ ಪ್ರಕಾಶವಿದೆ.

ಉಗಾಭೋಗವು ಗಾನ ಶಾಸ್ತ್ರದ ಒಂದು ಮೇಲ್ಮೆ ಕಲೆಯೆಂದು ಹಿಂದೆ ಹೇಳಿದೆ. ಈ ಉಗಾಭೋಗಗಳು ಬಹು ಚಿಕ್ಕವಾದವು ಒಂದೇ ತಾಳ ತ್ರಿವಿಡಿ ಝಂಪಾ ತಾಳಗಳೇ ಪೂರ್ವದ ಒಹಿಯಲ್ಲಿ ಬರೆದವೆ. ಯಾವ ರಾಗ ಯಾವ ತಾಳದಲ್ಲಿ ಅನ್ನಲು ಬಂದರಾದರೂ, ಅವೆಲ್ಲ ಶ್ರೀ ಹರಿಯ ಪ್ರಾರ್ಥನಾರೂಪವಾಗಿವೆ. ಯಾಕಂದರೆ ಅಪರೋಕ್ಷಿ ಜ್ಞಾನಿಗಳಾದ ದಾಸರು ತಮ್ಮ ಹೃತ್ಕಮಲದಲ್ಲಿ ಬಿಂಬದರ್ಶನವಾದಾಗ್ಗೆ ಆತ್ಮಾನಂದ. ಲೋಕದಲ್ಲಿ ಪರದೇಶಕ್ಕೆ ಹೋದ ಮಗ ಹೆಂಡತಿಯನ್ನು ಕಂಡರೆ ಎಷ್ಟು ಆನಂದವೋ ಅದರಕಿಂತಲೂ ಹೆಚ್ಚಿನಾನಂದ. ಒಬ್ಬ ಚಕ್ರವರ್ತಿ ಆನಂದದಕಿಂತಲೂ ಸಾಮಾನ್ಯ ಅಪರೋಕ್ಷಜ್ಞಾನಿಯ ನಿಜಾನಂದ ಅಲೌಕಿಕವು ಅಸಾಧಾರಣವಾದುದು.

ದೇವರಿ ಭಕ್ತನ ಮುಂದೆ ಕುಣಿಯುವಾಗ್ಗೆ ಎಷ್ಟು ಆನಂದವಿರಬೇಕು. ಜ್ಞಾನಿಗಳೇ ಬಲ್ಲರು. ಮೂಕ ಸಕ್ಕರೆ ತುಪ್ಪತಿಂದಂತೆ ನಮ್ಮ

ಜ್ಞಾನ ಆನಂದ. ಆಗಲಿ ಅಪರೋಕ್ಷಜ್ಞಾನಿಯ ಮುಂದೆ ದೇವರು ನಲಿಯುವಕಾಲ ಭಕ್ತನ ಭಕ್ತಿಯು ಹೆಚ್ಚುತ್ತದೆ. ಸ್ತೋತ್ರಮಾಡಲು ಕಂಠ ಉಬ್ಬುತಿದೆ. ಕಣ್ಣೊಳಗೆ ಆನಂದಾಶ್ರು "ಬಿಗಿದ ಕಂಠದಿಂ, ದೃಗ್ಬಾಷ್ಪಗಳಿಂ, ನಗೆಮೊಗದಿಂ, ರೋಮುಗಳುಗಿದು, ಮಿಗೆ ಸಂತೋಷದಿ, ನಾಲ್ಮೊಗನಯ್ಯನ ಗುಣ ಪೊಗಳಿ ಹಿಗ್ಗುವದೆ" ಎಂದು ಜಗನ್ನಾಥ ದಾಸರ ಆನಂದಾನುಭವ. ಶಿಷ್ಯರಿಗುಪದೇಶ ಇಂಥ ಕಾಲದಲ್ಲಿ ಹೆಚ್ಚಿನಾಂದ **ಉಕ್ + ಆಭೋಗ = ಉಗಾಭೋಗ** ಉಕ್ ಹೆಚ್ಚಿನ ಪೂರ್ಣವಾಗಿರುವ ಆಭೋಗ ಆನಂದ ಅನುಭವದಲ್ಲಿ ದೇವರ ಸ್ತೋತ್ರವನ್ನು ಕೇವಲ ದೀನನಾಗಿ "ನಿನ್ನ ಧ್ಯಾನವಕೊಡೊ ಎನ್ನ ಧನ್ಯನ ಮಾಡೊ ಪನ್ನಂಗ ಶಯನ ಶ್ರೀ ಪುರಂದರವಿಠಲ" ಇತ್ಯಾದಿ ಈ ಉಗಾಭೋಗವಾದರೂ ಸಂಗೀತ ಶಾಸ್ತ್ರದ ಮೇಲ್ಪಂಕ್ತಿಯಲ್ಲಿರುವದು. ರಾಗ ಆಲಾಪದ ೫ ಧಾತುಗಳು ಮೇಲ್ಕಾಣಿಸಿದ ೫ ಅವಸ್ಥಾಗಳಿಗನುಸರಿಸಿ ಆಲಾಪಗಳು ಹೊರಡುತ್ತವೆ.

೧ ಉದ್ಗ್ರಾಹವೆಂದರೆ ಬಿಗಿದ ಕಂಠ ಉಬ್ಬಿ ಆನಂದದಿಂದ ಶಬ್ದ ಸಂಗೀತಕ್ಕನುಗುಣವಾಗಿ (ತೇಗುವಿಕೆ) ಹೊರಸೂಸುವದು ಸಾಮಾನ್ಯವಾಗಿ ಇವೆಲ್ಲ ಸಾಮವೇದ ಗಾನ ವಿಭಾಗ (ಉದ್ಗಾತೃ= ಸಾಮವೇದ ಉಚ್ಚ ಸ್ವರದಿಂದ ಮಂತ್ರಹೇಳುವ ಋತ್ವಿಕ) ಮೊದಲಿಗೆ ಕಂಠ ಉಬ್ಬಿ ಹೇ ಹರೇ ಎಂದು ಉಚ್ಚವಾಗಿ ಹೇಳುವದು.

೨ ಮೇಲಾಪ–ಸಂಗೀತದಲ್ಲಿ ಸಪ್ತಸ್ವರಗಳನ್ನು ಹೊಂದಿಕೊಂಡು ಹಾಡುವದು.

೩ ಧ್ರುವ–ನಿಶ್ಚಯಾತ್ಮಕ ಲಯ ತಾಳ ಗತಿಗಳ ಕ್ರಮ.

೪ ಅಂತರ–ಆದಿ ಮಧ್ಯಾಂತ ಸ್ವರಗತಿ ಗತಿಗಳಿಂದ ವ್ಯತ್ಯಾಸವಿಲ್ಲದೇ ಹೇಳುವದು.

೫ ಆಭೋಗ–ಮೇಲ್ಕಂಡ ವಿಸ್ತೃತದಿಂದ ಹೇಳುತ್ತ ಆಲಾಪಗಳೊಂದಿಗೆ ಪೂರ್ಣಾನಂದದಿಂದ ಪೊಗಳುವದು. ಹೀಗೆ ಸಾಮಾನ್ಯವಾಗಿರುವದೆಂದು ಹಿರಿಯರಿಂದ ತಿಳಿದದೆ. ನಾನು ಸಂಗೀತ ಮರ್ಮಜ್ಞನಲ್ಲ ತಿಳಿದವರು ತಪ್ಪು ತಿದ್ದುವದಾಗಿ ವಿನಂತಿ.

ಇನ್ನು ಪದವೆಂದರೇನು ? ಈಗಿನ ಕಾಲದಲ್ಲಿ ನಾನು ಪದ ಮಾಡುತ್ತೇನೆ. ನೀನು ಪದ ಮಾಡುತ್ತೇನೆ. ಶಬ್ದ ಜ್ಞಾನವಿಲ್ಲ, ಅರ್ಥಜ್ಞಾನವಿಲ್ಲ. ಯಾವ ಪದಗಳು ಎಲ್ಲಿ ಪ್ರಯೋಗ ಮಾಡುವದೆಂಬುದು ಮೊದಲಿಗೆ ಗೊತ್ತಿಲ್ಲ. ಸಂಗೀತವಂತೂ ಸಂಗತಿಯಾಗಿಲ್ಲ. ಶಾಸ್ತ್ರಾರ್ಥವಂತೂ ಮೊದಲಿಗಿಲ್ಲ. **ಈಗಿನವರ ಪದಗಳೆಲ್ಲವೂ ಅಪದವೇ** ವೆಂಬುದಕ್ಕೆ ಸಂಶಯ ವಿಲ್ಲ ಇರಲಿ. ತಾನು ಮಾಡಿದ ಪದವನ್ನು ಉತ್ಕರ್ಷಕ್ಕೆ ತಾನೇ ಹಾಡುವದು ಎರಡನೇದವರಿಂದ ಹಾಡಿಸುವದು, ಆಯುಷ್ಯ ಹಾನಿಯೆಂದು ದಾಸರ ವಚನ. ಪದ ಇದು ಛಾಂಧಸಿ ಸಂಬಂಧಪಟ್ಟಿದ್ದು ವೇದವು ಪದ ಕ್ರಮ ಜಟೆ, ಘನ, ವೆಂದು ನಾಲ್ಕು, ಸಾಮವೇದ ಸಂಗೀತ ಲಕ್ಷಣ ಸಾಮಾನ್ಯ ಹೇಳಿದ್ದಾರೆ.

ಸಾಮಾನ್ಯವಾಗಿ ವೇದಾರ್ಥಗಳಾದ ಶಾಸ್ತ್ರ ಪುರಾಣ ಓದಿ ಅರ್ಥ ಚನ್ನಾಗಿ ತಿಳಿದು ಶಬ್ದಪದ ಪ್ರಯೋಗಗಳು ಎಲ್ಲಿ ಹೇಗೆ ಮಾಡುವದೆಂದು ಸಂಗೀತ ಶಾಸ್ತ್ರವನ್ನರಿತು ಎಲ್ಲ ಶಾಸ್ತ್ರವನ್ನು ಬಲ್ಲವರೆ ಪದ ಮಾಡಲು ಯೋಗ್ಯರು. ಇದಾವರೂ ಶಾಸ್ತ್ರಾಪರೋಕ್ಷವು ಬಾಹ್ಯಾಪರೋಕ್ಷವು. ಅಪರೋಕ್ಷ ಸಮೀಪಿಸಿದ ಜ್ಞಾನಿಗಳ ಅನುಭವಜನ್ಯ ನುಡಿಗಳೆ ಪದವೆಂದು ಹಿರಿಯರಿಂದ ಕೇಳಿದೆ. ಶ್ರೀ ವಿಜಯದಾಸರು ಶ್ರಿ ಪುರಂದರದಾಸರು ಪದವೆಂದೇ ಶಬ್ದ ಪ್ರಯೋಗ ಮಾಡಿದ್ದಾರೆ. ಒಂದು ಪದವು ಬಿಟ್ಟು ಮತ್ತೊಂದು ಪದವು ಪಾಡಲು ನೊಂದುವರು ವರ್ಣಾಭಿಮಾನಿ ದೇವತೆಗಳು" ಮತ್ತು "ಈಸು ಪದಗಳೊಮ್ಮೆ ಪಾಡಿದರೆ ದಾಸರಿಗೊಲಿದಂತೆ ಒಲಿವ ವಿಜಯ ವಿಠ್ಠಲರೇಯ" ಎಂದು ದಾಸರ ವಚನ. ಹೀಗಿದ್ದರೂ ದಕ್ಷಣ ದೇಶದಲ್ಲಿ ಮಾತ್ರ ದೇವರ ನಾಮ ಕೀರ್ತನಗಳೆಂದು ಈಗ ಆಧುನಿಕರು ಪ್ರಚಾರದಲ್ಲಿ ತಂದಿರುವರು. ಈ ಪದಗಳು ನಮ್ಮ ರಾಯಚೂರ ವಿಜಾಪೂರ ಪ್ರಾಂತದಲ್ಲೆಲ್ಲ "ಹಾಡು" ಎಂತಲೂ ಶಬ್ದ ವಾಡಿಕೆಯಲ್ಲಿದೆ. ದೇವರ ನಾಮವೆಂದರೆ ರಾಮಕೃಷ್ಣ ಗೋವಿಂದಾದಿ ಅನಂತ ನಾಮಗಳು ಕೀರ್ತನವೆಂದರೆ ಸುಶ್ರಾವ್ಯವಾಗಿ ಹಾಡುವದೆಂದು ಇಷ್ಟೇ ನಿಜಾರ್ಥ, ವಾಸ್ತವೀಕವಾಗಿ ಪದ (ಹಾಡು) ಸುಳಾದಿ ಉಗಾಭೋಗವೆಂತಲೇ ಸಂಗೀತ ಪ್ರಭೇದಗಳುಂಟು ಹೀಗೆ ಶ್ರೀ ವಿಜಯದಾಸರ

ಕವನಗಳೆಲ್ಲ ನವರಸಾಲಂಕಾರಭರಿತ ಭಾಷಾಪ್ರೌಢಿಮೆ ಅನೇಕ ಸಾಹಿತ್ಯ ಗಳಿಂದ ತುಂಬಿ ತುಳುಕುತ್ತಿವೆ. ಅಲ್ಲದೆ, ಕೇವಲ ಭಕ್ತಿಮಾರ್ಗವಾದ ಜ್ಞಾನ, ಭಕ್ತಿ, ವೈರಾಗ್ಯದ್ವಾರಾ ಭಗಂವಂತನ ಕೃಪೆ ಪಡೆಯಲು ಮೋಕ್ಷ ಮಾರ್ಗದ ಮೆಟ್ಟಿಲುಗಳು ಆಗಿರುವವು ಇದೇ ನಿಜವಾದ ತತ್ತ್ವ.

ಜ್ಞಾನಭಕ್ತಿ ವಿರಕ್ತಿಗಳನ್ನು ಬಹು ವಿಸ್ತಾರವಾಗಿ ಬೋಧಿಸಿರುವರು. **ದಾಸನಾಗಲು ಬೇಕು** ಎಂಬುದಕ್ಕೆ "ಹರಿದಾಸನಾಗಿ ಸಂಚರಿಸು ಸಂತೋಷದಲ್ಲಿ" "ಹರಿದಾಸರ ಲಕ್ಷಣ ವಿರಬೇಕು" ಇತ್ಯಾದಿಗಳು **ಜ್ಞಾನ ಸುಳಾದಿಗಳು** "ಜ್ಞಾನವೆಂಬೊದಿದೆ ಕೇವಲಾಧಿಕಾರಿಗಳಿಗೆ ಕೆಲವು ಸುಳಾದಿಗಳು "**ಭಕ್ತಿ ಸುಳಾದಿಗಳು** ಹರಿದಾಸರೊಡನಾಡು ಹರಿಯಂಘ್ರಿ ಯುಗ್ಮನೋಡು" ಅನೇಕ ಸುಳಾದಿ ಪದಗಳು ಇದರಂತೆ **ವೈರಾಗ್ಯ** ಸುಳಾದಿಗಳು ಅನೇಕವಿವೆ. ಪ್ರತಿಯೊಂದು ಸುಳಾದಿಗಳ ಮುಖ್ಯಾಂಶ ಶಿರೋಲೇಖ ಬರೆದು ೧೨ ಪುಸ್ತಕದಲ್ಲಿ ಬೇರೆ ಬೇರೆ ವಿಷಯ ವಿಭಾಗಮಾಡಿ ಅಚ್ಚು ಮಾಡಿಸಿದೆ. ನೋಡಿ ತಿಳಿದು ಮನನಮಾಡಿ ಸಾಧನಮಾಡುವದೇ ಮುಖ್ಯ ಮಾನವರ ಕರ್ತವ್ಯ.

## ಶ್ರೀ ವಿಜಯದಾಸರ ವೈಶಿಷ್ಟ್ಯ

ತಾವು ಅಪರೋಕ್ಷಜ್ಞಾನಿಗಳಾದರೂ ಲೋಕೋದ್ಧಾರಾರ್ಥವಾಗಿ ಸದಾಚಾರ ವೃತ್ತಿಯಲ್ಲಿದ್ದು ಆಚರಿಸುತ್ತ ಜನರಿಗೆ ತೋರಿ ನಿಮ್ಮ ನಡವಳಿಕೆ ಹೀಗಿರಬೇಕೆಂಬುದು ಬೋಧಿಸಿದರು. ದೊಡ್ಡವರ ನಡವಳಿಕೆಯೇ ಇತರೇ ಜನರಿಗೆ ಮುಖ್ಯವಾದ ದೊಡ್ಡದಾರಿ.

**ದಾಸರಲ್ಲಿರುವ ನಿಸ್ಸೀಮ ಗುರುಭಕ್ತಿ** ಆದರಣೀಯವಾಗಿದೆ. "ಪುರಂದರದಾಸರ ಕರುಣ ಕವಚವನ್ನು ತೊಟ್ಟ। ಜಗದೊಳು ಧಿಟ್ಟ **ಗುರುಭಕುತಿ ಮಾಡುವಲ್ಲಿ ಇವರಿಗೆಣೆಗಾಣೆ ಹರಿಪಾದದಾಣೆ।** ಭರಿತ ಜ್ಞಾನದಲಿ ಮೃಗರಾಜನಂದದಿ ಚರಿತ। ಚರಿಸಿದತ್ವರಿತ" ಎಂದು ಹಯವದನವಿಠಲರ ವಚನದಂತೆ ಶ್ರೀ ವಿಜಯದಾಸರಿಗೆ ತಮ್ಮ ಗುರುಗಳಾದ ಪುರಂದರದಾಸರ ಸ್ತೋತ್ರ ೧೨ ಸುಳಾದಿಗಳಲ್ಲಿ ಮಾಡಿರುವರು. (ಪುರಂದರದಾಸರು ಪುಸಕ ಕ್ರಮ ೩೧-೪೨ ನೋಡುವದು) ದಾಸರ

ಕರುಣದಿಂದಲೇ ಈ ಜನುಮ ತಾಳಿದೆ. ಬಹುಜನುಮದ ಪುಣ್ಯವು. ನಾನು ಕಾಶಿಗಾಗದವನು ಆದರೂ ಇಂದು ಸಾಸಿರ ಕೋಟಿಗೆ ಬೆಲೆಬಾಳುವ ನಾದೆನು. ನಾನು ಯಾತರೊಳಗೆಗಣನೆ ಗುರುಗಳ ಕೃಪೆಯಿಂದ ಪುಣ್ಯ ವಂತನೆನಿಸಿದೆ ಯಾಕಂದರೆ ಹರಿನಾಮಾಮೃತವೆಂಬ ರಸಾಯವನ್ನು ಹಿಂದಿನ ವ್ಯಾಸರಾಜ ಪುರಂದರದಾಸ ಪ್ರಭೃತಿಗಳೆಲ್ಲ ಸವಿದುಂಡರು. ಮಿಕ್ಕ ಪದಾರ್ಥ ಧರಿಯ ಮೇಲಿಟ್ಟು ಮುಂದಣಾಗಮತಿಳಿದು ಪೋದರು. ಆದರೆ ಈಗ ಅವರುಂಡುಸವಿದು ಮಿಕ್ಕ ಧರಿಯಮ್ಯಾಲೆ ಸೂರಿದಾ ಆ ಪದಾರ್ಥದ ಚೂರು, ಇರವಿಯಂತೆ ಸವಿದು ಅವರ ಎಂಜಲುಂಡೇ ಕವನ ಪೇಳುವದಕ್ಕೆ ನಾನು ಅಧಿಕಾರಿಯಾದೆನು. ಹಿಂದಿನ ಜ್ಞಾನಿಗಳೆಲ್ಲ, ಕೋಶರತ್ನವಗಳಿಸಿ ಅವರು ಸುಖಿಸಿದರು. ಕಾಸು ಸಂಪಾದಿಸಿದ ಎನಗೆ ಹರುಷವಾಯಿತು. ಮೋಸ ಎನಗೆ ಇಲ್ಲವೇ ಇಲ್ಲ, ಪುರಂದರದಾಸರು ಮಾಡಿದ ಕೃಪೆ ಎನಗೊಬ್ಬಗಲ್ಲವನುತೆ ತನುಜ ಅನುಜರು ತನು ಸಂಬಂಧಿ ಗಳು ಮನಸಂಬಂಧಿಗಳಿಗೆ, ಮನೆ ಮನೆಯಲ್ಲಿ ನೆರೆಹೊರೆಯಲ್ಲಿ ನೆನಪು ಮಾಡಿದವರಿಗೆ, ಕನಸಿನೊಳಗೆ ಸ್ಮರಣೆ ಬಪ್ಪರಿಗೆ ಅನುದಿನದಲ್ಲಿ ತಾವೇ ಟೊಂಕವನು ಕಟ್ಟನಿಂತು ಸಂವರಕ್ಷಿಸುವರು. ತಂದೆ ತಾಯಿಗಳೆ ದಾಸರು ಬಂಧು ಬಳಗವೆ ದಾಸರು. ಗುರುಗಳೆಂದರೆ ದಾಸರು, ಮತ್ತೊಬ್ಬರಿಲ್ಲ. ನೆನದಂತೆ ಕರುಣಿಸಿ ವರಗಳ ಇತ್ತು ನಿತ್ಯದಲ್ಲಿ ಪರಿಪಾಲಿಸಿ, ಹರಿಮರುತರ ಲೀಲೆ ಹಿರಿದಾಗಿ ತಿಳುಹಿ ವಿಸ್ತರವಾಗಿ ಎನ್ನಿಂದ ಬರೆಸಿದರು. ಇವರ ಕರುಣಾರಸಕ್ಕೆ ಎಣೆಯಿಲ್ಲ. ಆನೆಯ ಮರಿಯು ಸಿಂಹನ ಬಾಯೊಳಗೆ ತುತ್ತಾಗಿ ಬಿದ್ದಾಗ್ಗೆ ಸಮರ್ಥರಾದವರು ಕಡೆಗೆ ತೆಗದಂತೆ ಇಂದಿಗೆ ಗುರು ಶಿರೋಮಣಿಗಳಾದ ಪುರಂದರದಾಸರು ದುರಿತದಿಂದ ಶಳೆದು, ಪರಮಾರ್ಥ ಮಾರ್ಗವೆಂಬೋದು ಅರುಪು ಮಾಡಿ ಕರುಣಾಸಾಗರನಾದ ವಿಜಯ ವಿಠಲನ ತೋರಿ ಸ್ಮರಿಪುದಕೆ ಜ್ಞಾನವನಿತ್ತ ಕರುಣಾಳುಗಳು. ನಾನು ಸಾಸಿರ ಜನ್ಮವೆತ್ತಿ ಬಂದಕಾಲಕ್ಕೂ ಈ ಸುಲಭ ಗುರುಗಳಿಗೆ ಆವಲ್ಲಿಯೂ ಸರಿಗಾಣೆನು. ಎಷ್ಟೆಂದು ಪೇಳಲಿ ವಿಸುಬಗೆಯಿಂದ ಕರುಣವ ಮಾಡು ವರು. **ಈ ಶರೀರವೆ ಇವರ ಸದನದಲ್ಲಿಯಿಪ್ಪ ದಾಸಾನುದಾಸರ ಪಾದ ಯುಗಳಕ್ಕೆ ನಿವಾಳಿಸಿ ಬಿಸುಟುವೆನು.** ಅನಂತ ಜನುಮದಲಿ

ಈ ಸುಖ ತಪ್ಪದೆ ಬಿಡದೆ ಎನಗಾಗಲಿ ಕೇಶವನಾದ ವಿಜಯವಿಠಲನ ದಯದಿಂದ ಪುರಂದರದಾಸರ ಒಲುಮೆಯಾಯಿತು. ಎಂಥ ಗುರು ಭಕ್ತಿಯಿದು.

ಮತ್ತು ಗುರುಗಳಲ್ಲಿರುವ ನಿಸ್ಸೀಮ ಭಕ್ತಿ ತೋರಿರುವರು. ಶ್ರೀ ಪುರಂದರದಾಸರಾಡಿದ ಭೂಮಿ ಎನಗದು ವೈಕುಂಠ. ಇವರಿದ್ದಸ್ಥಾನವು ಎನಗೆ ಶ್ವೇತದೀಪ, ಇವರಿದ್ದದೆ ಎನಗೆ ಅನಂತಾಸನ ಕಾಣೋ, ಇವರಿದ್ದ ಅವನಿ ಎನಗೆ ತ್ರೈಲೋಕವೋ, ಇವರು ಮಾಡಿದ ಲೀಲೆ ಎನಗೆ ವೇದೋಕ್ತಿಯು, ಇವರ ಚರಿತೆಯಲ್ಲ ಎನಗದು ಪುರಾಣ, ಇವರ ಪಾದಾಂಗುಟದಲ್ಲಿ ಸರ್ವತೀರ್ಥ, ಇವರ ಪಾದರೇಣು ಎನಗೊಜ್ರ ಪಂಜರ, ಇವರಿಂದಲಿ ದೇಹ ಉದ್ಧಾರವಾಗೋದು। ಇವರ **ಪಾದಹೆಜ್ಜೆ ಬಿದ್ದಲ್ಲಿ। ಈ ಕಾಯವನು ಮಾಡಿ** ಹೊರಳಿಸಿತೆಗೆವೆನೊ, ಅವನೀಶಾ ವಿಜಯವಿಠಲನ್ನ ನಂಬಿದ ಹವಣರ ಪೊಳೆವ ಪಾದವನು ಸೇರಿದೆನು ಎಂದು ಗುರುಭಕ್ತಿ ತೋರಿದದ್ದು. ತಂದೆ ತಾಯಿಗಳೀ ದಾಸರು ಬಂಧುಬಳಗವೇ ದಾಸರು। ಹಿಂದೆ ಮುಂದೆ ಕಟ್ಟು ಕಾವಲಿಯಿಂದ ಸಾಕುವರೆ ದಾಸರು। ಅಂದು ಇಂದು ಬಿಡದಲೆ ಬಂದ ಬಂಧಾನಗಳೆಲ್ಲ। ಪೊಂದವಂತೆ ಪುಣ್ಯ ತಂದು ಕೊಡುವರು ದಾಸರು। ಸಂದಿದೆನು ಸಂದಿದೆನು ಎನ್ನ ಕುಲಸಹಿತ ಪು। ರಂದರದಾಸರ ಪಾದದ್ವಂದ್ವದಲ್ಲಿ ಪೋಗಿ। ಮಂದರಾದ್ರಿಧರನಮ್ಮ ವಿಜಯವಿಠಲಹರಿಯ ಮಂದಿರಕೆ ಸೋಪಾನ ಸಂದೇಹ ತೊಲಗಿತು. ದಾಸರೆ ಮನದೈವ, ದಾಸರೆ ಮನೆದೈವ, ದಾಸರಲ್ಲದೆಯಿಲ್ಲ ವಿಜಯವಿಠ್ಠಲ ಬಲ್ಲನೆಂದು ಗುರುಗಳಲ್ಲಿ ಅಪಾರವಾದ ಭಕ್ತಿ ತೋರಲು.

**ಸಕಲಸಾಧನವೂ ಗುರುಗಳ ಕೃಪೆ**ಯಿಂದಲೇ ಆಗುವವೆಂದು ಮತ್ತು ಬಾರಿಬಾರಿಗೆ ಪೊಗಳುತ್ತಾರೆ. ದಾಸರಾದ ಪುರಂದರದಾಸರ ಕರುಣವೇ ಮುಖ್ಯ. ದಾಸರ ಕರುಣವೆ ಎನಗೆ ಸ್ನಾನಸಂಧ್ಯ ದಾಸರ ಕರುಣವೆ ಎನಗೆ ಜಪತಪವು। ದಾಸರ ಕರುಣವೆ ಎನಗೆ ಉತ್ತಮಜ್ಞಾನ। ದಾಸರ ಕರುಣವೇ ಎನಗೆ ಮೌನಧ್ಯಾನ। ದಾಸರ ಕರುಣವೆ ಎನಗೆ ಶಕ್ತಿಯುಕ್ತಿ। ದಾಸರ ಕರುಣದಿಂದ ಘಾಸಿಯಾಗದೆ ಮನ। ಮೊಸಲ ಮನದಲಿ ಏಸೇಸು ದಿವಸಕ್ಕೆ। ತ್ರಾಸು ತೂಗಿದಂತೆ ಲೇಸು ಸಮವೆನಿಸಿತ್ತು।

ಶಾಶ್ವಿತಸ್ಥಿರನಾಮಾ ವಿಜಯವಿಠಲ ನಿನ್ನ ಆಸರವಿಡಿದ ನಿಜ ದಾಸರೊಳು ನೆರೆದೆ ॥ ೧ ॥

ಮುಂದೆ ಮತ್ಯತ್ರಿವಿಡಿತಾಳದಲ್ಲಿ ನಿಸ್ಸಂದೇಹವಾಗಿ ಸ್ವಹಂಕಾರ ಖಂಡನಪೂರ್ವಕ ಗುರುಗಳ ಕೃಪೆ ವರ್ಣಿಸಿರುವದು ಅವರ್ಣನೀಯ ವಾದದು. "ವೇದತರ್ಕಶಾಸ್ತ್ರ ಓದಿಕೊಂಡವನಲ್ಲ। ಭೇದಾರ್ಥದ ಜ್ಞಾನ ನಿದರುಶನವಿಲ್ಲ। ಸಾಧುಸಜ್ಜನರಿಂದ ಬೋಧೆಯಾದವನಲ್ಲ। ನಾದಬಿಂದು ಮೊದಲಾದ ಒಂದಿಲ್ಲ। ಆಧಾರನಿಲಯ ವಿಜಯವಿಠಲನ್ನ ಪಾದವೆ ನೆರೆ ನಂಬಿ ಕ್ರೋಧರಹಿತನಾದೆ ॥ ೨ ॥ ಮತ್ತು ಮುಂದೆ–

"ಲಕ್ಷಣಛಂದಸ್ಸು, ಆದಿ ಅಂತ್ಯಪ್ರಾಸು, ಅಕ್ಷರ, ವಡಿ, ಗಣ, ಯಮಕ, ನಾನಾವಚನ। ದೀಕ್ಷಿತನಾಗಿ ಪೇಳುವ ವಿಧಿ ನಿಷೇಧ। **ಲಕ್ಷ ಕೊಂಡಾದರು ನೋಡಸಲ್ಲ**। ಈ ಕ್ಷಿತಿಯೊಳಗುಳ್ಳ ನಿಜಭಾಗವತರು ಉಪೇಕ್ಷವ ಮಾಡದಲೆ ಲಾಲಿಸಿ ತಿಳಿವುದು। ಕಕ್ಷಿನಿಮಗಿಲ್ಲ ಕರವಮುಗಿವೆ ಪರ। ಪಕ್ಷ ಎಣಿಸದಲೆ ಮನದಲ್ಲಿ ಮನ್ನಿಪದು। ನಕ್ಷತ್ರನೇಮಿ ಸಿರಿವಿಜಯ ವಿಠಲನ್ನ। ಸಾಕ್ಷಾತ್ಕರಿಸಿಕೊಂಡ ದಾಸರೆ ಗರುಗಳು ॥ ೩ ॥.

ದಾಸರು ತಾವು ಛಂದಸ್ಸು ಅಲಂಕಾರ ಯತಿವಡಿಗಣ ಅರಿಯದಿದ್ದರೂ ಗುರುಗಳ ಕರುಣಾದಿಂದ ಲಕ್ಷಕ್ಕೆ ಒಂದಾದರೂ, ಎಮ್ಮ ಕವನದಲ್ಲಿಲ್ಲವೆಂದು ಗುರುಕರುಣಾಬಲವೆ ಎನಗೆ, ಎನಗೆ ಸ್ವಾತಂತ್ರ್ಯದಾವುದಿಲ್ಲ ಗುರುಗಳ ಕೃಪೆ ಕೊಂಡಾಡುತ್ತ ಮತ್ತು ದಾಸರೆಂದರೆ ಪುರಂದರ ದಾಸರು ಎಂಬ ಪದದಲ್ಲಿ "ಶಬ್ದಾದಿ ಮೊದಲಾದ ವಿಷಯಂಗಳಾ ಕರ್ಮ। ದಬ್ಧಿಯೊಳಗೆ ಬಿದ್ದು ಪೂರ ಳುತಿದ್ದ। ಲುಬ್ಧ ಕನಕದೆದು ದೃಢವಾಗಿ ಸುಜ್ಞಾನದ। ಅಬ್ಧಿಯೊಳಗಿಟ್ಟು ಕರುಣದಲ್ಲಿ ನೋಡಿದರು ॥೨॥ ಈ ಕಾರಣದಿಂದ ಗುರುಗಳಿಗೆ ಜನ್ಮ ಜನ್ಮದಲ್ಲಿ ಋಣಿ ಯಾಗಿರುವೆನು. ದಾಸರ ಸೇವಾನುಸೇವಕ ಭೃತ್ಯರಭೃತ್ಯನಾಗಿ ಸದಾ ಸರ್ವಕಾಲದಲ್ಲಿ ಸಕಲ ಕಾರ್ಯದಲ್ಲಿ ಎಡೆಬಿಡದೆ ದಾಸರ ಸೇವಾನು ಸೇವಕ ನಾಗಿರುವೆನೆಂದು ಮಹಾ ಗುರು ಭಕ್ತಿ ವ್ಯಕ್ತ ಮಾಡಿದ್ದಾರೆ. ಶ್ರೀ ಲಕ್ಷ್ಮೀದೇವಿಯು ಹೇಗೆ ಪರಮಾತ್ಮನ ಮಹತ್ಮೆಯನ್ನರಿತು ಸಂತತ ಶ್ರೀ ಹರಿಯನ್ನು ಸೇವಿಸುವಳೋ ಅದರಂತೆಯೆ ಶ್ರೀಹರಿ ಭಕ್ತರಲ್ಲಿರುವ ಸ್ವೈಜ ವಾದ ಭಕ್ತಿ ಸೇವಾರೂಪದಿಂದ ಹೊರಸೂಸುವದು. ದಾಸರಲ್ಲಿರುವ ಗುರು

ಭಕ್ತಿ ನಿತ್ಯದಲ್ಲಿಯೂ ಪ್ರತಿಯೊಬ್ಬರೂ ಆದರದಿಂದ ಕಲಿತು ಆಚರಣೆಯಲ್ಲಿತರತಕ್ಕದ್ದಾಗಿದೆ. ದಾಸರ ನಿಜಕಾರುಣ್ಯಪಾತ್ರನಾನು । ದಾಸರ ಹೆಬ್ಬಾಗಿಲ ಮುಂದೆ ಕಾಯುವನಾನು । ದಾಸರ ಮನೆಯಲ್ಲಿ ಅಂಗಳ ತೊಳೆವವನಾನು । ದಾಸರ ಭೋಜನಶಾಲೆ ಸಮ್ಮಾರ್ಜನ ಗೈವವನಾನು ದಾಸರ ಸದನಕ್ಕೆ ಜಲವಾಹಕನಾನು । ದಾಸರ ಪೂಜಾ ಸಾಧನ ದ್ರವ್ಯ । ತರುವವನಾನು । ದಾಸರೂಟದೆಡೆ ಯಂಜಲು ತಗೆಯುವನಾನು । ದಾಸರ ಬಳಿಯಲ್ಲಿ ಸಮ್ಮೋಗದವನಾನು । ದಾಸರುಂಡದ್ದೆ ಉಂಡು ದಾಸರುಟ್ಟದ್ದೆ ಉಟ್ಟು । ದಾಸರಾಡಿದ್ದೆ ಎನಗೆ ವೇದ ವಾಕ್ಯವೆಂದು । ಲೇಸಾಗಿ ಪೇಳಿಕೊಳುತಲಿದ್ದವರ ಸಂಗ । ಲೇಶಬಿಡದೆ ಕಾಲಕಳೆದ ಜ್ಞಾನಿಗಳವರ । ದಾಸದಾಸಿಯರ ಎಲ್ಲಿಗೆಲ್ಲಿಗೆ ನಿಜ । ದಾಸದಾಸನು ನಾನು ಅನಂತ ಜನುಮದಲ್ಲಿ । ಭೂಷಣ ಎನಗಿದೆ ಮತ್ತಾವ ಸಂಪತ್ತು । ಸೂಸಿಪ್ರಾಪುತವಾಗಲದರಿಂದ ಲಾಭವೇನು । ದಾಸಜನರ ಪ್ರಿಯ ವಿಜಯವಿಠ್ಠಲರೇಯನ । ದಾಸನಾದವನಿಗೆ ಆವದು ಕೊರತೆ ಕಾಣೆ ॥ ೧ ॥

ಇದೆ ಗುರುಭಕ್ತಿ ಗುರುಶುಶ್ರೂಷೆ ಗುರು ಮಹತ್ಮೆಯನ್ನರಿತು ಗುರು ಚರಣಕ್ಕೆ ದೇಹವನ್ನರ್ಪಿಸುವ ನಿಜಶಿಷ್ಯನ ಲಕ್ಷಣ ಪದೇಪದೇ ತಿಳಿದು ಆಚರಿಸತಕ್ಕದ್ದು.

ಇಷ್ಟೇ ಅಲ್ಲ, ನಾನು ಯಾತಕ್ಕೆ ಬಾರದವನು ಎಂದು ವಿಜಯದಾಸರು ಮತ್ತೂ ಹೇಳಿಕೊಂಡಿರುವದೇನಂದರೆ, " ಸುಣ್ಣಕ್ಕೆ ಗತಿಯಿಲ್ಲದ ಮನುಜ ಪಾಮರಂಗೆ । ಮುನ್ನೆ ಕುಳಿತಲ್ಲಿ ರನ್ನದೊಜ್ರದ ಖಣಿ । ತನ್ನಿಂದಲೆ ತಾನೆ । ಕಣ್ಣಿಗೆ ಪೊಳದಂತೆ । ಚನ್ನಾಗಿ ಬಳಿಯಲ್ಲಿ ಬಣ್ಣಿಸಲರಿದು । ಘನ್ನದುರಿತ ಮೋಚನ್ನ ವಾದುದಕೆ । **ಎನ್ನ ಪುಣ್ಯವಲ್ಲ ಎನ್ನ ಸಾಧನವಲ್ಲ । ಮನ್ನಿಸಿ ಹಿರಿಯರು ಇನಿತು ಪಾಲಿಸಲು । ಇನ್ನು ವೆಗ್ಗಳವಿದೆ ।** ಜನ್ನಾರ್ದನದೇವ ವಿಜಯ ವಿಠಲಹರಿಯ । ಸನ್ನುತಿಪರಮಹಿಮೆ ಬಣ್ಣಿಸಿ ಗುಣಿಸುವನಾರು ॥ ೨ ॥

ನಾನು ಯಾತರವನಲ್ಲ ನನ್ನ ಸಾಧನ ಪುಣ್ಯದಿಂದ ವೆಗ್ಗಳಿಕೆ ಬಂದಿಲ್ಲವೆಂದು ಸ್ವಹಂಕಾರಖಂಡನಪೂರ್ವಕ ಗುರುಗಳಾದ ಪುರಂದರದಾಸರ

ಕರುಣಾದಿಂದಲೇ ಇಷ್ಟು ಸಾಧನಸಂಪತ್ತು ಬಂದೊದಗಿದೆ ಎಂದು ಹೇಳುತ್ತ, ಗುರುಗಳು ಕರುಣಾಳುಗಳು ಮಹಾಮಹತ್ಮರು ನಾನು ನೀಚ ಭೃತ್ಯ ಅವರ ಪಾದಸೇವಕ. ನಾನು ನನ್ನಿಂದ ಯಾವದು ಆಗದೆಂದು ಮುಂದೆ ತ್ರಿವಿಡಿ ತಾಳದಲ್ಲಿ "ಅರವಿಂದದ ಬಳಿಯ ಖದ್ಯೋತಕ್ರಿಮಿ ಬಂದು। ಹರಿದಾಡುತಿರಲಾಗ ಅದೇ ಕಾಲದಲ್ಲಿ। ತರಣಿ ಉದ್ಭವನಾಗೆ ಮುದದಿಂದ ಸರಸಿಜ। ಅರಳಲು ಕಾಣುತಲಾ। ಖದ್ಯೊತವು ಹರುಷ ಬಡುವದೆಂದು ನರನು ನುಡಿಯಲುದರ। ಚರಿತೆ ತಿಳಿಯದೇನೊ ನೋಳ್ಪರಿಗೆ। **ಮರುಳೆ ಮನವೆ ಕೇಳು ಕವನಾ ನಿನ್ನ ಕೃತಿ। ಹಿರಿದಾಗಿಪ್ಪದೆಂದು ಹಿಗ್ಗದಿರು।** ಎರಡರ ಪೆಸರು ಒಂದಾದರು ಮಹಾಖ್ಯಾತಿ। ಬರುವದು ತರಣಿಗಲ್ಲದೆ ಖದ್ಯೋತಕೇನು। ಗರುವಿಕೆತನ ಸಲ್ಲ ವಿಜಯ ವಿಠ್ಠಲರೇಯನ। ಶರಣರ ಕೃಪೆಯಿಂದಲಿ ಭಾಗ್ಯ ನಿಜವೆನ್ನು ॥ ೩ ॥

ದಾಸರಲ್ಲಿರುವ ಎಷ್ಟು ನೈಜ ದಾಸ್ಯಭಾವ, ಗುರುಭಕ್ತಿ. ಹೇಮನಸ್ಸೆ ನಾನು ಹರಿಚರಿತೆ ಕವನ ಬರದೆನೆಂಬ ಅಹಂಕಾರದಿಂದ ಹಿಗ್ಗಬೇಡ. ಕಮಲದ ಬಳಿಯ ( ಖದ್ಯೋತ ) ಬೆಂಕಿಯ ಹುಳ ಹರಿದಾಡುವಾಗ್ಗೆ ಸೂರ್ಯನುದಿತವಾಗೆ ಕಮಲ ಅರಳಲು, ಆನೀಚ ಹುಳುವು ನನ್ನ ಪ್ರಕಾಶ ದಿಂದ ಕಮಲ ಅರಳಿತೆಂದು ಹಿಗ್ಗಲು ಜ್ಞಾನಿಗಳು ನಗುವರಲ್ಲವೇನೊ ? ಸೂರ್ಯನಿಗೂ " ಖದ್ಯೋತ " ಬೆಂಕಿ ಹುಳುವಿಗೂ ಖದ್ಯೋತವೆಂದು ಪೆಸರು ಒಂದಾದರೂ ಸೂರ್ಯನ ಪ್ರಕಾಶಕ್ಕೆ ಖ್ಯಾತಿಯಂತೆ, ಖದ್ಯೋತಸ ದೃಶನಾದ ಎನ್ನ ಕಾಂತಿ ಎಷ್ಟು ಜ್ಞಾನವೆಷ್ಟು. ಸೂರ್ಯಪ್ರಕಾಶರಾದ ಗುರುಗಳಾದ ಪುರಂದರದಾಸರ ಕೃಪೆಯಿಂದ ಈ ಭಾಗ್ಯವೇ ನಿಜವು ಸತ್ಯವೆಂದು ಪೇಳಿರುವರು. ಇದರಿಂದ ಸಜ್ಜನರಿಗೆ ಬೋಧಿಸಿರುವದೇನಂದರೆ ಸಾಧನಜೀವಿ ಯಾವಾಗಲು ತಾನು ದೊಡ್ಡವನಾದಾಗ್ಯೂ, ಉತ್ತಮರಿಗೆ ಬಲು ನೀಚದಾಸನೆಂದರಿತು ಸಾಧನ ಮಾಡುವದು.

ಇದೇ ವಿಷಯುವನ್ನೇ ಬ್ರಹ್ಮದೇವರು ಸಕಲಲೋಕ ಸೃಷ್ಟಿಸುವನಾದರೂ ಪದ್ಮಪುರಾಣ ಕರುಣಾಕರ ಸ್ತೋತ್ರದಲ್ಲಿ " ಅನಾದ್ಯನಂತ ಕಾಲೇಷುಭೃತ್ಯೋಹಂತವಹೇ ಪ್ರಭೊ । ಮತ್ಸಮೊನಹಿದೇವೇಶ, ಕೃತಘ್ನೊವಂಚಕೋಭುವಿ " ಎಂದು ಶ್ರೀ ಹರಿಯ ಸ್ತೋತ್ರಗೈದಿರುವ

ರೆಂದಮೇಲೆ ಇತರರ ಪಾಡೇನು? ಮತ್ತು ಸಾಧನ ಜೀವಿಗಳು ಸಾಧನ ಮಾಡುವ ಕ್ರಮ ಗುರುಭಕ್ತಿ ಮುಂದೆ ಅಟ್ಟತಾಳದಲ್ಲಿ–

"ಪರಮದರಿದ್ರನು ಬಹು ರೋಗಿಷ್ಟನು। ನಿರುತ ನಿಂದಕನು ಮಹ ದುಃಖಿಷ್ಟನೆಂದಿಗು। ಕುರುಡನು ಕಿವುಡನು ಕುಂಟನು ಮೂಕನು ನಾನಾ। ಪರಿ ವ್ಯಾಕುಲದ ವ್ಯಾಕುಲದ ವ್ಯಾಕುಲದವ। ಆರು ಇಲ್ಲದಿಪ್ಪ ಪರದೇಶಿ ಕೇವಲ ತೃಷಿ ಪೀಡಿತ ಸುಧಾ। ತುರನಾಗಿ ಬ್ಯಾಸಿಗೆ ಬಿಸಿಲೊಳು ತಪಿಸುತ। ಸ್ಮರಣೇಯು ಇಲ್ಲದೆ ನೀರಿಲ್ಲದಾರಣ್ಯದಿ। ಇರುತಿಪ್ಪ ಮಂದ ಮಾನವನ ತತ್ಕಾಲದಿ। ಭರದಿಂದ ಕೊಂಡೊಯ್ದು ಸಂಜೀವಾದ್ರಿಯಲ್ಲಿ। ಸುರತರು ವಿನ ತಂಪು ನೆರಳೊಳಗೆ ಇಟ್ಟ। ತೆರದಂತೆ ಎನಗಿಂದು ಸೋತ್ತುಮ ರಿಂದಲಿ ದೊರಕಿತು ಇದೆ ಸುಖ ಸೌಖ್ಯವೆನ್ನು ಮನವೆ। ಧರೆಯೊಳು ದೈವವಾದ ವಿಜಯವಿಠ್ಠಲನ್ನ। ಮರೆಯಾದೆ ಜಿಂಹ್ವೆಯಲಿ ಕೊಂಡಾಡು ನಲಿದಾಡು ॥ ೪ ॥

ಎಂದು ಪೇಳುತ್ತ ಮುಂದೆ ಆದಿತಾಳದಲ್ಲಿ ಉಪಜೀವ ನಿನಗಿದೆ. ಎಲೊ ಮನವೆ ಕೇಳು ಬಲು। ಗುಪಿತದಲ್ಲಿ ಚರಿಸು ಅಂತರಂಗದಲ್ಲಿ। ಸುಪಥ ಬಯಸುತಿರು ಸುಜನರ ಬಿಡದಿರು। ಉಪಚಾರವೆನ್ನದಿರು ಹರಿ ದಾಸರು ವೊಲಿದು। ಕೃಪೆ ಮಾಡಿದಲ್ಲದೆ ಬರಿದೆ ಬಾಹುದೆ ಸುಖ। ವಿಪುಲ ಮೊಳಗೆ ಹರಿದಾಸ ನಾಗುವದಕ್ಕೆ। ಅಪರಮಿತವಾಗಿ ಸಾಧನ ದೊರೆಯ ಬೇಕು। ಉಪದೇಶಕರ್ತ ನಮ್ಮ ವಿಜಯವಿಠ್ಠಲರೇಯನ। ಜಪತಪಧ್ಯಾನದಲ್ಲಿ ಪೊತ್ತು ಪೋಗಾಡುವದು ॥ ೫ ॥

ಇಂಥ ಗುರುಭಕ್ತಿ ಪ್ರತಿಯೊಬ್ಬ ಸಾಧನಜೀವಿಯು ಕಾಲಕಾಲಕ್ಕೆ ತಿಳಿದು ಆಚರಿಸಿದರೆ, ಗುರುಕೃಪೆಯಾಗುವದು ಸಂದೇಹವಿಲ್ಲ. ಶ್ರೀ ವಿಜಯದಾಸರಲ್ಲಿಯ ಗುರುಭಕ್ತಿಯು ಅವರ ವಚನಗಳಿಂದಲೇ ಪ್ರತ್ಯಕ್ಷ ಅನುಭವಸಿದ್ಧ.

**ಮತ್ತು ವಿಶೇಷ ವೈಶಿಷ್ಟ್ಯ ಮಹತ್ವ ಏನಂದರೆ** ವೈರಾಗ್ಯ ಜ್ಞಾನ ಭಕುತಿಯಲ್ಲಿ ಇವರ ಸರಿ ಆರನ್ನು ಕಾಣೆವು. ಆಗಿನ ಕಾಲದ ಜ್ಞಾನಿಗಳೆಲ್ಲ ಇವರ ಮಹತ್ಮೆ ಕೇಳಿ ನೋಡಿ ಹಿಗ್ಗಿದರು. ಬಾವನ್ನ(ಶ್ರೀಗಂಧ)ದ

ಮರದ ಸಮೀಪಕ್ಕೆ ಬೇವಿನಮರವು ಇದ್ದರೆ ತಂಗಾಳಿಬಂದು ಬೀಸಲು ಶ್ರೀಗಂಧಸುಗಂಧವೆ ಹೆಚ್ಚಾಗಿ ಪಾವನವಾದಂತೆ ಇವರ ಸಂಗದಿಂದ ಎಷ್ಟೋ ಜನರು ಪುನೀತರಾದರು. ಸದಾ ದಾಸರು ಜ್ಞಾನಿಗಳ ಪಾದದಲ್ಲಿ ಎರಗುತ್ತ ತಮ್ಮ ಅಂಗಪವಿತ್ರತೆ ಮಾಡಿರುವರು. ಸಂಸಾರವೃತ್ತಿಯಲ್ಲಿದ್ದರೂ, ದಿವ್ಯಭೋಜನ ನಾನಾ ಉಡುಗೆ ವಸನಗಳು, ಬಂಧುಗಳಲ್ಲಿ ಸಲ್ಲಾಪ ಸ್ವಪತ್ನಿಯ ಸಕಾಲಸಂಗವೆಲ್ಲವೂ ಕಾಲಕಾಲದಲ್ಲಿ ಹರಿಯ ಸಮರ್ಪಣ ಮಾಡುತ್ತಲಿರುವರು. ಅಷ್ಟಮಹಾ ಮಂತ್ರತತ್ವನ್ಯಾಸ ಮಾತೃಕಾನ್ಯಾಸ ಮಾಡುತ್ತ ಮನೋವಿಶುದ್ಧರಾಗಿರುವರು. ಕಾಮಕ್ರೋಧಂಗಳು ಲವಮಾತ್ರವಾದರೂ ಇವರಲ್ಲಿ ಇದ್ದಿಲ್ಲ. ಕುಜನರನ್ನು ಕನಸಿನಲ್ಲಿ ಬೆರಸಲಿಲ್ಲ. ಹೇಮ ಮೊದಲಾದ ವಿಷಯಾಕಾಂಕ್ಷೆಯನೆಲ್ಲವೂ ತೊರದಿದ್ದರು. ಭಕ್ತರಿಗೆ ವರವು ನೀಯುತಲಿರುವರು. ತಮ್ಮ ಬಳಿವಿಡಿದವರ ಮನಸ್ಸಿಗೆ ಅತಿ ಅಲ್ಹಾದಕರನಾದ ಚಂದ್ರನಂತೆ ತೋರುತ್ತಲಿರುವರು. ಸದಾಸರ್ವಕಾಲ ನಾನು ಸ್ವತಂತ್ರನಲ್ಲ ನನ್ನಿಂದಾಗುವ ಕಾರ್ಯವೇನೂ ಲೇಶವಿಲ್ಲ. ಶ್ರೀ ಲಕ್ಷ್ಮೀಮನೋಹರನಾದ ಶ್ರೀ ಹರಿಯೆ ಸರ್ವ ಸ್ವತಂತ್ರನೆಂಬ ಅನುಭವವನ್ನು ಚನ್ನಾಗಿ ಬಲ್ಲವರಾಗಿದ್ದರು. ಕೇವಲ ಪರೋಪಕಾರಾರ್ಥವಾಗಿಯೇ ಅವನಿಯ ಮೇಲೆ ಸಂಚರಿಸುತ್ತಿರುವರು. ಸದ್ಗುಣ ಸಾಗರರಾಗಿರುವರು. ಜ್ಞಾನಿಗಳಲ್ಲಿ ಶಾಠ್ಯಮಾಡದೆ ಕವಿಗಳನ್ನು ಕಂಡ ಕೂಡಲೇ ಆ ಜ್ಞಾನಿಗಳನ್ನು ಬಹು ಆದರಿಸಿ ಉಪಚಾರ ಮಾಡುವರು. ದೀನಜನರಾದ ಭಕ್ತ ಜನರನ್ನು ಹಸನ್ಮುಖದಿಂದ ನೋಡುತ್ತ ವರಗಳನ್ನು ನೀಡುವರು. ನವನವಮೋಹನ ಹರಿನಾಮಾಮೃತ ಕಾಲಕಾಲಕ್ಕೆ ಉಂಡು ಶ್ರೀ ಪಾದ ಕಂಡು ಭಜಿಸುವರು.

ಪರಮತಗಳನ್ನು ಖಂಡಿಸುತ್ತ ಸತ್ಯವಾಗಿ ಹರಿಪರನೆಂದು ಸ್ಥಾಪಿಸಿದರು. ಪರತತ್ವಅರುಪಿ ತನ್ನವರಾದ ನಿಜಭಕ್ತರನ್ನು ಗುರುಮಧ್ವಮತ ಪೊಂದಿಸಿದರು. ದಾಸರು ತಾವು ಸ್ವೇಚ್ಛಾಚಾರರಾಗಿರದೆ ಪರಿಪರಿ ವ್ರತಗಳನ್ನು ಆಚರಿಸುತ್ತ, ಮನೋದುರ್ವ್ಯಸನಗಳನ್ನು ಸಂಹಾರ ಮಾಡಿದ್ದರು. ಈ ಗುರುಶಿರೋಮಣಿಗಳು ಶುದ್ಧ ಪದ್ಧತಿಯಿಂದ ಪರಿಪರಿಯಾತ್ರೆ ಸಂಚರಿಸುತ್ತಿದ್ದರು. ಸಂಸಾರವು ತಪಸ್ಸೆಂದು ಅರಿದವರು.

ಅಧ್ಯಾತ್ಮ ಅಮಿತಗೌಪ್ಯ ವಿಚಾರನಿರತರು ಸಕಲ ಜನ್ಮಾದಿ ಸ್ವಾಧ್ಯಾಯನಿಪುಣರು. ಅದ್ವೈತಮತದ ಕೋಲಾಹಲರು ಅಮಲಶೀಲರು ಸಿದ್ಧಾಂತ ಜ್ಞಾನನಿಧಿಗಳು ಹೀಗೆ ಗೋಪಾಲದಾಸರು ಶ್ರೀ ವಿಜಯರಾಯರ ವೈಶಿಷ್ಟ್ಯ ಕೊಂಡಾಡಿರುವರಲ್ಲದೇ.

**ಶ್ರೀ ಮೋಹನದಾಸರು ಸಹ** ಹೇಳಿದ್ದೇನಂದರೆ ಶುದ್ಧಮಂದರನ್ನ ಉದ್ಧಾರಾರ್ಥವಾಗಿ। ಮಧ್ವರಾಯರ ಮತಾಬ್ಧಿಯೊಳು ಪುಟ್ಟಿ।ಸಿದ್ಧಾಂತ ಸ್ಥಾಪಿಸಿ ಗೆದ್ದುವಾದಿಗಳ। ಹೆದ್ದೈವವೆ ಅನಿರುದ್ಧನೆಯೆಂದು। ಪದ್ಧತಿಯಿಂದ ಪೇಳಿಸಿದಿ ವೈಷ್ಣವರನ್ನ। ಶುದ್ಧಾತ್ಮರ ಮಾಳ್ಪ ಉದ್ಯೋಗದಿಂದಲಿ। ಹದ್ದನ್ನೇರಿ ಬಪ್ಪ ಪದ್ಮನಾಭನ್ನ। ಹೃದ್ದಯದೊಳಗಿಟ್ಟ ಸದ್ಗುರುರಾಯ ॥ ೧ ॥

**ಮತ್ತು ಜಗನ್ನಾಥದಾಸರು** ಶೋಧಿಸಿ ಗ್ರಂಥಗಳಾ ಸುಳಾದಿಯ ಮೋದದಿಂದಲಿ ಬಹಳ ಕವಿತೆ ಮಾಡಿ। ಸಾಧುಜನಕೆ ಏಸುಕಾಲ ಆನಂದವಿತ್ತು ॥ ವಾದಿಯನು ತಾ ಒದೆದುಕಾಲಿಲಿ। ಮಾಧವ ಜಗನ್ನಾಥವಿಠಲನ। ಪಾದಕಮಲಕೆ ಮಧುಪನಂದದಿ। ಸಾದರದಲಿ ತೋರುತಲಿ ಮೆರೆಯುವ ॥ ೩ ॥ ರತುನ ದೊರಕಿತಲ್ಲಾ ಎಂಬೋ ಪದದಲ್ಲಿ ದಾಸರ ಮಹಿಮೆ ಕೊಂಡಾಡಿರುವರು. ಮತ್ತು ಕಲ್ಲೂರ ಸುಬ್ಬಣದಾಸರಾದ ವ್ಯಾಸವಿಠಲರು ೩ ಪದಗಳಿಂದ ದಾಸರ ವಿಶಿಷ್ಟಮಹಿಮೆ ಕೊಂಡಾಡಿರುವರು. "ಸ್ಮರಿಸಿ ಬದುಕಿರೋ ದಿವ್ಯಚರಣಕೆರಗಿರೋ" ಎಂಬುವ ೨೭ ನುಡಿ ಪದವೂ ಸಂಪೂರ್ಣವಾಗಿ ಶ್ರೀ ವಿಜಯದಾಸರಲ್ಲಿರುವ ಅತಿ ವಿಚಿತ್ರ ಮಹಿಮೆ ಪೇಳಿದ್ದಾರೆ. ಪ್ರತಿನಿತ್ಯ ಉದಯ ಕಾಲದಲ್ಲಿ ಇವರ ಮಹಿಮೆ ಕೊಂಡಾಡಲು ವಿಧಿಬದ್ಧವಾಗಿ ಆಜ್ಞಾಪಿಸಿದ್ದಾರೆ.

ಅನೇಕ ಮಹಮಹಾ ಮಹಿಮೆಯುಳ್ಳ ಶ್ರೀ ವಿಜಯದಾಸರು ೧೮ ವರುಷ ಲೋಕೋದ್ಧಾರಾರ್ಥವಾಗಿ ಯಾತ್ರೆ ಸಂಚರಿಸಿದರು. ಪ್ರತಿವರುಷ ಬ್ರಹ್ಮರಥೋತ್ಸವಕ್ಕೆ ತಿರುಪತಿಗೆ ತಪ್ಪದೇ ಪೋಗುವರು. ನೆನಸಿಕೊಂಡಾಗೆಲ್ಲ ಶ್ರೀ ವೆಂಕಟಗಿರಿಯಾತ್ರೆ ಅನೇಕಸಾರೆ ಮಾಡಿದರು. ಹೀಗೆ ದಾಸರ ವಯಸ್ಸು ಮುಕ್ಕಾಲಭಾಗವಾಯಿತು. ಸಾಧನ ಜೀವಿಗಳು–

ಪ್ರಥಮ ವಯಸ್ಸಿನಲಿ ವಿದ್ಯಾಭ್ಯಾಸ, ದ್ವಿತಿಯದಲ್ಲಿ ಗೃಹಕರ್ಮ, ತೃತಿಯದಲಿ ತೀರ್ಥಯಾತ್ರೆ ಸಂಚರಿಸಬೇಕೆಂಬ ನಿಯಮದಂತೆ ದಾಸಾರ್ಯರು ಜನರ ಶಿಕ್ಷಾರ್ಥವಾಗಿ ತಮ್ಮ ೩೪ ವರ್ಷದಿಂದ ೧೪ ವರುಷವರೆಗೆ ಯಾತ್ರಾಟನಗೈದರು. ವೃದ್ಧಾಪ್ಯಕಾಲ ಒದಗಿತು. ಪುಟ್ಟಿದ ಗ್ರಾಮ ಚೀಕನಬರಿವಿಯ ಮನೆ ಭೂಮಿಮೇಲೆ ಮುಮುತಾದಿಗಳು ಬಿಟ್ಟೇ ಬಿಟ್ಟರು. ನಾನು ನನ್ನದು ನಮ್ಮೂರು ನನ್ನ ಮನೆ ಹೊಲ ನನ್ನವರು ಎಂಬುದು ಬಹು ಬಂಧಕ. ಶ್ರೀ ಕೃಷ್ಣ ಪರಮಾತ್ಮನು ಪುಟ್ಟಿದ್ದು ಮಧುರಿ ತಂದಿಟ್ಟದ್ದು ಗೋಕುಲದಲ್ಲಿ ಬೆಳದಿದ್ದು, ದ್ವಾರಕೆಯಲ್ಲಿ ಇದ್ದದ್ದು ಎಲ್ಲವನ್ನು ಬಿಟ್ಟು ಅವತಾರಸಮಾಪ್ತಿ ಕಾಲ ವ ಡ್ಡಿ ಜ ಗ ನ್ನಾ ಥ ಗಂಗಾತೀರವನ್ನಾಶ್ರಯ ಗೊಂಡಂತೆ ಶ್ರೀ ಕೃಷ್ಣ ಭಕ್ತರಾದ ಶ್ರೀ ವಿಜಯದಾಸರು ಸಕಲವು ತ್ಯಜಿಸಿ ತೀರ್ಥಯಾತ್ರಾನಿಮಿತ್ಯ ಚಿಪ್ಪಗಿರಿ ಎಂಬ ಗ್ರಾಮ, ಭಾಸ್ಕರಕ್ಷೇತ್ರಕ್ಕೆ ಬಂದು ತಪಸ್ಸಿನಲ್ಲೆ ಉಳಿದ ಆಯುಷ್ಯಕಳೆದರು. ಚಿಪ್ಪಗಿರಿಯಲ್ಲಿ ಸ್ವಲ್ಪೇ ದಿನ ೩ ವರ್ಷವಿದ್ದರೆಂತ ಕೆಲವರ ಅಭಿಪ್ರಾಯ. ಕೊನೆಯ ಆಯುಸ್ಸು ಚಿಪ್ಪಗಿರಿಯಲ್ಲಿ ಕಳೆದರೆಂದು ತತ್ವವೇತ್ತರಿಂದ ಕೇಳಿದದು.

## ಶ್ರೀ ವಿಜಯದಾಸರು ಚಿಪ್ಪಗಿರಿ ಕ್ಷೇತ್ರ

ಚಿಪ್ಪಗಿರಿ ಎಂಬ ಗ್ರಾಮವು, ಮದ್ರಾಸ ದಕ್ಷಿಣ ಮಹಾರಾಷ್ಟ್ರ ( ಸದರನ್ ) ರೇಲ್ವೆ ಗುಂತಗಲ್ ಜಂಗಷನಿಗೆ ಸುಮಾರು ೩॥ ೪ ಮೈಲು ಮೇಲೆ ಇದೆ. ಈ ಗ್ರಾಮವು ಮೊದಲಿಗೆ ಬಳ್ಳಾರಿ ಜಿಲ್ಲಾ ಆಲೂರ ತಾಲ್ಲುಕಗೆ ಸೇರಿದ್ದು, ಈಗ ಆಂಧ್ರಕರ್ನೂಲ ಜಿಲ್ಲೆಗೆ ಸೇರಿದೆ. ಈ ಆಲೂರು ತಾಲ್ಕು ಗುಂತಗಲ್ಲಿನಿಂದ ೧೩ ಮೈಲು ಇರುವದು.

ಈ ಚಿಪ್ಪಗಿರಿ ಪೂರ್ವದಿಂದ ಭಾಸ್ಕರಕ್ಷೇತ್ರವೆಂದು ಕರೆಸಿಕೊಳ್ಳಲ್ಪಟ್ಟದೆ. ಯಾಕಂದರೆ ಇಲ್ಲಿ ಸೂರ್ಯದೇವರು ತಪಸ್ಸು ಮಾಡಿದ ಸ್ಥಳವಿದೆ. ಗಿರಿ–ಬೆಟ್ಟವಿದೆ. ಆ ಗುಡ್ಡದ ಕೆಳಗೆ ಒಂದು ಜಲಾಶಯ ಪುಷ್ಕರಣಿ ಇದೆ. ಆ ಪುಷ್ಕರಣಿಗೆ ಹತ್ತಿದ ಕೋಟೆ ಗೋಡಿಯ ಮೇಲೆ ಒಂದು ದೊಡ್ಡ ಶಿಲಾದಲ್ಲಿ ಸೂರ್ಯ ಚಕ್ರವಿದೆ. ಇಂದಿಗೂ ಕಾಣುತ್ತಲಿದೆ, ಇದು ಪವಿತ್ರವಾದ ಸ್ಥಳವೆಂದು ಕರಸಿಕೊಳ್ಳುತ್ತಿದೆ. ಸೀ ನೀರಿನ ಪುಷ್ಕರಣಿ ಈಗಲೂ ಇವೇ ನೀರು ಕುಡಿಯುತ್ತಾರೆ.

ಈ ಸ್ಥಳದಲ್ಲಿ ಬಿಜ್ಜಳರಾಜನು ೧೧೫೬ ರಿಂದ ೧೧೬೭ ಇಸವಿಯ ವರೆಗೆ ಕೋಟೆಕಟ್ಟಿ ಜೈನಬಸ್ತಿಯನ್ನು ನಿರ್ಮಾಣಮಾಡಿದ್ದಾನೆ. ಗುಡ್ಡದ ಮೇಲೆ ಜೈನಗುಡಿಯುಂಟು. ಕುರುಗೋಡು ಹಂಪಿ, ಕೊಟ್ಟೂರುರಂತೆ ಇಲ್ಲಿ ಜೈನವಸತಿ ಕಟ್ಟಡಗಳಿವೆ. ಜೈನ ತೀರ್ಥಾಂಕುರರ ವಿಗ್ರಹ (ಮೂರ್ತಿ)ಗಳಿವೆ. ಸೀನೀರಿನ ಭಾವಿ ಇದೆ. ( ಇದೆ ಸೂರ್ಯದೇವರು ತಪಸ್ಸು ಮಾಡಿದ ಸ್ಥಳ ).

ಗ್ರಾಮದಲ್ಲಿ ಜೈನ ಗುಡಿಗಳು ಭೋಗೇಶ್ವರ ದೇವಾಲಯು, ಚನ್ನಕೇಶವ ದೇವಾಲಯುಗಳು ಬಹು ದೊಡ್ಡವು, ವಿಸ್ತಾರವಾಗಿವೆ. ಉನ್ನತವಾದ ಗೋಪುರ ವಿಸ್ತಾರವಾದ ಮಂಟಪಗಳು ಇರುವವು. ಧ್ವಜಸ್ಥಂಭವು ೪೦ ಫೂಟು ಎತ್ತರ ವಿರುವದು ಅಂದವಾಗಿ ಕಾಣುತ್ತಲಿದೆ. ಶ್ರೀ ಭೋಗೇಶ್ವರ ದೇವಾಲಯುದಲ್ಲಿ ಒಂದು ದೊಡ್ಡ ಕಲ್ಲ ಮೇಲೆ ಶಿಲಾಶಾಸನವಿದೆ. ಇದು ಪೂರ್ವ ಕನ್ನಡ ಲಿಪಿಯಲ್ಲಿರುವದು. ಈ ಶಾಸನದಲ್ಲಿ ೧೫೭೫ ಇಸವಿಯಲ್ಲಿ ಚನ್ನಕೇಶವನಿಗೆ ಭೂಮಿದಾನವಿತ್ತಂತೆ ತಿಳಿಯುತ್ತದೆ.

ಊರ ಹಿಂದೆ ಪಶ್ಚಿಮಕ್ಕೆ ಶ್ರೀ ಪ್ರಸನ್ನ ವೆಂಕಟೇಶ ದೇವಾಲಯವಿದೆ. ದೇವಾಲಯವು ಪ್ರಶಸ್ಥಗೋಪುರವು ಎತ್ತರ, ಶ್ರೀ ವೆಂಕಟೇಶದೇವರ ವಿಗ್ರಹವು ಚಿಕ್ಕದು ಬಹು ಸುಂದರವಾಗಿದೆ. ಈ ಗುಡಿಯಲ್ಲಿ ಒಂದು ಚಿಕ್ಕ ಶಿಲಾಶಾಸನವಿದೆ ಕನ್ನಡ ಲಿಪಿಯಲ್ಲೇ ಇರುವದು. ೧೫೨೮ ಸಂವತ್ಸರದಲ್ಲಿ ವಿಜಯನಗರ ರಾಜ ಕೃಷ್ಣದೇವರಾಯನು ಕೊಟ್ಟ ದಾನ ಶಾಸನವಿದೆ. ( ಶಾಸನಮಾತ್ರ ವಿದೆ– ಈಗ್ಗ ದಾನಕೊಟ್ಟ ಭೂಮಿ ಹಿಂದಿನ ಅರ್ಚಕರು ಮಾರಿ ಬಿಟ್ಟಾರೆ ). ಇಂಥ ಜೈನಬಸ್ತಿ ಗುಡಿಗಳು ಈಗ ಹಿಂದು ದೇವಾಲಯುಗಳಾಗಿವೆ. ಈ ಚಿಪ್ಪಗಿರಿ ಗ್ರಾಮಕ್ಕೆ ಪೂರ್ವ ಭಾಗ ನಂಚರ್ಲರೊಡಿಗೆ ದಕ್ಷಿಣ ಭಾಗದಲ್ಲಿ ಪ್ರಸಿದ್ಧವಾಗಿರುವ ಮಧ್ವ ದಾಸರಾದ ಶ್ರೀ ವಿಜಯದಾಸರ ವೃಂದಾವನವಿದೆಂದು **ಬಳ್ಳಾರಿ ಜಿಲ್ಲಾ ಗೆಜಿಟೀಯುರು ೨೧೧ ನೇ ಪುಟದಲ್ಲಿ ಬರೆದದೆ.** ೧೯೨೯ ಇಸವಿಯಲ್ಲಿ ಒಬ್ಬರು ಚಿಕ್ಕ ೧೭ ಪುಟತೆನಗಲ್ಲಿ ಪ್ರಕಟಿಸಿರುವರು.

ಇಂತು, ಚಿಪ್ಪಗಿರಿಯು ಪುಣ್ಯತಮವಾದ ಕ್ಷೇತ್ರ. ಸುಪ್ರಸಿದ್ಧ ಐತಿಹಾಸಿಕ ಸ್ಥಳವಿದೆ. ಶ್ರೀ ವಿಜಯದಾಸರು ಇಂಥ ಪುಣ್ಯತಮಕ್ಷೇತ್ರ ಏಕಾಂತ ಸ್ಥಳವಿದೆಂದು ಭಾವಿಸಿ, ತಮ್ಮ ಕೊನೆಯ ಆಯುಸ್ಸು ಚಿಪ್ಪಗಿರಿಯಲ್ಲಿ ಕಳೆದು ಅಲ್ಲಿ ಆ ತೆನಗುದೇಶದ ಬಡಿದಾಡ ಹೊಡದಾಟದಲ್ಲಿ ಸೇರಿದ ಎಷ್ಟೋ ಅಜ್ಞಜನರನ್ನು ಉದ್ಧಾರಮಾಡಿದರು. ರಡ್ಡೇರು ಬೇಡರ ವಸತಿ ತುಂಡಾಟ, ಪುಂಡಾಟ ಹೊಡದಾಟ ಕಟದಾಟದ ಜನರೇ ಆ ಗ್ರಾಮ ಮತ್ತು ಸುತ್ತಲಿರುವ ಗ್ರಾಮಗಳೆಲ್ಲ ಇದೇ ಸ್ಥಿತಿ ಇತ್ತು. ಆ ಕಾಲಕ್ಕೆ ಧರ್ಮಬೋಧಿಸಿ ಜನರನ್ನು ಸುಮಾರ್ಗಕ್ಕೆ ತರಬೇಕಾದ ಸಮಯವೆಂದೇ ಜ್ಞಾನಿಗಳಾದ ಶ್ರೀ ವಿಜಯರಾಯರು ತಿಳಿದು ಅಲ್ಲೇ ವಾಸಮಾಡಿದರು ಕೆಲವು ಶಿಷ್ಯರು ಇದ್ದರು.

ಪ್ರತಿನಿತ್ಯ ಸೂರ್ಯತೀರ್ಥದಲ್ಲಿ ಅರುಣೋದಯಕ್ಕೆ ಮಿಂದು, ಭೋಗೇಶ್ವರದೇವಾಲಯದಲ್ಲಿಯೇ ಇದ್ದು ತಪಸ್ಸು ಧಾರಣಧ್ಯಾನಯೋಗ ಮಾಡುವರು. ಇವರಧ್ಯಾನ ಯೋಗ ತಪಸ್ಸು ಈ ಪುಣ್ಯಾತ್ಮರ ಮಹಿಮೆಯಿಂದ ಮಡ್ಡ ಜನರಲ್ಲಿ ಒಂದುತರದ ಒಳ್ಳೇ ಭಾವನೆ ಯುಂಟಾದಿತು. ಪ್ರತಿನಿತ್ಯ ಪ್ರಾತರಾಹ್ನಿಕನಂತರ, ಚಿಪ್ಪಗಿರಿ ಊರಲ್ಲಿ ಹೋಗಿ ಸಂಪ್ರದಾಯದಂತೆ ಗೋಪಾಳ ಮಾಡುವರು. ಆಗಿನ ಕಾಲದಲ್ಲಿ ಜನರಿಗೆ ಒಳ್ಳೇ ಮಾರ್ಗದಲ್ಲಿ ನಡೆಯಿರೆಂದು ನೂತನ ನೂತನ ಪದಗಳಿಂದ ಬೋಧಿಸುವರು. ಹೀಗೆ ಕೆಲವು ವರ್ಷ ನಡೆದವು. ಪ್ರತಿವರ್ಷ ತಪ್ಪದೇ ಬ್ರಹ್ಮೋತ್ಸವಕ್ಕೆ ತಿರುಪತಿಗೆ ಹೋಗುವರು. ಪುನಃ ಚಿಪ್ಪಗಿರಿಯಲ್ಲಿ ಮತ್ತು ಹತ್ತಿರವಾದ ಆದವಾನಿ ಮುಂತಾದ ಸ್ಥಳಗಳಿಗೆ ಹೋಗಿ ಪುನಃ ಚಿಪ್ಪಗಿರಿಗೆ ಬರುವರು. ಭೋಗೇಶ್ವರದೇವಾಲಯ ಮಂಟಪದಲ್ಲಿ ಜನವಸತಿಗೆ ಯೋಗ್ಯವಾದ ಸ್ಥಳ– ಏಕಾಂತವಾಗಿದೆ.

ಈ ಅವಧಿಯಲ್ಲಿಯೇ ಆದವಾನಿಯಲ್ಲಿ ಒಂದು ಮನೆಯಲ್ಲಿ ಪ್ರಾಣದೇವರ ಪ್ರತಿಷ್ಠೆಮಾಡಿ ಶ್ರೀ ಪಂಗನಾಮ ತಿಮ್ಮಣ್ಣನವರ ಪ್ರಾರ್ಥನೆಯಂತೆ ಆದವಾನಿಯಲ್ಲಿಯೂ ಕೆಲವು ಕಾಲ ಇದ್ದರೆಂದು ಗೊತ್ತಾಗುತ್ತದೆ. ಇಂದಿಗೂ ಆ ಮನೆಯಮುಂದೆ ದೊಡ್ಡ ಅರಳೆಗಿಡದ ಕಟ್ಟೆ ಇದೆ. ನಂತರ ಪ್ರಾಂಶದೇವತೆಗಳಾದ ಹತ್ತಿಬೆಳಗಲ್ ನೃಸಿಂಹಾಚಾರ್ಯರು ಇದೇ ಸ್ಥಳ

ದಲ್ಲಿದ್ದು ತಪಸ್ಸುಗೈದು, ಸೂರ್ಯೋಪಸ್ತರಣ–ಚಂದ್ರೋಪಸ್ತರಣ ಮಾಡಿ ದಾಸರ ಅನುಗ್ರಹ ಸಂಪಾದಿಸಿಕೊಂಡರು.

ಆಗಾಗ್ಗೆ ಆದವಾನಿಗೆ ಶ್ರೀ ವಿಜಯದಾಸರು ಪೋಗಿಬರುತ್ತ ಚಿಪ್ಪ ಗಿರಿಯಲ್ಲೇ ವಾಸಮಾಡಿದ್ದರು.

## ಶ್ರೀ ವೇಣುಗೋಪಾಲಕೃಷ್ಣನ ಪ್ರಾಪ್ತಿ

ಇನ್ನು ತಮ್ಮ ಅವತಾರ ಕಾಲ ಸಮೀಪಿಸಿದೆಂದು ಜ್ಞಾನಿಗಳಾದ ವಿಜಯರಾಯರು ದಿವ್ಯಜ್ಞಾನದಿಂದ ತಿಳಿದರು. ಭಗವದಾಜ್ಞೆಯಂತೆ ಒಂದು ದಿನ ಗ್ರಾಮ ಪೂರ್ವಭಾಗಕ್ಕೆ ಅಕಸ್ಮಿಕವಾಗಿ ಹೊರಟರು. ಅಲ್ಲಿ ಒಂದು ದೊಡ್ಡ ಹೊಲ ಅಲ್ಲಲ್ಲಿ ಗಗನಚುಂಬಿತ ವೃಕ್ಷರಾಜಗಳಿವೆ. ಪರಮ ರಮಣೀಯ ಸ್ಥಳ. ಅಲ್ಲಿ ಒಂದು ನೀರು ನಿಂತಮಡುವು. ನೀರು ಚನ್ನಾ ಗಿವೆ. ದೈವಯೋಗದಿಂದ ಶ್ರೀ ವಿಜಯದಾಸರು ಅಲ್ಲೇ ಸ್ನಾನಮಾಡಿ, ವೃಕ್ಷದ ಕೆಳಗೆ ತಮ್ಮ ಅಹನ್ನೀಕಮಾಡುತ್ತ ಕುಳಿತಾರೆ. ಮಧ್ಯಾನ್ಹ ಸಮಯವಾಗಿದೆ. ಆಗ್ಗ ಅಲ್ಲಿಗೆ ಆ ಭೂಮಿಯನ್ನು ಸಾಗುಮಾಡುವ ಕುರುಬನಾದ ಚಂದಪ್ಪನು, ತನ್ನ ಕುರಿಗಳನ್ನು ಮೇಯಿಸಿಕೊಂಡು ನೀರು ಕುಡಿಸಲಿಕ್ಕೆ ಆ ಮಡುವಿಗೆ ಬಂದನು. ಕುರಿಗಳಿಗೆ ನೀರು ಕುಡಿಸಹತ್ತಿ ದ್ದಾನೆ. ತನ್ನ ಸಾಂಕೇತಿಕ ಶಬ್ದಗಳಿಂದ, ಬ್ಯಾ, ಬ್ಯಾ, ಟರ, ಉಶ, ಎಂದು ಕುರಿಗಳನ್ನು ಕರೆಯುತ್ತಾನೆ. ಇದನ್ನು ನೋಡಿ ಶ್ರೀ ವಿಜಯ ದಾಸರಿಗೆ ಆನಂದವಾಯಿತು.

ಆಗ್ಗ ಶ್ರೀ ವಿಜಯದಾಸರು ತನ್ನ ಹೊಲದೊಳಗೆ ಗಿಡದ ದಡಿಯಲ್ಲಿ ಕುಳಿತು ಪೂಜಾಮಾಡುವರನ್ನು ನೋಡಿ ಚಂದಪ್ಪನು ಬೆರಗಾದನು. ಆತನ ಚಿತ್ತವೃತ್ತಿಗಳೆಲ್ಲ ದಾಸರ ಕಡೆಗೆ ಸಾಗಿದವು. ಯಾರೋ ಪುಣ್ಯ ಪುರುಷರಾದ ಮಹತ್ಮರಿರುವರು. ಅವರನ್ನು ನೋಡುವದರಿಂದ ಎಷ್ಟು ಮನಸ್ಸಿಗೆ ಸಂತೋಷವಾಗಿದೆಂದು ಭಾವಿಸುವಾಗಲೇ ದಾಸರ ಕೃಪಾ ದೃಷ್ಟಿ ಚಂದಪ್ಪನ ಮೇಲೆ ಬಿದ್ದಿತು. ಅಪ್ಪಾ ಇಲ್ಲಿಬಾ ಎಂದು ಕರೆದೊಡನೆ, ಚಂದಪ್ಪನು ಕುರಿಗಳನೆಲ್ಲ ಬಿಟ್ಟು ಬಹು ಅವಸರದಿಂದ ದಾಸರಕಡೆಗೆ ಸಾಗಿದನು. ಸಮೀಪಿಸಲು ಕಾಲೊಳಗಿನ ಕೆರಹು ದೂರ ಬಿಟ್ಟನು.

ಕೈಯೊಳಗೆ ಉದ್ದನ ಬಡಿಗೆಯಿದೆ. ಚಣಾಲು ತೊಟ್ಟಾನೆ ಮೇಲೆ ಕಂಬಳಿ ಹೊತ್ತಿದ್ದಾನೆ. ತಲೆಯಮೇಲೆ ವಸ್ತ್ರವಿದೆ. ಎಡಕೈಯಲ್ಲಿರುವ ಸೇದುವ ಬತ್ತಿಯನ್ನು ಬಲಗೈಯಲ್ಲಿರುವ ಕೋಲನ್ನು ಬಿಸಾಡಿದನು. ದಾಸರ ಸಮೀಪಕ್ಕೆ ಬಂದು ನೆಲದಮೇಲೆ ಉದ್ದಕ್ಕೆರಗಿ ಭಕ್ತಿಯಿಂದ ದಾಸರಿಗೆ ನಮಸ್ಕಾರಮಾಡಿ ಕೈಜೋಡಿಸಿಕೊಂಡು ನಿಂತನು.

**ದಾಸರು:—** ನೀನಾರು ನಿನ್ನ ಹೆಸರೇನಪ್ಪಾ ?

**ಚಂದಪ್ಪ:—** ಸಾಮಿ ನಾನು ಕುರುಬ ಚಂದಪ್ಪನೆಂದು ನನ್ನ ಹೆಸರು.

**ದಾಸರು:—** ಈ ಹೊಲ ಯಾರದಪ್ಪ.

**ಚಂದಪ್ಪ:—** ಸಾಮಿ ಈ ೧೦೦ ಎಕರೆ ಇರುವ ಹೊಲ ನನ್ನದು ನಾನೇ ಈ ಭೂಮಿ ಸೈದ್ಯಮಾಡುತ್ತೇನೆ.

**ದಾಸರು:—** ನೀರು ನಿಂತ ಮಡುವು ನಿನ್ನ ಹೊಲದಲ್ಲಿದೆಯೊ ?

**ಚಂದಪ್ಪ:—** ಹೌದು ಮಾಸಾಮಿ ಈ ಮಡುವು ಸಹ ನನ್ನ ಹೊಲದಲ್ಲಿದೆ. ಕಾರಣ ನನ್ನ ಕುರಿಗಳಿಗೆ ನೀರು ಕುಡಿಸುವ ಸಲುವಾಗಿ ಬಂದಿದ್ದೇನೆ. ಆದರೆ ತಾವು ಯಾರು ? ಇಲ್ಲ್ಯಾಕ ಬಂದೀರಿ ?

**ದಾಸರು:—** ಚಂದಪ್ಪ ನಾನು ದಾಸ. ನಮ್ಮ ದೇವರು ನಿನ್ನ ನೀರಿನ ಮಡುವಿನಲ್ಲಿರುವನು. ಅದಕ್ಕೆ ನಾನು ಬಂದು ನಿನ್ನ ಮಡುವಿನಲ್ಲೇ ಸ್ನಾನಮಾಡಿ ಇಲ್ಲೆ ಪೂಜಾ ಮಾಡುತ್ತೀನಿ.

**ಚಂದಪ್ಪ:—** ಯಪ್ಪಾ ದಾಸರೆ ನಾನು ದಿನಾ ಕುರಿಗೆ ನೀರು ಕುಡಸಾಕ ಬರತೀನಿ. ಹೊಲಾ ಮಾಡಿಕೊಂತ ಇಲ್ಲೇ ಇರತೀನಿ. ಮಡುವಿನಲ್ಲಿ ಮೈ ತೊಳಕೊತೀನಿ. ಎಷ್ಟೋ ವರ್ಸ ಆಗಾಕ ಬಂತು ಸಾಮಿ ನಾನು ನಿಮ್ಮ ದೇವರನ್ನು ನೋಡಿಲ್ಲ. ನೀವು ಹೇಳೋದು ಕರೆ ಕಾಣಾದಿಲ್ಲಪ್ಪಾ ಎಂದು ನುಡಿದನು.

**ದಾಸರು:—** ದಾಸರು ನಮ್ಮ ದೇವರು ನಿನಗೆ ಕಾಣುವದಿಲ್ಲ. ನಾನ್ನು ನಿನಗೆ ತೋರಿಸುತ್ತೇನೆ ಬಾ ನಡೆ ಚಂದಪ್ಪ ಎಂದು ಹೇಳಿದರು.

**ಚಂದಪ್ಪ:—** ಬಾ ಯಪ್ಪಾ ತಂದೆ ನಡೆ ನನಗೂ ಮಕ್ಕಳಮರಿ ಕಾಲಾಗ ಸಂಸಾರ ಬ್ಯಾಸರಿಕಾಗೆದ. ದೇವರನ್ನಾದರೂ ತೋರಿಸೋರು ಯಾರು ?

**ದಾಸರು:—** ಎದ್ದು, ನಡೆ ಚಂದಪ್ಪ ಎಂದು ಮಡುವಿನಹತ್ತಿರ ಬಂದು ಇಕೋ ನೋಡು ಚಂದಪ್ಪ ಈ ಮಡುವಿನ ನಡುವೆ, ಸ್ವಲ್ಪ ಸಮೀಪದಲ್ಲೇ ನಮ್ಮ ದೇವರಿದ್ದಾನೆ ನೀನು ಮುಳುಗಿ ತೆಗೆಯಪ್ಪಾ.

**ಚಂದಪ್ಪ:—** ಸಾಮಿ ಮುಳಗಾಕ ನೀರು ಏಟಅವ ಬಿಡವಪ್ಪಾ ಟೊಂಕಮಟ ನೀರಿಲ್ಲ. ಬಿಡಪ್ಪ ಬಿಡು ಎಂದು ತಲೆಮೇಲಿನ ಸುತ್ತಿದ ವಸ್ತ್ರವನ್ನು ತೆಗೆದು ಉಟ್ಟ ಚಲ್ಲಾಣ ಬಿಟ್ಟು ಕಂಬಳಿ ದಡಕ್ಕೆ ಇಟ್ಟನು.

**ದಾಸರು:—** ಇಕೋ ಚಂದಪ್ಪ ನೀನು ಹುಡಿಕಿ ಶ್ರಮಪಡಬೇಡ ನೋಡು ಇದೇ ಜಾಗಾದಾಗ ದೇವರಿದ್ದಾನೆ ಮುಣಗಿ ತೆಗೆಯೆಂದು ಆ ಸ್ಥಳಕ್ಕೆ ಒಂದು ಹರಳು ಒಗೆದು ತೋರಿಸಿದರು.

**ಚಂದಪ್ಪ:—** ಅಯ್ಯೋ ಯಪ್ಪಾ ಎಟೋಸಾರೆ ಆ ಜಾಗಾದಾಗ ನೋಡಿವಿಬಿಡಪ್ಪಾ ಅಲ್ಲೆ ದೇವರೆಲ್ಲಿ ?

**ದಾಸರು:—** ಈಗ ನೋಡು ನೋಡು ಚಂದಪ್ಪ ಒಂದು ಕರೆ ಕಲ್ಲು ಅದೆ ಅದನ್ನು ತೆಗೆಯಪ್ಪಾ–

**ಚಂದಪ್ಪ:—** ಸಾಮಿ ದಾಸರೆ ನಾನು ನೀರಾಗವೋಗಿ ವುಡಿಕಿ ತೆಗಿತ್ತೀನಿ ನನ್ನ ಕುರಿಗಳು ಅತ್ತಾಗಿತ್ತಾಗ ವೋದಾವು ಬಡಿಗಿ ತೆಕ್ಕೊಂಡು ಕರಿರಿ.

**ದಾಸರು:—** ದಾಸರು ಹಾಗೆ ಆಗಲೆಪ್ಪಾ ಎಂದು ಕುರಿಗಳನ್ನೆಲ್ಲ ಟರಟರ, ಬ್ಯಾಬ್ಯಾ ಎಂದು ಅವನ ಮಾತಿನಿಂದಲೇ ಕರಿಯಹತ್ತಿದರು. ಮೇಲಿನ ಕುರಿಯಲ್ಲ ನೀರೊಳಗಿದ್ದ, ಕುರಿ=ತನ್ನ ಗುರುತಾದ ಹರಿಯನ್ನು ಕುರಿ=ಉದ್ದೇಶಿಸಿ ಬಾ, ಬಾ, ಎಂದು ಕರೆಯಹತ್ತಿದರು. ಚಂದಪ್ಪ ನೀರೊಳಗೆ ಇಳಿದಾನೆ ದಾಸರು ತೋರಿಸಿದ ಸ್ಥಳಕ್ಕೆ ಹೋಗಿ ಹುಡಿಕಾಡುವದರಲ್ಲಿ ಒಂದು ಬಂಡೆಕಲ್ಲು ಕಾಲಿಗೆ ಹತ್ತಿತು.

**ಚಂದಪ್ಪ:—** ಯಪ್ಪಾ ದಾಸರೇ ಇಲ್ಲಿ ಒಂದು ಬಂಡೆಕಲ್ಲು ಅದೆ. ಎಷ್ಟೋಸಾರೆ ಕಾಲಿಗೆ ಹತ್ತಿದೆ. ನೋಡಿವಿ ದೇವರೆಲ್ಲಿ ಸಾಮಿ ?

**ದಾಸರು:—** ಅಲ್ಲೋ ಚಂದಪ್ಪಾ ನೀನು ನಿರೊಳಗಿರುವ ಬಂಡೆ ಮಾತ್ರ ನೋಡಿದ್ದಿ ಸ್ವಲ್ಪ ಕಸವುಹಾಕಿ ಆ ಬಂಡೆಮೇಲಕ್ಕೆ ತೆಗೆ ಅದರಲ್ಲೇ ದೇವರು ಇರುವನು.

**ಚಂದಪ್ಪ:—** ಹಾಗೆ ಆಗಲೆಪ್ಪಯೆಂದು ನೀರೊಳಗೆ ಮುಳುಗಿದ ಕಸುವಿನಿಂದ ಆ ಬಂಡೆಯನ್ನು ಮೇಲಕ್ಕೆ ತೆಗೆದ. ನೋಡೆಪ್ಪಾ ನೋಡಿ ಕರೆಬಂಡಿ ದೇವರೆಲ್ಲಪ್ಪಾ ?

**ದಾಸರು:—** ಚಂದಪ್ಪ ಅವಸರ ಪಡಬೇಡ. ಆ ಬಂಡೆಯನ್ನು ದಂಡೆಗೆ ತಾ ತಿರುಹಿನೋಡು ದೇವರು ಇದ್ದಾನೆ.

**ಚಂದಪ್ಪ:—** ಮುದುಕನಾದರೂ ನೀರೊಳಗಿಂದ ಬಂಡೆಯನ್ನು ಸಾಗಿಸಿ ದಂಡೆಗೆ ತಂದು ಆತುರದಿಂದ ಬಂಡೆಯನ್ನು ತಿರುಗಿ ನೋಡು ತ್ತಾನೆ. ದಿವ್ಯವಾದ ವೇಣುಗೋಪಾಲಕೃಷ್ಣದೇವರ ವಿಗ್ರಹ ನೋಡಿ ದೊಡನೆ ಬೆರಗಾಗಿನಿಂತನು.

**ದಾಸರು:—** ನೀನು ಧನ್ಯನಪ್ಪಾ ನಮ್ಮ ದೇವರನ್ನು ನಿನ್ನ ಹೊಲದ ಮಡುವಿನೊಳಗೆ ಕಾದಿಟ್ಟು ಇಂದು ಎಮಗೆ ಕೊಟ್ಟೆಯೆಂದು ನುಡಿದರು. ಚಂದಪ್ಪನು ಮತ್ತು ಆಶ್ಚರ್ಯಪಟ್ಟು ದಾಸರು ದೊಡ್ಡವ ರಿದ್ದಾರೆಂದು ತಿಳಿದನು. ದಾಸರಲ್ಲಿ ಪರಮ ವಿಶ್ವಾಸ ಪುಟ್ಟಿತು ಆಗ್ಗ.

**ಚಂದಪ್ಪ:—** ದಾಸಪ್ಪಾ ನೀನು ಬಹಳ ದೊಡ್ಡಾತ ನಮ್ಮ ದೇವರನ್ನು ತೋರಿಸಿದಿ. ದೇವರನ್ನು ಈ ಗಿಡದ ಬುಡದಾಗ ಇಡು ನೀನು ಇಲ್ಲೇ ಇರು ನಾನು ನಿತ್ಯ ಹಾಲುತಂದು ಕೊಡುತ್ತೇನೆಂದು ಅಂದನು.

ದಾಸರು ಹಾಗೆ ಆಗಲೆಪ್ಪ ಎಂದು ಮಣ್ಣು ಕೆಸರು ಹತ್ತಿದ ವಿಗ್ರಹ ವನ್ನು ಚನ್ನಾಗಿ ಪರಿಶೋಧಿಸಿದರು. ಚಂದಪ್ಪನು ಕುರಿಗಳನ್ನು ಮನೆಗೆ ಹೊಡೆದುಕೊಂಡು ಹೋಗಿ ಹಟ್ಟಿಯೊಳಗೆ ಬಿಟ್ಟನು. ಮನೆಯಲ್ಲಿ ಮಕ್ಕ ಳಿಗೂ ಹೆಂಡತಿಗೂ ಈ ಸುದ್ದಿ ಹೇಳಿದನು ಎಲ್ಲರೂ ಆನಂದ ಭರಿತರಾದರು. ಆಗ್ಗ ಚಂದಪ್ಪ ಹಾಲು, ಮೊಸರು, ತುಪ್ಪ, ಬೆಲ್ಲ, ಇದ್ದದೆ ಹಿಟ್ಟು ನವ ಣಕ್ಕಿ ತಂದು ದಾಸರಿಗೆ ಅರ್ಪಿಸಿದನು.

ದಾಸರು ಬಹು ಆನಂದದಿಂದ ಸ್ವೀಕರಿಸಿ, ದೇವರಿಗೆ ಕ್ಷೀರಾಭಿ ಷೇಕಮಾಡಿ ನೈವೇದ್ಯ ಮಾಡಿದರು. ಅಲ್ಲೆ ಒಂದು ಸಣ್ಣ ಗುಡಿಸಲು

ಚಂದಪ್ಪ ಮಾಡಿಕೊಟ್ಟನು. ಮೋಹನದಾಸರು ಹಯವದನ ವಿಠಲರು ತಮ್ಮಂದಿರು ಸಂಗಡಲಿದ್ದರು. ನಂತರ ೨-೩ ದಿನಗಳಲ್ಲೇ ಶ್ರೀ ವೇಣು ಗೋಪಾಲಕೃಷ್ಣದೇವರಸುಂದರ ವಿಗ್ರಹವನ್ನು ವೃಕ್ಷದಡಿ ಸಣ್ಣ ಕಟ್ಟೆ ಕಟ್ಟಿ ಪ್ರತಿಷ್ಠಾಪನೆ ಮಾಡಿದರು. ನಿತ್ಯ ಪೂಜಾದಿಗಳು ಜರಗಹತ್ತಿದವು ಬೇಕಾದಷ್ಟು ವೈಭವ ನಡೆಯಿತು.

ಚಂದಪ್ಪನು ದಾಸರಿಗೆ ಕೇವಲ ಪ್ರೀತಿಪಾತ್ರನಾಗಿ ಸರ್ವವೂ ದಾಸರದೆಂದು ಭಾವಿಸಿದನು. ಆತನಿಗೆ ನಾಮ ಮಂತ್ರೋಪದೇಶ ಮಾಡಿದರು. ಅವನ ಸಾಧನಕ್ಕೆ ಮಾರ್ಗವಾದಿತು. ಒಂದಾನೊಂದು ದಿನ ಚಂದಪ್ಪನು ನಾನು ಮುಪ್ಪಿನವನಾಗಿರುವೆ. ಎಲ್ಲೈ ಮಕ್ಕಳಿರ್‍ಯಾ ಮುಂದೆ ಯಾರು ಗುದ್ಯಾಡಬೇಡಿರಿ ಮನಸ್ಯಾಗ ೫ ಕೂರಿಗಿ ಭೂಮಿ ೨೦ ಎಕರೆ ಒಟ್ಟಿಗೆ ೨೦ ಕೂರಿಗಿ ನೀವು ತೆಗೆದುಕೊಳ್ಳಿರೆಂದು ಪಾಲುಮಾಡಿ ಹಂಚಿ ಕೊಟ್ಟನು. ಮತ್ತು ಮನೆಯಲ್ಲಿದ್ದ ೫ ಕೊಡ ದ್ರವ್ಯದಲ್ಲಿ ೪ ಕೊಡ ದ್ರವ್ಯ ಒಬ್ಬೊಬ್ಬರಿಗೆ ಒಂದು ಕೊಡ ದ್ರವ್ಯಕೊಟ್ಟನು.

ಉಳಿದ ೧ ಕೊಡ ದ್ರವ್ಯ ೨೦ ಎಕರೆ ಭೂಮಿ ಗುರುಗಳಾದ ದಾಸರಲ್ಲಿ ಅರ್ಪಿಸಿ ನನ್ನ ಉದ್ಧಾರಮಾಡಬೇಕೆಂದು ಕೇಳಿದನು. ಯಾವ ಕುಲವಾದರೇನು, ಜಾತಿಯಾದರೇನು ? ಭಕ್ತಿಯು ಮುಖ್ಯ ಗುರುವಿನೊಲಿಮೆ ಮುಖ್ಯ ಕಾರಣ. ಚಂದಪ್ಪನು ಸಹ ಎಂಥ ಭಾಗ್ಯವಂತ ಎಲ್ಲವೂ ದಾಸರ ಚರಣಕ್ಕೆ ಅರ್ಪಿಸಿ ದಾಸರ ಸೇವೆಗೆನಿಂತ ಸಂಸಾರದದಿಂದ ಬಿಡುಗಡೆ ಹೊಂದಿದ.

೨೦ ಎಕರೆ ಭೂಮಿ ಮಕ್ಕಳಿಂದ ಸಾಗುವಮಾಡಿಸಿ ಬಂದುದೆಲ್ಲ ದಾಸರಿಗೆ ಅರ್ಪಿಸುವನು, ದಾಸರು ಸದ್ವಿನಿಯೋಗ ಮಾಡುವರು. ಚಂದಪ್ಪನು ೧ ಕೊಡತುಂಬಾ ದ್ರವ್ಯ ಕೊಟ್ಟದ್ದು ಒಳ್ಳೇದಾಯಿತು. ಎಂದು ಚಂದಪ್ಪನಿಗೆ ಹೇಳಿ ಒಳ್ಳೇ ಒಡ್ಡರನ್ನು ಕರೆಸಿ ದೊಡ್ಡ ದೊಡ್ಡ ಕಲ್ಲುಗಳಿಂದ ಆ ಮಡುವನ್ನೇ ಸುತ್ತಲೂ ಚನ್ನಾಗಿ ಕಟ್ಟಿಸಿ ಇಳಿಯೋಭಾವಿಯನ್ನು ನಿರ್ಮಿಸಿದರು. ಸುಮುಹೂರ್ತದಲ್ಲಿ, ಕೂಪಶಾಂತಿ ಮಾಡಿಸಿ ಗಂಗಾದೇವಿಯನ್ನು ಆವ್ಹಾನಿಸಿದರು. ಪೂಜಾ ಅರ್ಚನಾದಿಗಳನ್ನು ಮಾಡಿ ಬ್ರಾಹ್ಮಣರಿಗೆ ಭೋಜನಾದಿಗಳನ್ನು ಮಾಡಿಸಿದರು. ಇಂದಿಗೂ ಆ ಪುಷ್ಕರಣಿಯಲ್ಲಿ

ಜಿತಪಾಣಿಯಾಗಿದೆ ಎಂದೂ ನೀರು ಬತ್ತಿಲ್ಲ. ಅಂದಿನಿಂದ **ವಿಜಯ ತೀರ್ಥವೆಂದು** ಪ್ರಸಿದ್ಧಿಯಾಯಿತು. ಚಂದಪ್ಪನು ನೀಸ್ಸೀಮ ಭಕ್ತಿಯಿಂದ ದಾಸರನ್ನು ಸೇವಿಸಹತ್ತಿದನು. ಕೆಲವು ಕಾಲಾನಂತರ ಚಂದಪ್ಪನು ಕಾಲವಶನಾದನು. ದಾಸರು ಆತನಿಗೆ ಸದ್ಗತಿಯನ್ನಿತ್ತರು. ಶಿಷ್ಯರಿಗೆಲ್ಲ ಇವನು ಉತ್ತಮಜೀವಿಯೆಂದು ತೋರಿದರು. ಹರಿದಾಸರೊಲಿದರೆ ಯಾವುದು ಅಸಾಧ್ಯ. ಈಗಲು 20 ಎಕರೆ ಭೂಮಿ ಮೋಹನದಾಸರ ಸಂತತಿಯಲ್ಲಿ ನಡೆದು ಬಂದದೆ.

ಹೀಗೆ ಗೋಪಾಲಕೃಷ್ಣನನ್ನು ಪೂಜಿಸುತ್ತ ದಾಸರು ಯುವ ಸಂವತ್ಸರ ಆಶ್ವಿಜಮಾಸ ಬ್ರಹ್ಮೋತ್ಸವಕ್ಕೆ ತಮ್ಮ ಶಿಷ್ಯರ ಸಹ, ತಿರುಪತಿಗೆ ಹೊರಟರು. ಶ್ರೀ ವೆಂಕಟನ ಸಂದರ್ಶನ, ರಥೋತ್ಸವ ನೋಡುವದು ನಮಗೆ ಕೊನೆಯದೆಂದು ಕೆಲವು ಶಿಷ್ಯರಿಗೆ ಮಾತ್ರ ಗೌಪ್ಯದಲ್ಲಿ ತಿಳುಹಿ ಅನೇಕ ರೀತಿ ದೇವರ ಸ್ತೋತ್ರಮಾಡಿದರು. ( ಶ್ರೀ ಗೋಪಾಲ ಕೃಷ್ಣ ದೇವರು ದೊರೆತಾಗ್ಗೆ, ಮಾಡಿದ ಪದವು. ಶ್ರೀ ವೆಂಕಟನ ಕೊನೆಯ ಸಂದರ್ಶನಾನಂದದಲ್ಲಿ ಮಾಡಿದ ಪದಗಳು ಹಿರಿಯರಿಂದ ಕೇಳಿದುದು. ಚಂದಪ್ಪನಿಂದ ದೇವರನ್ನು ಹುಡುಕಿ ತೆಗೆಸಿದಂತೆ ದಾಸರು ಅನುಗ್ರಹಿಸಿ ಸಂಶೋಧಿಸಿ ಪುಡುಕಿಸಿ ತಿಳಿಸಬೇಕಾಗಿದೆ ).

## ತಿರುಪತಿಯಿಂದ ಪುನರಾಗಮನ

ದಾಸರು ಶ್ರೀನಿವಾಸನ ಸಂದರ್ಶನ ಮಾಡಿಕೊಂಡು, ಶ್ರೀ ವೆಂಕಟನನ್ನು ತುತಿಸಿ ನತಿಸಿ, ಬಿಂಬನಲ್ಲೆ ಆವ್ಹಾನಿಸಿ " ಶಾನ್ನಃ ಪುನರ್ದರ್ಶನಂ " ಎಂದು ಹೇಳದೆ, ಆನಂದ ಬಾಷ್ಪಗಳನ್ನು ಸುರಿಸುತ್ತ ಅಪ್ಪಾಗಿರಿಯ ತಿಮ್ಮಪ್ಪ ತಪ್ಪದೇ ಸಂದರ್ಶನ ವಿತ್ತ ಜಗದಪ್ಪನಾದ ನಿನಗೆ ಈ ಹೊಪ್ಪ ದೇಹವೇ ನಿನಗೆ ಕಪ್ಪಗಾಣಿಕೆಯೆಂದು ದಿಂಡುರುಳಿ ಅರ್ಪಿಸಿದರು. ಅಹೋ ದಾಸರಲ್ಲಿರುವ ಆತ್ಮ ಸಮರ್ಪಣೆ ಎಂಥದು.

ಮುಂದೆ ಗೋವಿಂದನನ್ನು ಭಜಿಸುತ್ತ ಸಾಗಿ ಚಿಪ್ಪಗಿರಿಗೆ ಬಂದರು. ದಾಸರು ಆಗಮಿಸಿದ ವಾರ್ತೆ ಕೇಳಿ ಅಲ್ಲಿ ಬ್ರಾಹ್ಮಣರು ರೆಡ್ಡಿ ಜನರು ದಾಸರನ್ನು ಎದಿರುಗೊಂಡು ಕರೆತಂದರು. ಯೋಗ್ಯರಾದ ಎಲ್ಲರಿಗೆ

ಸದ್ಬೋಧಮಾಡುತ್ತ ಕೆಲ ಶಿಷ್ಯರಿಗೆ ತತ್ವರಹಸ್ಯವನ್ನು ವಿಶದವಾಗಿ ಉಪ ದೇಶಿಸಿದರು. ಹೀಗೆ ಒಂದು ತಿಂಗಳು ಕಾಲದಲ್ಲಿಯೇ ತಮ್ಮ ಅವತಾರ ಕಾಲ ಸಮೀಪಿಸಿದೆಂದು ಹೇಳಿ ಅದೇ ಹೊಲದಲ್ಲಿಯೇ ಭೂಮಿಯನ್ನು ಶುದ್ಧವಾಗಿ ಪರಿಶೋಧಿಸಿ ಒಂದು ಕಟ್ಟೆಯನ್ನು ಕಟ್ಟಿಸಿದರು. ಸುಗಂಧ ಚಂದನಾದಿ ದ್ರವ್ಯಗಳನ್ನು ತರಿಸಿಟ್ಟರು.

## ದಾಸರ ವೈಕುಂಠಯಾತ್ರಾ

ಶಾ.' ಶಕೆ ೧೬೭೭ ಯುವ ಸಂವತ್ಸರ ಕಾರ್ತಿಕ ಶು|| ೧೦ ಬಂದೊದ ಗಿತು. ಕೆಲ ಶಿಷ್ಯರು ಮೋಹನದಾಸರು, ಹಯವದನ ವಿಠಲರು, ವ್ಯಾಸ ವಿಠಲರು ಇನ್ನು ಕೆಲವರಿದ್ದಾರೆ. ಅಂದು ಮುಂಜಾನೆ ಸ್ನಾನಾನ್ಹಿಕ ಗಳನ್ನು ಮಾಡಿದ್ದಾರೆ. ಶ್ರೀ ಗೋಪಾಲ ಕೃಷ್ಣನನ್ನು ಅರ್ಚಿಸಿದ್ದಾರೆ. ಎಲ್ಲ ಶಿಷ್ಯರಿಗೆ ತೀರ್ಥ ಕೊಟ್ಟಿದ್ದಾರೆ. ತಾವು ಆ ಕಟ್ಟೆಯ ಸಮೀಪದಲ್ಲೇ ದರ್ಭಾಸನದಲ್ಲಿ ಕುಳಿತು ಎಲ್ಲ ಸಜ್ಜನವೃಂದಕ್ಕೂ ಕೈ ಮುಗಿದು ನಮ್ಮ ಅವತಾರಕಾಲ ಮುಗಿಯಿತು. ಇನ್ನು ನಾವು ಮಹಾ ಯಾತ್ರಾಕ್ಕೆ ಪೊರಡುವೆವೆಂದು ಪೇಳಿ ಸಜ್ಜನರಿಗೆಲ್ಲ ಲೋಕರೀತ್ಯಾ ಮಾನವಜನ್ಮವಿದು ಅಪರಾಧವಾಗಿದ್ದರೆ ಕ್ಷಮಿಸಬೇಕೆಂದು ಕೇಳಿಕೊಂಡರು. ಶಿಷ್ಯರಿಗೆಲ್ಲ ಶ್ರೀ ಹರಿಯು ನಿಮ್ಮನ್ನು ರಕ್ಷಿಸುವನು. ಚಿಂತೆಬೇಡವೆಂದು ಹೇಳಿ ಎಲ್ಲರಿಂದಲೂ ನಮಸ್ಕಾರ ಮಾಡಿಸಿಕೊಂಡು ಆಶೀರ್ವಾದ ಮಾಡಿದರು. ನಾವು ನಮ್ಮ ಸ್ಥಳಕ್ಕೆ ಪೋಗುವೆವು. ಚಿಂತೆ ಮಾಡಬೇಡಿರಿ ರಕ್ಷಕ ಹರಿಯೇ ಎಂದು ಪುನಃ ಪುನಃ ಹೇಳುತ್ತ ಕುಳಿತಲ್ಲಿಯೇ ಮೌನವೃತ್ತಿಯಿಂದ ಧ್ಯಾನಂಗತ ರಾಗಿ, ಲಯಚಿಂತನೆ ಪ್ರಾರಂಭಿಸಿದರು. ಕೆಲಹೊತ್ತು ಲಯಚಿಂತನೆ ಗೈಯುತ್ತ ತಮ್ಮ ಶ್ವಾಸವನ್ನು ಊರ್ಧ್ವ ಮುಖವನ್ನಾಗಿ ಮಾಡಿ ಶ್ರೀಹರಿ ಪಾದಾರವಿಂದದಲ್ಲಿ ರತಿಯಿಟ್ಟು ಪ್ರಾಜ್ಞನ ಧ್ಯಾನಗೈಯುತ್ತ **ಪಿಂಗಳಾ ನಾಡಿಯಿಂದ ವಿಠಲನ ಬಳಿಗೆ ನಡೆದರು.** ದಾಸರು ಕುಳಿತಿದ್ದಲ್ಲೇ ಶಿರಸ್ಸು ಮಾತ್ರ ಸ್ವಲ್ಪ ವಾರಿಯಾಗಿ ಕೆಳಗಾದಿತು. ನಭದಲ್ಲಿ ವಾದ್ಯಗಳ ಸಪ್ಪಳ ಕೆಲವರಿಗೆ ಕೇಳಿಸಿತು. ದೇವತೆಗಳೆಲ್ಲ ನಭದಲ್ಲಿ ದಾಸರನ್ನೆ ದಿರ್ಗೊಂಡು ಪೂಜಿಸುತ್ತ ವಿಮಾನದಲ್ಲಿ ಉತ್ತಮವಾದ ಲೋಕಕ್ಕೆ ಆನಂದದಿಂದ ಕರೆದುಕೊಂಡು ತೆರಳಿದರು. ಜಗದ್ವಂದ್ಯನ ಗುಣ ಗಾನ ಗೈದ ದಾಸರೆಂದು ಪೊಗಳಿದರು.

ಇತ್ತ ಮೋಹನದಾಸರು ಹಯವದನವಿಠಲರೇ ಮೊದಲಾದ ಶಿಷ್ಯರು ಸುಗಂಧ ದ್ರವ್ಯಗಳನ್ನು ಸಂಗ್ರಹಿಸಿಟ್ಟದರಲ್ಲಿಯೇ ದಾಸರ ಪವಿತ್ರ ವಾದ ಮನುಜದೇಹವನ್ನು ಆ ಕಟ್ಟೆಯಮೇಲೆಯೆ ಅಗ್ನ್ಯಂತರ್ಗತ ಶ್ರೀ ಪರಶುರಾಮುಗೆ ಅರ್ಪಿಸಿದರು. ಹಯವದನ ವಿಠ್ಠಲರು ಪದ ೧೪ ಆಗ್ಗೆ ರಚಿಸಿದ್ದಾರೆ. ಅಗ್ನ್ಯಂತರ್ಗತ ಪರಶುರಾಮು ಪಗ್ರಾಜ್ಞ= ಪ್ರಾಜ್ಞ ನಿನ್ನೊಳು ಸೇರಿದನು ಹರಿಯೆ" ಎಂದು ವಿಶಿಷ್ಟವಾಗಿ ವಿಜಯದಾಸರ ಪವಿತ್ರವಾದ ಶರೀರವನ್ನು ಮೊಗಳಿದ್ದಾರೆ.

ಮತ್ತು ಪದ ೧೩ "ತೆರಳಿ ಪೋದರು ಸಿರಿಹರಿಯಪುರಕೆ" ಎಂಬುವ ಪದದಲ್ಲಿ ಶ್ರೀ ವಿಜಯರಾಯರ ಕರಿರಾಜವರದನ್ನ ಸ್ಮರಣೆವಾಡುತ್ತ ಹರಿ ಪುರವಾದ ವೈಕುಂಠ ಲೋಕಕ್ಕೆ ತೆರಳಿದರು. **"ಯುವ ಸಂವತ್ಸರ ಕಾರ್ತಿಕ ಶುದ್ಧ।** ಅವಿರುದ್ಧವಾದ ಶುದ್ಧ ದಶಿಮಿ। ನವನಾಡಿ ಗುರು ವಾರ ದಿವಿಜರ ಮೇಳದಲಿ। ಖವಖವನಗುತ ಭಳಿರೆ ನಗಿಮುಖದಿಂದ ಹರಿಚರಿತೆ ಪಾಡುತಲಿ ॥ ೧ ॥ ಪಿಂಗಳಾನಾಡಿಯಿಂದ ಹಿಂಗದಲೆ ನಡೆ ತಂದು। ರಂಗಪ್ರಾಜ್ಞವಾಯು ಪದವಪೊಂದಿ। ಸಂಗೀತ ಪಾಡುತ್ತ ಸಾಂಗೋಪಾಂಗದಿಂದ। ಮಂಗಳ ಘೋಷದಿಂದಿಂಗಿತಜ್ಞರು ನೋಡೆ ॥ ೨ ॥ ಅಪ್ಪ ತಿಮ್ಮಪ್ಪನಾ ಯಾತ್ರೆ ಮಾಡಿಕೊಂಡು ಚಿಪ್ಪಗಿರಿಯೆಂಬ ಗ್ರಾಮದಲ್ಲೆ। ಚಪ್ಪಾಳಿನಿಕ್ಕುತಲಿ ತಮ್ಮ ದಾಸರು ನೋಡೆ। ಸರ್ಪಶಯನ ಹಯವದನ ವಿಠಲನಬಳಿಗೆ ॥ ೩ ॥ ಎಂದು ದಾಸರು ಯಾವ ರೋಗೋ ಪದ್ರವೂ ಇಲ್ಲದೆ ಪ್ರಾಜ್ಞವಾಯು ಪದವನ್ನು ಪೊಂದಿ ದಿವಿಜರ ಗುಂಪಿ ನೊಡನೆ ಸಂಗೀತ ವ್ಯಾಳದೊಡನೆ ಹರಿಯಪಾಡುತ್ತ ಹರಿಯ ಪುರಕೆ ತೆರಳಿದರೆಂದು ಸ್ತೋತ್ರಗೈದಿರುವರು. (ಹಿಂದಿನಿಂದ ಶುದ್ಧ ಪ್ರತಿ ದೊರಕಿದೆ.)

ಶ್ರೀ ಮೋಹನದಾಸರು ಸಹ ಪದ ( ಪದ ೩೨ ) ತೆರಳಿ ಪೋದರು ಹರಿಪುರಕೆ ಗುರು ವಿಜಯದಾಸರು ಎಂದು ಪದ ಮಾಡಿದ್ದಾರೆ ಇದು ಅರ್ಥ ಸಿಕ್ಕದೆ.

ನಂತರ ಶ್ರೀ ಜಗನ್ನಾಥದಾಸರು ಸಹ ಪದ ೩೮ "ತೆರಳಿದರು ವಿಜಯರಾಯರು ವಿಠಲನಾ ಪರಮಭಕ್ತರ ಕಾಣಬೇಕೆನುತ" ಎಂದು

ಭಾಸ್ಕರಕ್ಷೇತ್ರಮಹಿಮೆ ಪುಣ್ಯಸ್ಥಳದಿ ಶ್ರೀ ದಾಸರು ವೈಕುಂಠಯಾತ್ರೆಗೆ ವಿಜಂಯಗೈಸಿದ್ದು ಹೊಗಳಿದ್ದಾರೆ.

ಹೀಗೆ ೭೩ ವರ್ಷ ಭೂಮಿಮೇಲಿದ್ದು ಸಜ್ಜನರನ್ನು ಉದ್ಧರಿಸಿದ ಅವತಾರಿಕ ಪುರುಷರ ಯಾತ್ರೆ ನಂತರ ಹಯವದನವಿಠ್ಠಲರು ಅಣ್ಣಂದಿರಾದ ಶ್ರೀ ವಿಜಯದಾಸರ ವಿಯೋಗ ಸಹಿಸಲಾರದೇ ಪದ ೧೦–೧೧–೧೨ ಮೂರು ಪದಗಳಿಂದ ದಾಸರ ಮಹಿಮೆ ಅನೇಕ ಬಗೆ ಕೊಂಡಾಡುತ್ತ ಶ್ರೀ ಹರಿಗೆ ಅರ್ಪಿಸಿದ್ದಾರೆ.

ಮತ್ತು ಗೋಪಾಲದಾಸರು ಪದ ೨೧ ರಲ್ಲಿ ಹರುಷದಲಿ ನೀ ನಮ್ಮ ಗುರು ವಿಜಯದಾಸರನು, ಕರುಣಿಸಿ ತಂದು ತೋರೋ ಬಾರೋ ಎಂದು ೭ ನುಡಿಯಲ್ಲಿ ದಾಸಾರ್ಯರ ಎಲ್ಲ ಮಹಿಮೆ ಕೊಂಡಾಡಿರುವರು. ಇನ್ನು ಅನೇಕ ಜನ ಶಿಷ್ಯಪ್ರಶಿಷ್ಯರು ಕೆಲಕೆಲವು ಪದಗಳನ್ನು ರಚಿಸಿರುತ್ತಾರೆ ನೋಡುವದು.

ಇಂತು ಒಂದಂಶದಿಂದ ಭೃಗುಋಷಿಗಳ ಅವತಾರಕಾಲವು ಮುಗಿಯಿತು. ತಮ್ಮ ಸಾಕ ಮಕ್ಕಳಾದ ಶ್ರೀ ಮೋಹನದಾಸರನ್ನೂ ಶ್ರೀ ಗೋಪಾಲದಾಸರು, ಶ್ರೀ ವೇಣು ಗೋಪಾಲದಾಸರನ್ನೂ ಇನ್ನು ಕೆಲ ದಾಸರನ್ನೂ ಜ್ಞಾನಸಂತಂತಿಯಾಗಿ ನಿಲಿಸಿ ಮುಂದಿನ ಪೀಳಿಗೆಯ ಸಜ್ಜನರನ್ನು ಉದ್ಧಾರಗೈಸಿದ ಎಲ್ಲ ದಾಸರಿಗೆ ಮೂಲ ಪುರುಷರಿವರು. ಪುರಂದರ ದಾಸರಿಂದ ಶ್ರೀ ವಿಜಯದಾಸರು ಶ್ರೀ ವಿಜಯದಾಸರಿಂದಲೇ ಸಕಲ ಶಿಷ್ಯ ಪ್ರಶಿಷ್ಯರ ಸಂತಾನ ಬೆಳಿಯಿತು.

## ಶ್ರೀ ವಿಜಯದಾಸರಿಗೆ ಮುಂದೆ ಬರುವ ಜನುಮ

ಶ್ರೀ ವಿಜಯದಾಸರೆ ತಾವು ಹೇಳಿದಂತೆ ಸುಳಾದಿ (೪) ಪುಟ (೬) ಆದಿತಾಳದಲ್ಲಿ "**ಎಪ್ಪತ್ತಮೂರು ವರುಷ ಹೊಪ್ಪಾದೇಹದಲಿದ್ದೆ |** ಇಪ್ಪಕಾಯದಲಿ ಅದರಪ್ಪಂತೆ ಬಾಳಿ ತಿರುಗಿ | ಇಪ್ಪತ್ತು ಒಂದು ದಿನ **ತಪ್ಪ**ತಲೆ **ಸುಲಭ**ನರಕ | ಒಪ್ಪದಲೆ ನೋಡಿ ತಿರುಗಿ **ಬಪ್ಪೆನಯ್ಯಾಧರಿಗೆ |** ಅಪ್ಪಾನಪ್ಪ ಮಹಿಭರ್ತ ವಿಜಯ ವಿಠಲ ಒಲಿ | ದಿಪ್ಪನು ಇಂದಿನಕಿಂತಧಿಕವಾಗಿ ಎನಗೆ ಬಿಡದೆ || ೬ || ಹೀಗೆ ಆದಿತಾಳದಲ್ಲಿ ತಮ್ಮ ಮುಂದಿನ ಜನುಮದ ವೃತ್ತಾಂತ ಪೇಳಿದ್ದಾರೆ. ಇದಾದರು–

" ಗುರುಕೃಪೆಯಿಂದಲಿ ಅರಿದೆ ಈ ತೆರದಿಂದ ಪರಮಾತ್ಮ ವಿಜಯವಿಠಲ ನಂಘ್ರಿಸೇರಿದೆನು " ಎಂದು ಜತೆಯಲ್ಲಿ ಹೇಳಿದ್ದಾರೆ.

ಮುಂದೆ ಬರುವ ಜನ್ಮವು ಬಹು ಮಹಿಮೋಪೇತವಾದುದು. ಇಂದಿನ ಜನುಮದಕಿಂತಲೂ, ಅಧಿಕವಾಗಿ ವಿಜಯವಿಠಲ ಒಲಿದಿಪ್ಪನು ಎಂದು ಕಂಠರವೀಣವಾಗಿ ಪೇಳಿರುವರು. ಇದು ಬಹು ಗೌಪ್ಯತರ ವಾದದು. ದಾಸರ ಪರಂಪರೆ ತತ್ವಜ್ಞಾನಿಗಳಿಂದ ಪರಂಪರಾಗತ ನಿಜ ವಾದ ಸಂಗತಿ, ಇಂದ್ರಾಂಶರೂ, ಅಪರೋಕ್ಷಿಜ್ಞಾನಿಗಳಾದ ( ಮೊದಲ ಕಲ್ಲು ಶೇಷದಾಸರು ) ಶ್ರೀ ಗುರು ವಿಜಯವಿಠಲರ ಪುತ್ರರಾದ ದೇವಾಂಶ ತಿಮ್ಮಣ್ಣನವರಲ್ಲಿ ಶ್ರೀ ವಿಜಯದಾಸರು ಪುನಃ ಅವತಾರಮಾಡಿ ಚಿಕ್ಕವ ರಿದ್ದಾಗಲೇ ಅನೇಕ ಮಹಿಮೇ ತೋರಿದ್ದಾರೆ. ಶ್ರೀ ಗುರು ವಿಜಯವಿಠ ಲರು ( ಮೊದಲಕಲ್ ಶೇಷದಾಸರು ) ಅವರಿಗೆ ವಿಜಯರಾಯರೆಂದೆ ಪೆಸರಿಟ್ಟು ಬಹು ಗೌರವಿಸುತ್ತಿದ್ದಂತೆ. ಮತ್ತು ಆ ಮೊಮ್ಮಕ್ಕಳ ರೂಪಿ ಯಾದವರು ಶ್ರೀ ವಿಜಯದಾಸರೇ ಎಂದು ಮೊಮ್ಮಕ್ಕಳ ಮಹಿಮಾ ಪ್ರತ್ಯಕ್ಷವಾಗಿ ಸಜ್ಜನ ಯೋಗ್ಯ ಭಕ್ತರಿಗೆ ಎಷ್ಟೋ ಸಲ ತೋರಿದ್ದು, ಅವ ರನ್ನು ಸೇವಿಸಿದ ಕೆಲಭಕ್ತರು ಇಂದಿಗೂ ಜೀವಂತ ಇದ್ದು ಅವರ ಮಹಿಮೆ ಯನ್ನು ಹೇಳುತ್ತಾರೆ. ಇವರೇ ಕೊನಿಯ ಅಪರೋಕ್ಷಿಜ್ಞಾನಿಗಳಾದ ದಾಸರೆನ್ನುವದಕ್ಕೆ ಸಂದೇಹವಿಲ್ಲ. ಜ್ಞಾನಿಗಳಾದ ಹಿರಿಯರ ಆಪ್ತವಾಕ್ಯ ಗಳೇ ಪ್ರಮಾಣನಂಬಿಕೆಗೆ ಯೋಗ್ಯ. ಮೊಮ್ಮಕ್ಕಳಾದ ವಿಜಯರಾಯರ ಅನೇಕ ಮಹಿಮಾ ಇವೆ. ನೋಡಿದ ಭಕ್ತರು ಸ್ವತಃ ಅವರ ಇಬ್ಬರು ಪತಿವೃತಾ ಧರ್ಮಪತ್ನಿಯರಿದ್ದಾರೆ. ಸಾಕಷ್ಟು ತಿಳಿಯಲು ಶಕ್ಯವಿದೆ. ಅವರಿಗೆ ೨೧ ದಿನ ಮಹಾಜ್ವರ, ಪ್ರಾರಬ್ಧವಶಾತ ಪ್ರಾಪ್ತವಾಗಿ ಲೋಕದ ಎಚ್ಚರಿಕೆ ಇಲ್ಲದೆ ಇದ್ದರಂತೆ. ಜ್ವರನಿಂತು ಎಚ್ಚರಿಕೆ ಪುಟ್ಟಿದನಂತರ ಪ್ರಾರಬ್ಧಕರ್ಮಶೇಷದಿಂದ ೨೧ ದಿನ ಸುಲಭನರಕ (ಭಗವಂತನ ವಿಸ್ಮೃತಿ ಯಾದದ್ದೇ ದೇವತೆಗಳಿಗೆ ನರಕಸಮಾನ) ಅನುಭೋಕ್ತವ್ಯ ತೀರಿತೆಂದು ಶ್ರೀ ಗುರು ವಿಜಯವಿಠಲರು ಹೇಳಿದ್ದು ನಿಜ. ಸತ್ಯ ಇದೆ ವಿಜಯದಾಸ ರಿಗೆ ಎರಡನೆ ಜನ್ಮ.

ಹೀಗಿರಲು ದಾಸವೇಷಮಾತ್ರ ಧರಿಸಿ ಕುಮಂತ್ರಗಳ ಜಪದಿಂದ ಜನರಿಗೆ ಮೋಸಮಾಡಿ ದೇವರನ್ನು ತೋರಿಪೆನೆಂಬ ನೆಪದಿಂದ, ಕಾಸು ವೀಸಗಳನ್ನು ಅಪಹರಿಸುತ್ತ, ಶ್ರೀವಿಜಯರಾಯರ ಕಟ್ಟೆ ಚಿಪ್ಪಗಿರಿಗೆಬಂದು ದಾಸರ ಕಟ್ಟೆ ಗುಡಿಯಲ್ಲಿ ಪ್ರವೇಶಿಸಿ ವೃಂದಾವನಕ್ಕೆ ಆತು ನಾವು ವಿಜಯ ರಾಯರೆಂದು ಹೇಳಿ ಮೋಸಗೊಳಿಸಿದ್ದನ್ನು ಮೋಹನದಾಸರ ವಂಶೀಕರು ಸಹಿಸದೆ, ಆಮೋಸದಾಸನಿಗೆ ಅರ್ಧಚಂದ್ರಾಯುಧ ಪ್ರಯೋಗಮಾಡಲು, ಮೋರೆದೋರದೆ ಪಲಾಯನಗೈದ. ಶ್ರೀ ವಿಜಯದಾಸರ ವಚನವನ್ನು ಹೀಗೆ ಅಪಲಾಪಮಾಡಿ ಮೋಸಗೊಳಿಸುವರೆ ಬಹಳ ಇಂಥ ವೇಷಧಾರಿ ಗಳನ್ನು ನಂಬಬೇಡಿರಿ. ಇಂಥ ನಿಂದ್ಯ ಕರ್ಮರತರಾತದವರ ತುಚ್ಛೀಕರಿಸು ವದೇ ಭಗವಂತನಿಗೆ ಪ್ರೀತಿ ಶ್ರುತಿಸಮ್ಮತ.

ಹೀಗೆ ಶ್ರೀ ವಿಜಯದಾಸಾರ್ಯರು ಹಿಂದೂ ಇಂದು ಮುಂದಿನ ಜನುಮಗಳಲ್ಲಿ ಶ್ರೀ ಹರಿಯನ್ನು ಒಲಿಸಿ ಕುಣಿಸಿ ದಣಿಸಿದ ಮಹಾತ್ಮರಿವರು.

## ಶ್ರೀ ವಿಜಯದಾರಸ ಕಟ್ಟೆ

ಚಿಪ್ಪಗಿರಿಯಲ್ಲಿ ಶ್ರೀ ವಿಜಯದಾಸರ ದೇಹ ಅಗ್ನ್ಯಂತರ್ಗತ ಪರಶು ರಾಮಗೆ ಅರ್ಪಿಸಿದ ಸ್ಥಳದಲ್ಲಿ ಶ್ರೀ ಗೋಪಾಲದಾಸರು ಮೋಹನ ದಾಸರು ಮುಂತಾದವರೇ ಒಂದು ಕಟ್ಟೆಕಟ್ಟಿಸಿ ಪೂಜಾ ಮಾಡಹತ್ತಿದ್ದರು. ಬಹು ವಿಜೃಂಭಣೆ ನಡೆಯಿತು. ಆರಾಧನಾ ಉತ್ಸವಾದಿಗಳು ಜರಗ ಹತ್ತಿದವು ಅನೇಕ ಭಕ್ತರು ಸೇವಾ ಮಾಡುವರು.

ಕೆಲ ವರ್ಷನಂತರ ಶ್ರೀ ಮೋಹನದಾಸರು ಚಿಪ್ಪಗಿರಿಯಲ್ಲೇ ಪರ ಲೋಕ ಯಾತ್ರಾಗೈದರು. ಆ ಜ್ಞಾನಿಗಳ ಪವಿತ್ರ ದೇಹವಾದರೂ ಅವರ ಆಜ್ಞೆಯಂತೆ ಶ್ರೀ ವಿಜಯರಾಯರ ಕಟ್ಟೆಯ ಸಮೀಪ ಪೂರ್ವಭಾಗದ ಸ್ಥಳದಲ್ಲಿ ಪರಶುರಾಮನಿಗೆ ಸಮರ್ಪಿಸಿದರು. ನಂತರ ಆ ಸ್ಥಳದಲ್ಲಿಯೇ ಶ್ರೀ ಮೋಹನದಾಸರ ಕಟ್ಟೆ ಕಟ್ಟಿಸಿದರು. ಪೂಜಾದಿಗಳೂ ಬಹು ಮಹಿಮೆ ಗಳೂ ನಡೆದವು. ಎರಡು ಕಟ್ಟೆಗಳು ಕೂಡಿಸಿ ಕಟ್ಟೆಯಮೇಲೆ ಗುಡಿ ಯಾಯಿತು. ಕೆಲವು ವರ್ಷನಂತರ ಅವತರಿಸಿದ ಶ್ರೀ ಮೊದಲಕಲ್ ಶೇಷದಾಸರು **"ಗುರು ವಿಜಯ ವಿಠಲರು"** ಶ್ರೀ ವಿಜಯದಾಸರ

ಕಟ್ಟೆಯಲ್ಲಿ ಬಂದು ಒಂದು ವರ್ಷವಿದ್ದು ಸೇವಾಮಾಡಿದರು. ಅಗ್ಗ ನಿತ್ಯ ಸ್ನಾನಾನ್ಹಿಕಗಳನ್ನು ಮಾಡಿ ಸೇವಾನಂತರ, ಮಡಿಲೇ ತಾವೊಬ್ಬರೆ ಸುಣ್ಣದ ಕಲ್ಲು ತಂದು ಸುಣ್ಣಸುಟ್ಟು ಸುಣ್ಣಮಾಡಿ ಉಸುಗುತಂದು ಮಡಿಯಲ್ಲೆ ಗಚ್ಚು ಅರೆದು ದಾಸರ ಕಟ್ಟೆಯಮೇಲೆ ದೊಡ್ಡ ವೃಂದಾವನ ತಾವೇ ಕಟ್ಟಿ ಅದರಲ್ಲಿ ಶ್ರೀ ಗೋಪಾಲಕೃಷ್ಣದೇವರನ್ನು ಪ್ರತಿಷ್ಠೆಮಾಡಿದರು. ಬಹು ವಿಜೃಂಭಣೆಯಿಂದ ಸಮಾರಾಧನಾ ಆರಾಧನಾ ಉತ್ಸವಗಳನ್ನು ಮಾಡಿ ಸಂಪ್ರಾಯದಂತೆ ಮುಂದೆ ದಾಸರ ಆರಾಧನಾ ಉತ್ಸವಗಳನ್ನು ಮಾಡಲು ಆಜ್ಞಾಪಿಸಿದರು. ಇಂದ್ರಾಂಶರಾದ ಶೇಷದಾಸರಿಗೆ ಸ್ವಪ್ನದಲ್ಲಿ "ಗುರು ವಿಜಯವಿಠ್ಠಲನೆಂಬೊ" ಅಂಕಿತ ಶ್ರೀ ವಿಜಯದಾಸರಿಂದೇ ಒದಗಿತೆಂದು ಜ್ಞಾನಿಗಳ ವಚನದಲ್ಲಿ ನಂಬಿಕೆ.

ಶ್ರೀ ವಿಜಯದಾಸರ ಕಟ್ಟೆ ಮಹಿಮಾಸಹಿತ ಅನಂತವಾಗಿವೆ. ಎಷ್ಟೋ ಭಕ್ತರಿಗೆ ಮಹಿಮೆ ತೋರಿದ್ದಾರೆ. ಈಗಲೂ ಹಿಂದಿನ ಸಂಪ್ರಾಯದಂತೆ ಕಾರ್ತೀಕ ಶು|| ೯, ೧೦, ೧೨ ಆರಾಧನಾ ಉತ್ಸವ ಸಾವಿರಾರು ಬ್ರಾಹ್ಮಣರ ಭೋಜನ, ರಾತ್ರಿ ಭಜನೆ ನಡಿಯುತ್ತದೆ. ಶ್ರೀ ವಿಜಯದಾಸರ ಅವಶಿಷ್ಟವೆಂದು ಸಪ್ತತಾರಾ ಆ ಚಿಕ್ಕ ತಂಬೂರಿಯನ್ನು ಪೂಜಿಸಿ, ಪಂಕ್ತಿಸೇವಾ ಕಾಲದಲ್ಲಿ ಎಲ್ಲ ಭಕ್ತರಿಗೆ ದರ್ಶನ ಮಾಡಿಸುತ್ತಾರೆ. ದಾಸರು ಪುಟ್ಟಿದ ಗ್ರಾಮವಾದ ಚೀಕನಬರಿವಿಯಲ್ಲಿಯೂ ದಾಸರ ಮನೆ ಇದೆ. ದಾಸರು ಕಾಶಿಯಿಂದ ತಂದ ಒಂದು **ಸಾಣೆಕಲ್ಲು** ಅದೆ. ದಾಸರು ನಿತ್ಯ ಶ್ರೀಗಂಧ ತೆಗೆದು ಶ್ರೀಹರಿಗೆ ಅರ್ಪಿಸುತ್ತಿದ್ದರಂತೆ. ಮತ್ತು ಚಿಪ್ಪಗಿರಿಯಲ್ಲಿ ಸಪ್ತತಾರಾ ಚಿಕ್ಕ **ತಂಬೂರಿ** ಇವೆರಡು ದಾಸರ ಅವಶಿಷ್ಟವಿವೆ. ಮತ್ತು ಒಂದು ಜತೆ ಚಿಕ್ಕತಾಳಗಳಿವೆ. ಈ ಮೂರು ಪದಾರ್ಥಗಳೇಕೆ ಅವಶಿಷ್ಟವಾಗಿಟ್ಟಿರುವರು. ಇದರಲ್ಲಿಯೂ ದಾಸರ ಗೂಢವಿದೆ.

ಸಾಣೆಕಲ್ಲು, ಇದರ ಅರ್ಥ ಸಾಣೆ=ಎಂದರೆ ತಿಕ್ಕುವಿಕೆ, ತೇಯುವಿಕೆ, ಮಸೆಯುವಿಕೆ, ಆಯುಧಗಳನ್ನು ಹರತಮಾಡುವಿಕೆ, ಇವುಗಳನ್ನು ತೇಯುವ ಮುಂತಾದ ಕೆಲಸಕ್ಕೆ ಒಂದು ಕಲ್ಲು=ಶಿಲೆಬೇಕು. ಇದು ನುಣುಪಾಗಿ ಗಟ್ಟಿಯಾಗಿರಬೇಕು. ಇದಕ್ಕೆ ಸಾಣೆಕಲ್ಲು ಗಂಧ ತೇಯುವದು, ತಿಕ್ಕುವದು, ಮಸೆಯುವದು, ಬೇರೆಬೇರೆ ಕಲ್ಲು ಇವೆ.

೧. ಎಲೈ ಸಾಧನ ಜೀವಿಗಳೇ ಸಾಧನಮಾಡಲು ದೇಹಾಖ್ಯವಾದ ಗಂಧಕೊರಡು ತೇದು ತೇದು ತಿಕ್ಕಿ ಅನೇಕ ವ್ರತ ಉಪವಾಸಾದಿಗಳನ್ನು ಮಾಡಿ ಎನ್ನಂತೆ ಕಷ್ಟಪಟ್ಟು ಸಾಧನಮಾಡಿರಿ.

೨. ಮತ್ತು ಕಲ್ಲು ಸದೃಶವಾದ ಕಠಿಣ ಹೃದಯ ಮನಸ್ಸು ತಿಕ್ಕಿ ತಿಕ್ಕಿ ಮೆತ್ತಗೆ ಮಾಡಿರಿ. "ಕಲ್ಲು ಮೆತ್ತಗ ಮಾಡಬೇಕಣ್ಣಾ ಬಲ್ಲವರ ಕೇಳಿ" ಎಂದು ಪುರಂದರದಾಸರ ವಚನ.

೩. ಕುಶಾಸ್ತ್ರವೆಂಬ ಅಜ್ಞಾನದಿಂದ ಕಿಟ್ಟು ಗಟ್ಟಿ ಮಲಿನವಾದ ಬುದ್ಧಿಯನ್ನು, ಸಚ್ಛಾಸ್ತ್ರಾರ್ಥವಾದ ಪದ ಸುಳಾದಿಗಳ ಸುಜ್ಞಾನವೆಂಬ ಸಾಣೆ ಹಿಡಿದು ಮಸೆದು ಹರಿತಮಾಡಿರೆಂಬುವದಕ್ಕೆ ಸಾಣೆಕಲ್ಲು ತಮ್ಮ ಗುರುತಿಗಾಗಿ ಬಿಟ್ಟಿರುವರು. ಈ ಮೂರು ವಿಧವು ಶಾಸ್ತ್ರಸಮ್ಮತ. ಮತ್ತು **ತಂಬೂರಿ** ಇದೇಕೆ ಇಲ್ಲಿರಿಸಿದರು. ದಾಸರು ತಮ್ಮ ಕವನಗಳನ್ನು ಹಾಡ ಬೇಕಾದರೆ ಶ್ರುತಿಸಂಗಡ ಹಾಡಬೇಕು. ಸಾಮಾನ್ಯ ಶ್ರುತಿ ಕೂಡಿಸುವ ವಾದ್ಯಕ್ಕೆ ತಂಬೂರಿ ವೀಣಾ ಎನ್ನುವರು. ತನ+ಬೂರಿ= ತಂಬೂರಿ, ತನ್- ತನು ದೇಹ, ಬೂರಿ=ಭೂರಿ ಬಹಳವಾದುದು. ಅಂದರೆ ಸ್ಥೂಲವಾದ ಕಣ್ಣಿಗೆ ಕಾಣಿಸುವ ದೇಹವೇ ವೀಣಾ ತಂಬೂರಿ ಸಾಧನ ಜೀವಿಗಳು ಹೇಗೆ ಬಾರಿಸುವದು ? ಅಪರೋಕ್ಷಜ್ಞಾನಿಗಳಾದ ಮನೋಹರವಿಠ್ಠಲರು "ಹರಣ ವೀಣೆಯವಿಡಿದು ರದನಮೆಟ್ಟಂಗೈದು । ವರಜಿಂಹತಂತು ಪಂಙ್ತಿ ಗಳ ನೆರೆಮಾಡಿ । ಸ್ಥಿರಬುದ್ಧಿಯೆಂಬ ಶ್ರುತಿ ರವನಂಬಲಿದೊತ್ತಿ ಸುಜ್ಞಾನ ಸ್ವರಗೂಡಿಸಿ ॥ ಪರಮ ಕೋವಿದ ಮನೋಹರ ವಿಠಲನಂತನ್ನ । ಕರುಣ ಪಾಣಿಗಳಿಂದ ಬಾರಿಸುತ್ತೀ ಕಥೆಯ । ನೊರದೆನಲ್ಲದೆ ವೆಗ್ಗಳಿಸಲೆನ್ನೊ ಶವಲ್ಲ ಸಜ್ಜನರು ಕೇಳಿರೆಲ್ಲ ॥೧॥ ಎಂಬಂತೆ ಮುಮುಕ್ಷುಗಳು ದೇಹ ವೆಂಬ ತಂಬೂರಿ, ಹಲ್ಲುಗಳೇ ತಂತಿಗಳ ಕೂಡಿಸುವ ಮೆಟ್ಟಲು, ಜಿಂಹ್ವಾ ವೆಂಬುದೇ ತಂತು (ತಂತಿಗಳು) ವಿಷಯದಲ್ಲಿ ಮನಸ್ಸು ಹಾಕಿ ಕೇಳದೆ ಸ್ಥಿರಬುದ್ಧಿಯಿಂದ ಶ್ರುತಿಬಲಿದೊತ್ತಿ ಸಮೀಚೀನವಾದ ಸುಜ್ಞಾನ ಸ್ವರ ಕೂಡಿಸಿ, ಭಗವಂತನ ಕರುಣಾಪಾಣಿಯಿಂದ ಬಾರಿಸುತ್ತ ಶ್ರೀ ಹರಿ ಕೀರ್ತನೆ ಮಾಡಿರೆಂದು ತಿಳಿಸಲು ತಂಬೂರಿ ಸಾಣೆಕಲ್ಲು ಗುರುತಿಗಾಗಿ ಟ್ಟಿರುವರೆಂಬುದು ಮರೆಯಲಾಗದು.

ಶ್ರೀ ದಾಸರ ಒಂದು ಜತೆ ಚಿಕ್ಕತಾಳವು ಇರುವವು. ಈ ತಾಳಗಳು ಮೂರನೇ ಪದಾರ್ಥವಾಗಿದೆ. ತಾಳವೆಂದರೆ, ತಾಳ್=ಸಹಿಸು, ತಾಳು, ಧರಿಸು, ಇತ್ಯಾದಿ ಅರ್ಥ ಕೊಡುತ್ತದೆ. ಇವು ದಾಸರು ಭಾರಿಸಿದ ತಾಳ, ಕಂಚಿನವಾದ್ಯ, ತಾಳಗತಿಲಯವನ್ನು ತೋರಿಸುವ ಕಾಲಬದ್ಧವಾದ ಸದ್ದು. ಅವರ ಕರಸ್ಪರ್ಶದಿಂದಲೇ ಜಡಗಳಲ್ಲಾದರೂ ಒಂದು ಹೆಚ್ಚಿನ ವಿಭೂತಿ ವಿಶೇಷ ಅವು ಆದರಣೀಯವಾಗಿವೆ. ಈ ತಾಳಗಳು ದಾಸರು ಏಕೆ ಬಿಟ್ಟಿರುವರುಎಂದರೆ, (೧) ತಾವು ಮಾಡಿದ ಕೃತಿಗಳನ್ನು ರಾಗಪೂರ್ವಕವಾಗಿ ತಾಳಬದ್ಧತೆಯಿಂದ ಹರಿಗುಣಗಾನಮಾಡಿದರೆ ಹರಿಯೊಲಿಯುವನು. ಇಲ್ಲವೇ "ಕೇಳನೊ ಹರಿ ಕೇಳನೊ" ಈ ಗುರುತಿಗಾಗಿಯೂ ಮತ್ತು ಸಂಸಾರದ ತಾಪತ್ರಯಗಳು ಕಾಲಕಾಲಕ್ಕೆ ಒದಗುವವು. ಸುಖ ದುಃಖ, ಶೀತೋಷ್ಣ, ಮಾನಾಪಮಾನ ನಿಂದ್ಯಾನಿಂದ್ಯ ಇವುಗಳೆಲ್ಲ ಹರಿಯಾಜ್ಞೆಯಿಂದ ಬಂದವೆಂದು, ಸಹನಮಾಡುತ್ತ ಸಾಧನ ಮಾಡಿ, ತಾಳಗಳಂತೆ ದೇಹವನ್ನು ಸವಿಸಿ ಸಾಧನಮಾಡಿರಿ. "ತಾಳಬೇಕು ತಕ್ಕ ಮ್ಯಾಳಬೇಕು" ಎಂಬ ಗುರುಗಳ ವಚನವಿದೆ.

ಚೀಕನಬರಿವೆಯ ಮನೆಯಲ್ಲಿ ಹಯವದನವಿಠ್ಠಲರ ಹೆಣ್ಣು ಸಂತತಿ ಎಂದು ಹೇಳಿಕೊಳ್ಳುವರು ಇರುವರು. ದಾಸರ ಮಹಾ ಭಕ್ತರಾಗಿ ಪ್ರತಿವರ್ಷವುಬಹುವಿಸ್ತಾರವಾಗಿ ವಿಜೃಂಭಣೆಯಿಂದ ಆರಾಧನಾ ಮಾಡುತ್ತಾರೆ.

ಸಾಂಶರಾದ ದೇವತೆಗಳು ವ್ಯಾಪ್ತರು ವ್ಯಾಸ್ತೋಪಾಸಕರು ಯಾವ ಲೋಕದಲ್ಲಿ ಯಾವ ಜನುಮದಲ್ಲಿದ್ದರೂ ಭಗವಂತನ ಕೃಪೆಯಿಂದ ಅವರ ಮಹಿಮೆಯು ಸಹಿತ ವ್ಯಾಪ್ತವಾದುದು. ಇಂಥ ಅಪರೋಕ್ಷಜ್ಞಾನಿಗಳಾದ ಸಂಕ್ಷಿಪ್ತ ಚರಿತ್ರೆಯು ಈ ಪಾಮರನನ್ನು ಉದ್ಧರಿಸಲು ಅವರೇ ನಿಂದು ಪ್ರೇರಿಸಿ ಬರೆಸಿ ಬರೆದದು. ದಾಸವರ್ಯರಂತರ್ಗತ ಮಧ್ವೇಶನು ತುಷ್ಟನಾಗಲಿ ಸಜ್ಜನರಿಗೆ ಪ್ರೀತಿಕರವಾಗಲಿ. ಪದಗಳ ಆಧಾರ ಮೇಲಿಂದ ಜ್ಞಾನಿಗಳಾದ ಹಿರಿಯರಿಂದ ಕೇಳಿದಷ್ಟು ಈಗ ದಾಸರು ಬುದ್ಧಿಯಲ್ಲಿನಿಂತು ನೆನಪು ಕೊಡಿಸಿ ಬರೆಸಿದಷ್ಟು ಬರೆಯಲಾಗಿದೆ. ಎನ್ನ ಸ್ವಮತಿಯಲ್ಲ ದಾಸರ ಕೆಲವು ಕಥೆಗಳು ಜನರು ಬೇರೆಬೇರೆ ವಿಧವಾಗಿ ಕೇಳಿರಬಹುದು. ಶ್ರೀ ಮಧ್ವವಿಜಯಕಾರರು ಶ್ರೀ ಪಂಡಿತಾಚಾರ್ಯರ ವಾಕ್ಯದಂತೆ

"ಪ್ರಬಲರೊೞಚನವೇ ಸತ್ಯವೆಂದು" ಪೇಳಿದಂತೆ ಎಮಗೆ ಅಪರೋಕ್ಷ ಜ್ಞಾನಿಗಳಾದ ದಾಸರ ಶಿಷ್ಯರ ಪದಗಳೇ ಪ್ರಬಲವಾದ ಮುಖ್ಯಾಧಾರಗಳು ಇವುಗಳಲ್ಲಿಯೇ ನಂಬಿಕೆಇಡಲಿಕ್ಕೆ ಬೇಕೆಂದು ಪ್ರಾರ್ಥಿಸುವೆನು. ದಾಸರು ಕತ್ತೆಗೆ ನೀರು ಕುಡಿಸಿದ ಪುಣ್ಯ, ಮತ್ತು ಸಕೇಶಿಮನೆಯಲ್ಲಿ ಊಟ ಮಾಡಿದ್ದು, ಮತ್ತು ಕಲ್ಲೂರು ಸುಬ್ಬಣದಾಸರಿಗೆ ಸುಧಾವಾಕ್ಯ ಹೇಳಿರೆಂದು ಕೇಳಿದ್ದು ಇನ್ನು ಕೆಲವು ನಿರಾಧಾರವಾಗಿವೆ ಹಿರಿಯರಿಂದ ಕೇಳಿಯೂ ಇಲ್ಲ. ಇನ್ನು–

## ದಾಸರ ಅವತಾರ ಮತ್ತು ಯಾತ್ರಾಕಾಲ ವಿಚಾರ

ದಾಸರ ಅವತಾರ, ಜನನಕಾಲ ಮತ್ತು ವೈಕುಂಠಯಾತ್ರಾ ಮಾಡಿದ ಕಾಲದಲ್ಲಿ ಕೆಲವರಿಗೆ ಅಪನಂಬಿಕೆ ಆದರಲ್ಲಿ ಕರ್ನಾಟಕ ಭಕ್ತಿ ವಿಜಯಕಾರರು ಭಕ್ತಿವಿಜಯ ಭಾಗ ೨ ಪುಟ ೨೦ ಫುಟ್ ನೋಟಿನಲ್ಲಿ ಶ್ರೀ ವಿಜಯದಾಸರು ವೈಕುಂಠಯಾತ್ರಾ ಮಾಡಿದ್ದು "ಯುವಸಂವತ್ಸರ ಚರ್ಚಾಸ್ಪದವಾಗಿರುವದು ಹಯವದನವಿಠಲರು ಜಗನ್ನಾಥವಿಠಲರು ಮಾಡಿದ ಪದದಲ್ಲಿ ಯುವಸಂವತ್ಸರವೆಂದು ಜನರು ಹಾಡುವ ಪರಿಪಾಠ ವಿದೆ. ಮೂಲಪ್ರತಿಗಳು ದೊರಕಿಲ್ಲ ಯಾರೋ ಬರದಿಟ್ಟಾರೆ. ಯಾಕಂ ದರೆ ಜಗನ್ನಾಥದಾಸರು ಶ್ರೀ ವಿಜಯದಾಸರಿಂದ ಬಹು ಚಿಕ್ಕವರು, ಶುಕ್ಲ ಸಂವತ್ಸರದಲ್ಲಿ ಜಗನ್ನಾಥದಾಸರು ನಿರ್ಯಾಣ ಮಾಡಿದ್ದಾರೆ. ಶುಕ್ಲ ಸಂವತ್ಸರ ನಂತರ ೬ ನೇದು ಯುವಸಂವತ್ಸರ. ಹಿಂದಿನ ಯುವಸಂವ ತ್ಸರವೆಂದರೆ ಗೊಪಾಲದಾಸರು ಜಗನ್ನಾಥದಾಸರಿಗೆ ೪೦ ವರ್ಷ ಆಯು ರ್ದಾನಮಾಡಿ ಕಾಲಕ್ಕೆ ವ್ಯತ್ಯಾಸ ಬರುತ್ತದೆ. ಯುವಸಂವತ್ಸರವೆಂದು ಬಹಳ ಬಾಧಕವಾಗಿದೆ" ಎಂದು ಉಹಾಪೋಹಗಳನ್ನು ಮಾಡಿದ್ದು, ಏನು ತಿಳಿಯದ ಜನರಿಗೆ ಅಪನಂಬಿಕೆಗೆ ಕಾರಣವಾಗಿದೆ. ಕಾರಣ ಈ ವಿಷಯ ಅತ್ಯಾವಶ್ಯ ಹಿಂದಿನ ಆಧಾರಗಳ ಮೇಲಿಂದ ವಿಚಾರಾಂಶವಾಗಿದೆ.

ಇದು ಐತಿಹಾಸಿಕ ದೃಷ್ಟಿಯಿಂದ ಶ್ರೀ ಗೋಪಾಲದಾಸರ ಚರಿತ್ರೆ ಶ್ರೀ ಜಗನ್ನಾಥದಾಸರ ಚರಿತ್ರೆ ಇತರ ಕೆಲವು ಭೂದಾನ ಸನದುಗ ಆಧಾರದಿಂದ ಈ ಮೂವರು ದಾಸರ ಕಾಲ ಸರಿಯಾಗಿ ದೊರೆಯುತ್ತವೆ

ಇದಲ್ಲದೆ ಗೋಪಾಲದಾಸರ ಕಾಲದಲ್ಲಿ ಶುದ್ಧ ಪ್ರತಿಯಾಗಿ ಬರೆದಿಟ್ಟ ಸೋಮಪುರ ಹಳೆ ಪುಸ್ತಕದಲ್ಲಿ ಚಿಪ್ಪಗಿರಿ ಪುಸ್ತಕದಲ್ಲಿಯೂ ನಮ್ಮಲ್ಲಿಯೂ ಶ್ರೀ ಹಯವದನ ವಿಠ್ಠಲರ ಪದ ಅಪರೋಕ್ಷಿಗಳಾದ ಶ್ರೀ ಪ್ರಾಣೇ ದಾಸರು ಸ್ವತಃ ಬರೆದಿಟ್ಟ ಜಗನ್ನಾಥದಾಸರ ಪದವೆರಡೂ ಶುದ್ಧವಾಗಿವೆ. ಇವೆರಡನ್ನು ನೋಡಿದರೂ ಸಂಶೋಧನಕ್ಕೆ ಬಂದಾಗ್ಗೆ ಭಕ್ತವಿಜಯ ಕಾರರಿಗೆ ತೋರಿಸಿದಾಗ್ಯೂ ಮೇಲ್ಕಾಣಿಸಿದಂತೆ ಬರೆದಾರೆ. ಆಗಲಿ ಪದ ೬ ಪುಟ (೯) ಹಯವದನ ವಿಠ್ಠಲರು ಕೊನೆಯ ನುಡಿಯಲ್ಲಿ " ವೈಕುಂಠ ಯಾತ್ರೆ ಯುವಸಂವತ್ಸರ ಶುದ್ಧ। ಆ ಕಾರ್ತಿಕ ಶುದ್ಧ ಗುರುವಾರ ಪ್ರಹರ ದಲಿ। ರಾಕೇಂದುಬಿಂಬ ಹಯವದನ ವಿಠಲನಂಘ್ರಿಜೋಕೆಯಲಿ ಸೇರಿ ದರು " ॥ ೯ ॥ ಎಂದು ಪೇಳಿರುವದು ಶುದ್ಧವಾಗಿ ನಿಜವಾಗಿದೆ. ಮತ್ತು ಪದ ೧೩ ನುಡಿ (೧) ಯುವಸಂವತ್ಸರದ ಕಾರ್ತೀಕ ಶುದ್ಧ। ಅವಿರುದ್ಧ ವಿಲ್ಲದಲೆ ಶುದ್ಧ ದಶಮಿ ॥ ನವನಾಡಿ ಗುರುವಾರ ದಿವಿಜರ ಮೇಳದಲಿ। ಖವಖವ ನಗುತ ನಗೆಮುಖದಿ ಹರಿಚರಿತೆ ಪಾಡುತಲಿ ॥ ಎಂದು ಹೇಳಿ ರುವರಲ್ಲದೇ ಶ್ರೀ ಜಗನ್ನಾಥ ದಾಸವರ್ಯರು ಪದ ೩೮ ಪುಟ ೩೧।೧ ನೇ ನುಡಿಯಲ್ಲಿ–

"ಯುವಸಂವತ್ಸರದ ಕಾರ್ತೀಕ ಶುದ್ಧ ದಶ।
ಮಿ ವಿಭಕರ ಗುರುವಾರ ಪ್ರಥಮಸುಯಾಮದಿ ॥
ಪವನಾಂತರಾತ್ಮಕಾ ಶ್ರೀ ಹರಿಯ ದರ್ಶನೋ।
ತ್ಸವ ಸಂಪಾದಿಸುವ ಬಹು ಲವಲವಿಕೆಯಿಂದಲಿ ॥ ೧ ॥

ತೆರಳಿದರು ವಿಜಯರಾಯರು ವಿಠಲನಾ ಎಂಬುವ ಈ ಪದದಲ್ಲಿ ನಾಲ್ಕು ಚರಣ ಪ್ರಾಸುಯುವ। ಮಿವಿಭಕರ। ಪವನಾಂತರ್ಯಾಮಿ। ತ್ಸವ। ಎಂಬುವ ನಾಲ್ಕು ವ ಕಾರ ಪ್ರಾಸುಗಳು ಬಂದವೆ. ಅಪರೋಕ್ಷಿ ಜ್ಞಾನಿಗಳಾದ ಪ್ರಾಣೇಶದಾಸರು ಬರೆದಿಟ್ಟಾರೆ. ಒಂದು ಯುವವೆಂದು ತಪ್ಪಾಗಿ ಹಾಡಿದರೆ ಉಳಿದ ಮೂರು ಚರಣಗಳು ಸಹ ವ ಕಾರಪ್ರಾಸು ಲೋಪವಾಗಬೇಕಾಗುತ್ತಿತ್ತು. ಹಾಗಿರದೇ ಆಗ್ಗೆ ಶ್ರೀ ಜಗನ್ನಾಥದಾಸರು ಚಿಕ್ಕವರಾದಾಗ್ಯೂ ಶ್ರೀ ವಿಜಯದಾಸರ ಯಾತ್ರಾನಂತರ ಸುಮಾರು

ಎಷ್ಟೋವರ್ಷ ಜೀವಿತರಾಗಿದ್ದಾರೆ. ದಾಸರ ಯಾತ್ರಾನಂತರ ಯಾವದೋ ಒಂದುಕಾಲದಲ್ಲಿ ಮಾಡಿದ್ದಾರೆ. ಶುಕ್ಲ ಸಂವತ್ಸರದಿಂದ ಯುವ ಸಂವತ್ಸರ ೬ ವರ್ಷ ಮುಂದಾಗಿರುವದು. ಶಕೆ ೧೬೭೭ ಯುವಸಂವತ್ಸರದಿಂದ ಮುಂದೆ ೧೭೩೧ ಶುಕ್ಲ ಸಂವತ್ಸರವರೆಗೆ ತಮ್ಮ ಜೀವಿತಕಾಲದಲ್ಲಿ ಪದ ಮಾಡಿರುವದು ನಿಜ ೬ ವರ್ಷ ಹಿಂದಾಗಿದ್ದರೆ ಮಾತ್ರ ಸಂಶಯಕ್ಕೆ ಕಾರಣವಾಗುತ್ತಿತ್ತು.

ಇನ್ನು ಶ್ರೀ ವಿಜಯದಾಸರು ಯಾವ **ಯುವ** ಸಂವತ್ಸರದಲ್ಲಿ ಯಾತ್ರಾ ಮಾಡಿದರೆಂಬುದು ವಿಚಾರಾರ್ಹವಾಗಿದೆ. ಗೋಪಾಲದಾಸರು ವಿಜಯರಾಯರ ಸಾಕ್ಷಾತ್‌ಶಿಷ್ಯರು ಅವರ ಕಾಲಕ್ಕೆ ಇದ್ದರು. ಗದ್ವಾಲ ಸಂಸ್ಥಾನದಲ್ಲಿ ಗೋಪಾಲದಾಸರ ಮೂಲ ಪುರುಷ ಭೀಮಣ್ಣನವರಿಗೆ ಮೊದಲಿಗೆ "ಅಮೀರಕಬೀರ ತಾನೆಷಾಹ್" ಇವರು ಪೂರ್ವದಲ್ಲಿ ಇನಾಂಜಮೀನಗಳು ಕೊಟ್ಟಂತೆ ಅದೇ ಆಧಾರವಾಗಿ ನಂತರ ಗದ್ವಾಲ ಸಂಸ್ಥಾನಾಧಿಪತಿ ರಾಜಾರಾಮು ಭೂಪಾಲರು ಗೌಡ ಶಾನಭೋಗರ ದ್ವಾರಾಸನದುಗಳು ಕೊಟ್ಟಾರೆ ಅದರಲ್ಲಿ ಶಾ. ಶಕೆ ಸಂವತ್ಸರ ಅವೆ.

೧. **ಮೊದಲನೇಸನದು** ಶಾ. ಶಕೆ ೧೬೬೯ ಪ್ರಭವ ಸಂವತ್ಸರ ಜೇಷ್ಠ ಶು. ೧೦ ಭಾಗಣ್ಣಭಟ್ಟಲ್ ಅಯ್ಯಗಾರಿಕಿಕಾಶ್ಯವರಂ ಗೌಡ ಕರಣಾಲುಃ ಎಂದು.

೨. ಮತ್ತು **ಎರಡನೆಸನದು** ಶಾ. ಶಕೆ ೧೬೬೯ ಪ್ರಭವಸಂವತ್ಸರ ಆಷಾಢ ಶು|| ೫ ರಾಣಿಬಕ್ಕಮ್ ಕೊಟ್ಟಸನದು.

೩. ಮತ್ತು **೩ ನೇ ಸನದು** ಶಾ. ಶಕೆ ೧೬೭೮ ಧಾತುನಾಮ ಸಂವತ್ಸರ ಕಾರ್ತಿಕ ಶು|| ೧೫ ಭಾಗಣಭಟ್ಟರಿಗೆ ಕ್ಯಾಸ್ಯಾವರಂಜಮೀನ ದಾನ ರಾಜಾರಾಮು ಭೂಪಾಲರವರ ಆಜ್ಞಾಪ್ರಕಾರ.

ಈ ಮೂರು ಸನದುಗಳು ಭಾಗಣ್ಣನವರಾದ ಗೋಪಾಲದಾಸರ ತಮ್ಮಂದಿರು ರಂಗದಾಸರ ವಂಶೀಕರಲ್ಲಿದ್ದವು. ಇನಾಂಜಮೀನಗಳು ಬಹಾಲ್ ಆಗುವಾಗ್ಗೆ ಸರಕಾರದಲ್ಲಿ ಈಗ್ಯೂ ಮೂಲಸನದುಗಳು ಫೈಲಿ

ನಲ್ಲಿ ಅವೆ. ಈ ಮೂರು ಸನದುಗಳ ಮೇಲಿಂದ ಸುವಿಚಾರಮಾಡಿದರೆ ೧೬೭೯ ಶಕೆ ಪ್ರಭವಸಂವತ್ಸರದಿಂದ ೮ ನೇದು ಶಾ. ಶಕ ೧೬೭೭ ಯುವ ಸಂವತ್ಸರವೇ ನಿಜವಾಗಿ ಆಗುತ್ತದೆ. ಮತ್ತು ಮೂರನೇ ಸನದು ಶಾ. ಶಕೆ ೧೬೭೮ ಧಾತುನಾಮ ಸಂವತ್ಸರದ್ದಾಗಿದೆ. ಈ ಧಾತುನಾಮ ಸಂವತ್ಸರಹಿಂದಿನ ಸಂವತ್ಸರವೇ ಶಾ. ಶಕೆ **೧೬೭೭ ಯುವಸಂವತ್ಸರ ಈ ಯುವಸಂವತ್ಸರದಲ್ಲಿಯೆ** ಶ್ರೀ ವಿಜಯದಾಸರು ವೈಕುಂಠಯಾತ್ರೆ ಮಾಡಿದ್ದು ನಿಜವೆಂದು ಸಿದ್ಧವಾಗುತ್ತದೆ.

೪. ಮತ್ತು **ನಾಲ್ಕನೇಸನದು** ಶಾ. ಶಕೆ ೧೬೮೫ ಸ್ವಭಾನು ನಾಮ ಸಂವತ್ಸರದಲ್ಲಿ **ಭಾಗಣ್ಣನವರ ಉದ್ದಿಶ್ಯಸಂಕಲ್ಪ ಮಾಡಿದ್ದು,** ಐಜಿನಾಡಗೌಡ ಕು|| ಹಳ್ಳಿ ತಿಮ್ಮಯ್ಯನವರು ಶ್ರೀನಿವಾಸದಾಸರಿಗೆ ( ಭಾಗಣ್ಣನವರ ತಮ್ಮಗೆ ) ಇನಾಂಕೊಟ್ಟದ್ದು ( ಅಂದರೆ ೧೬೮೪ ಶಕೆ ಯಲ್ಲಿ ಭಾಗಣ್ಣನವರು ಯಾತ್ರಾ ಮಾಡಿದನಂತರ ದಾನಸನದು ) ಇದರ ಮೇಲಿಂದಲೂ ಶ್ರೀ ಭಾಗಣ್ಣದಾಸರಿಗೆಂತ ಸಂಕಲ್ಪಮಾಡಿದ ಜಮೀನು ಸ್ವಭಾನುಸಂವತ್ಸರ ಹಿಂದಿನದೇ ಶಾ. ಶಕೆ ೧೬೮೪ ಚಿತ್ರ ಭಾನುಸಂವತ್ಸರ ದಲ್ಲಿ ಪುಷ್ಯ ಬ|| ೮ ಗೋಪಾಲದಾಸರು ಯಾತ್ರಾ ಮಾಡಿದರೆಂದು ಈ ಸನದಿನಮೇಲಿಂದಲೂ ತಂದೆ ಗೋಪಾಲವಿಠಲರ ಪದದ ಮೇಲಿಂದ ಸಿದ್ಧವಾಗುತ್ತದೆ. ಈ ಶಾ. ಶಕೆ ಸ್ವಭಾನು ಸಂ|| ಹಿಂದಿನ ೮ ನೇ ವರ್ಷವೆ ೧೬೭೭ ಶಕೆ ಯುವಸಂವತ್ಸರ ಇನ್ನು.

**೫ ನೇ ಸನದು** ಶಾ. ಶಕೆ ೧೬೯೫ ನಂದನನಾಮ ಸಂ|| ಮಾಘ ಶು|| ೧ ಶ್ರೀನಿವಾಸದಾಸರಿಗೆ ( ಗುರುಗೋಪಾಲವಿಠಲರಿಗೆ ) ವೇಣಿ ಸೋಮಪುರ ಗೌಡ ಶಾನಬೋಗರು ರಾಜಾರಾಮ ಭೂಪಾಲ ಇವರ ಆಜ್ಞಾ ಪ್ರಕಾರ ದಾನಪತ್ರ ಈ ಶಾ. ಶಕೆ ೧೬೯೫ ನಂದನನಾಮಸಂವತ್ಸರದಿಂದ ೧೮ ವರುಷ ಹಿಂದಾಗಿರುವ ಶಾ. ಶಕೆ ೧೬೭೭ ನೇಧು **ಯುವಸಂವತ್ಸರ** ವೆಂದು ನಿಜವಾಗಿಯೂ ಸಿದ್ಧವಾಗಿದೆ.

ಮತ್ತು ನಮ್ಮಲ್ಲಿ ಹಳೆಯ ಕಾಗದಪತ್ರದಲ್ಲಿ ಶ್ರೀ ಶ್ರೀ ವರದೇಂದ್ರ ಸ್ವಾಮಿಗಳವರು ಈ ಪ್ರಾಂತಕ್ಕೆ ವಿಜಯಂಗೈಸಿದಾಗ್ಗೆ ದಿಗ್ಗಾವಿ ರಂಗಾ

ಚಾರ್ಯ ಮುದಗಲ್ ಇವರಿಗೆ ಭೂದಾನಪತ್ರ ಶಕೆ ೧೬೮೭ ಪಾರ್ಥಿವ ಸಂವತ್ಸರಲ್ಲಿ ಆಜ್ಞಾಪತ್ರವೂ ಇದೆ. ಶ್ರೀ ವರದೇಂದ್ರ ಸ್ವಾಮಿಗಳವರ ಕಿಂತಲೂ ಶ್ರೀ ವಿಜಯದಾಸರು ಪೂರ್ವದವರೆಂದು ಮಠದ ಪೀಳಿಗಿಯಿಂದ ಗೊತ್ತಾಗುತ್ತದೆ. ಈ ರಾಯಸದಿಂದಲೂ ಶಕೆ ೧೬೮೭ ಪಾರ್ಥಿವ ಸಂವತ್ಸರ ೧೦ ವರ್ಷ ಹಿಂದಿನ ಸಂವತ್ಸರ ಶಕೆ ೧೬೭೭ ಯುವಸಂವತ್ಸರ ವೆಂದೆ ಗೊತ್ತಾಗುತ್ತದೆ. ಶ್ರೀ ವಿಜಯದಾಸರು ಶ್ರೀ ವರದೇಂದ್ರರಕಿಂತಲೂ ಪೂರ್ವಾದವರಾದ ವಾದೇಂದ್ರರಕಾಲ ಕಿಂಚಿತು ವಸುಧೇಂದ್ರರ ಕಾಲದ ವರು ಶ್ರೀ ವಾದೀಂದ್ರರ ಸ್ತೋತ್ರಮಾಡಿದ್ದಾರೆ. ಇವೆಲ್ಲ ಆಧಾರ ಮೇಲಿಂದ ಶಾ. ಶಕೆ ೧೬೭೭ **ಯುವಸಂವತ್ಸರವೇ** ದಾಸರ ಯಾತ್ರಾ ಕಾಲ ನಿಜ ನಿಜ. ಶಾ. ಶಕೆ ೧೬೭೭ ಯುವ ಸಂ|| ದಾಸರ ಯಾತ್ರಾ ಸಿದ್ಧವಾದಿತು. ಅವರೇ ೭೩ ವರ್ಷ ಹೊಪ್ಪದೇಹದಲಿದ್ದೆ ಎಂದು ಹೇಳಿ ದ್ದಾರೆ. ಇದರಮೇಲಿಂದ ದಾಸರ ಜನನ ೧೬೦೪ ಶಕೆ ರುಧಿರೊದ್ಗಾರಿ ಸಂ|| ವೆಂದು ಸಹಜ. ಇನ್ನು ಶ್ರೀ ಗೋಪಾಲದಾಸರು ಯಾತ್ರಾ ಮಾಡಿದ ಕಾಲ ಹಿಂದೆ ತೋರಿಸಿದಂತೆ ಸನದುಗಳ ಮೇಲಿನ ಆಧಾರದಿಂದ ೧೬೮೪ ಶಾ. ಶಕೆ ಚಿತ್ರಭಾನುಸಂವತ್ಸರವೆಂದು ಸಿದ್ಧ. "ತಂದೆ ಗೋಪಾಲವಿಠಲರುಸಹ" "ಚಿತ್ರಭಾನುಸಂವತ್ಸರ ಪುಷ್ಯ ಬಹುಳ ಅಷ್ಟಮಿ" ಎಂತಲೇ ಹೇಳಿದ್ದಾರೆ. ಅಲ್ಲದೇ ಹಳೆಯ ರಿಕಾರ್ಡಗಳ ಆಧಾರ ದಿಂದ ಶ್ರೀ ಪ್ರಾಣೇಶ ವಿಠಲದಾಸರು ಶಾ. ಶಕೆ ೧೭೪೪ ಚಿತ್ರಭಾನು ಸಂವತ್ಸರ ಆಶ್ವೀಜ ಶುದ್ಧ ಸಪ್ತಮಿ ಯಾತ್ರಾ ಮಾಡಿರುವರು. ಇದಕ್ಕೆ ಹಿಂದಿನ ಚಿತ್ರಭಾನುಸಂವತ್ಸರ ೬೦ ವರ್ಷ ಮೊದಲಿಗೆ ಅಂದರೆ ೧೬೮೪ ಶಕೆ ಚಿತ್ರಭಾನುಸಂವತ್ಸರವೆ ಶ್ರೀ ಗೊಪಾಲದಾಸರ ಯಾತ್ರಾಕಾಲ ವೆಂದು ಸಿದ್ಧ.

ಭಕ್ತಿ ವಿಜಯಕಾರರ ಎರಡನೇ ಆಕ್ಷೇಪವೇನಂದರೆ ಶ್ರೀ ಜಗನ್ನಾಥ ದಾಸರು ಶ್ರೀ ವಿಜಯದಾಸರಿಂದ ಚಿಕ್ಕವರು ಅವರಿಗೆ ಗೋಪಾಲದಾಸರು ೪೦ ವರ್ಷ ಆಯುರ್ದಾನ ಮಾಡಿರುವದು ಕೂಡುವದಿಲ್ಲ ಕಾರಣ, ಯುವಸಂವತ್ಸರ ಶ್ರೀ ವಿಜಯದಾಸರ ಯಾತ್ರಾಕಾಲ ಕೂಡುವದಿಲ್ಲವೆಂತ ಬರೆದಿರುವರು. ಈ ಆಕ್ಷೇಪಕ್ಕೆ ಮಾರ್ಗವೇ ಇಲ್ಲ. ಎಲ್ಲ ದಾಸರ

ರಾಯರ ವಾಕ್ಯದಿಂದ ಜಗನ್ನಾಥದಾಸರಿಗೆ ಶ್ರೀ ವಿಜಯರಾಯರ ಅವ ಹೇಲನದಿಂದ ಉದರಶೂಲೆ, ಕ್ಷಯರೋಗ ಪ್ರಾಪ್ತಿಯಾಗಿ ಆಯುಷ್ಯ ಕ್ಷಯವಾಗಿತ್ತು. ಶ್ರೀ ವಿಜಯರಾಯರನ್ನು ಮೊರೆ ಇಟ್ಟರು. ಕರುಣಾಳು ಗಳಾದ ಶ್ರೀ ವಿಜಯದಾಸರು ತಿರುಪತಿಯಿಂದ ಅವರನ್ನು ಗೋಪಾಲ ದಾಸರಿದ್ದೆಡೆಗೆ ಕಳುಹಿದರು. ಆಗ್ಗೆ ಶ್ರೀ ಗೋಪಾಲದಾಸರು ಶ್ರೀ ಧನ್ವಂತ್ರಿ ದೇವರನ್ನು ಪ್ರಾರ್ಥಿಸಿ ೪೦ ವರುಷ ತಮ್ಮ ಆಯುರ್ದಾನ ಮಾಡಿದರೆಂದು ಎಲ್ಲರ ಸಮ್ಮತ ಇದಕ್ಕೆ ಭಕ್ತವಿಜಯಕಾರರೇ ಒಪ್ಪಿದ್ದಾರೆಂದಮೇಲೆ ಸಂಶಯವ್ಯಾತಕ್ಕೆ ? ಯಾವ ಶಕೆ ಯಾವ ಸಂವತ್ಸರದಲ್ಲಿ, ಆಯುರ್ದಾನ ಮಾಡಿಸಿರುವರು. ಇನ್ನು ಮುಂದೆ ಶ್ರೀ ಜಗನ್ನಾಥದಾಸರಿಗೆ ಎಷ್ಟು ವರ್ಷ ಆಯುಷ್ಯವಿತ್ತು. ಮತ್ತು ಆಗ್ಗೆ ಅವರಿಗೆ ಎಷ್ಟು ವಯಸ್ಸು ಇತ್ತು. ಇವೆಲ್ಲ ಚನ್ನಾಗಿ ತಿಳಿದರೆ ಸರಿಯಾಗುತ್ತದೆ. ಈ ಕಾಲಕ್ಲಪ್ತತೆ ಯನ್ನು ಈಗ ದೊರಕಿರುವ ಪದಪದ್ಯವಾಗಲಿ ಇತರ ಆಧಾರವಾಗಲಿ ದೊರೆತಿಲ್ಲ. ಈ ವಿಷಯ ವಿಚಾರವು ಅತಿ ಗಹನವೂ ವಿಸ್ತಾರವಾಗಿ ಆಗುವದು. ಇತರ ಆಧಾರಗಳ ಮೇಲಿಂದ ಮುಂದೆ ಗೋಪಾಲದಾಸರು ಜಗನ್ನಾಥದಾಸರ ಚರಿತ್ರೆಯಲ್ಲಿ ವಿವರಿಸೋಣ, ಇಲ್ಲಿಗೆ ಈ ಗ್ರಂಥ ಬಹು ವಿಸ್ತಾರವಾದಿತು. ಮೇಲಿನ ಸನದುಗಳು ದಾಸರಾಯರ ಪದಗಳು ಆಧರಮೇಲಿಂದ ಶ್ರೀ ವಿಜಯದಾಸರು ಶಾ. ಶಕೆ ೧೬೭೭ ಯುವನಾಮ ಸಂವತ್ಸರ ಕಾರ್ತಿಕ ಶು|| ೧೦ ದಿನ ಒಂದಂಶದಿಂದ ಭೂಲೋಕದಲ್ಲಿ ಜ್ಞಾನಸಂತತಿ ಶಿಷ್ಯಸಂತತಿ ಇಟ್ಟು, ವೈಕುಂಠಯಾತ್ರೆಗೆ ತೆರಳಿದರು. ಅಣುಕಾಲಾದಿ ಕಾಲಕ್ಷಣಿಕ ನಾಶಉಳ್ಳದು.

ಮುಖ್ಯ ಶ್ರೀ ದಾಸರ ಜ್ಞಾನಸಂತತಿ ಶಿಷ್ಯಸಂತತಿ ಮಹಿಮಾ ಸಹ ಅನಂತವಿವೆ. ಎಂದು ಶ್ರೀ ದಾಸರ ಸಂಕ್ಷಿಪ್ತಚರಿತ್ರೆ ಲೇಖನದ್ವಾರ ಸಜ್ಜನರೆದುರಿಗಿಟ್ಟು, ಸಿಂಹಾವಲೋಕನ ನನ್ಯಾಯದಿಂದ ಉಪಸಂಹಾರ ಗೈಯ್ಯುತ್ತಲಿದೆ.

## ಉ ಪ ಸ ಂ ಹಾ ರ

ಶ್ರೀ ದಾಸಾರ್ಯರು ಮಹಾ ಅವತಾರಪುರುಷರಾಗಿದ್ದರು. ಭಗವ ದ್ಭಕ್ತರೂ ಜ್ಞಾನಿಗಳೂ ಮಹಾ ಕವಿಗಳಾಗಿದ್ದರು. ಮಹತ್ಮರಾದ ಮಹಾ

ಯೋಗಿಗಳು ಉತ್ತಮಹಾಗ್ರಂಥಕಾರರಾಗಿದ್ದರು. ಇಷ್ಟೇ ಅಲ್ಲದೆ ಕೇವಲ ಅಂತರಂಗಿಕ ಭಕ್ತರು ಸ್ವಲ್ಪದರಲ್ಲಿಯೇ ಹೇಳಬೇಕಾದರೆ ದಾಸರು ತತ್ವ ಜ್ಞಾನಿಗಳಲ್ಲಿ ಉತ್ತಮತತ್ವಜ್ಞಾನಿಗಳೂ, ಜ್ಞಾನಿಗಳಲ್ಲಿ ಜ್ಞಾನಿಶ್ರೇಷ್ಠರೂ, ವಿದ್ವಾಂಸರಲ್ಲಿ ವಿದ್ವದೋತ್ತಮರೂ, ಭಕ್ತರಲ್ಲಿಕೇವಲಭಕ್ತರೂ, ಕವಿಗಳಲ್ಲಿ ಮಹಾಕವಿಗಳೂ, ಮಾನುಷರಲ್ಲಿ ಮನುಷ್ಯೋತ್ತಮರೂ, ದೇವತೆಗಳಿಗೆ ಸಮಾನರು ಋಷಿಗಳಲ್ಲಿ ಉತ್ತಮರೂ ಆಗಿದ್ದರು. ವಿಶಿಷ್ಟ ಕಾರ್ಯ ಗಳನ್ನು ಮಾಡುವ ಉದ್ದೇಶ್ಯವಾಗಿಯೇ ಅವರ ಅವತಾರವಾಗಿತ್ತು. ಕಾಲಾಂತರದಲ್ಲಿಯೂ ಬಂದೊದಗುವ ಧರ್ಮಗ್ಲಾನವನ್ನು ನಷ್ಟಮಾಡುವ ಗೋಸುಗ ಭಗವದಾಜ್ಞೆಯಿಂದ ಭೂಲೋಕದಲ್ಲಿಯ ಸಜ್ಜನರಿಗೆ ಸುಮಾರ್ಗಗಾಮಿಗಳಾಗಿ ಧರ್ಮವನ್ನು ಬೀರಿದರು. ಭಾಗವತ ಧರ್ಮ ಅದ ರಲ್ಲಿ ಕೇವಲ ವಿಷ್ಣು ಉತ್ಕರ್ಷಧರ್ಮಪ್ರಕಾಶ ಮಾಡುವ ಮಹತ್ಕಾರ್ಯ ಸಾಧಿಸಲಿಕ್ಕೇವೇ ಅವರು ಮಾನವಜನ್ಮತಾಳಿದರೆಂದು ಅವರ ಜೀವನ ಚರಿತ್ರೆಯಿಂದಲೇ ಸ್ಫುಟವಾಗುತ್ತದೆ.

೧೭ ನೇ ಶತಮಾನದಲ್ಲಿ ಇನ್ನು ಸಂಸ್ಕೃತದಲ್ಲಿ ಗ್ರಂಥಗಳನ್ನು ರಚನಾ ಮಾಡುವರೇ ಬಹಳವಾಗಿದ್ದರು. ಇದು ಶಿಷ್ಟಸಮ್ಮತ ಎನಿಸಿ ಕೊಳ್ಳುತ್ತಿತ್ತು. ದಾಸರು ಅದನ್ನು ಲಕ್ಷಿಗೆತಾರದೇ ಗುರುಗಳಾದ ಶ್ರೀ ಪುರಂದರರಂತೆ, ಧೈರ್ಯ ಮತ್ತು ಆತ್ಮವಿಶ್ವಾಸಬಲದಿಂದ ದೇಶಿಯ ಭಾಷೆಯಾದ ಕನ್ನಡದಲ್ಲಿಯೇ ಪದ ಸುಳಾದಿ ಮುಂತಾದವುಗಳನ್ನು ರಚಿಸಿದರು. ಈ ಪ್ರಾಕೃತಭಾಷೆಯು ಅಯೋಗ್ಯವೆಂದು ತಿಳಿದ ಸಂಸ್ಕೃತ ಪಂಡಿತರ ಮನಮೆಚ್ಚುವಂತೆ ಶ್ರುತಿ ಮತ್ತು ಶ್ರೀ ವೇದವ್ಯಾಸರ ಅನೇಕ ಗ್ರಂಥಗಳ ಭಾಷ್ಯಟೀಕಾಅನುಸಾರವಾಗಿ ಸುಳಾದಿಗಳನ್ನು ಕನ್ನಡದಲ್ಲಿ ರಚಿಸಿ ಕೇವಲ ಅವುಗಳ ಮರ್ಮವನ್ನರುಹಿದವರು. ಇದರ ಮೇಲಿಂದ ಶ್ರೀ ವ್ಯಾಸದೇವರ ಇಂಗಿತಾರ್ಥಸರ್ವಜ್ಞರು, ಭಾಷ್ಯಾಕಾರರ ಸತ್ತತ್ವಗಳ ಸ್ಥಿರವಾಗಿ ಇರಿಸುವದೇ ದಾಸರ ಮುಖ್ಯಧ್ಯೇಯ.

ಜನ್ಮ ಸಾರ್ಥಕ್ಯಮಾಡಿಕೊಳ್ಳುವ ಸದಿಚ್ಛಾಉಳ್ಳ ಮಾನವರು ತಾವು ಯಾವ ನಡಾವಳಿಯಲ್ಲಿ ಇರುವದೆಂಬುದು ಸಾಧನಭಾಗ ಪದ

ಸುಳಾದಿಗಳಲ್ಲಿ ವಿವರಿಸಿರುವರು. ಅಹಿಂಸಾ ಧರ್ಮವು ಕೇವಲ ಮೂರ್ತಿ ಮಂತರಾಗಿ ದಾಸರಲ್ಲಿ ನೆಲೆಗೊಳಿಸಿರುವದು. ಅವರ ನಡೆನುಡಿ ಸರ್ವ ಕ್ರೀಯಾ ಎಷ್ಟು ಮೃದುವಾಗಿ ಸರಳವಾಗಿದೆಂಬುದು ಅವರ ವಾಣಿಯಿಂದ ಗೊತ್ತಾಗುತ್ತದೆ. ಅವುಗಳೆಲ್ಲವೂ ಉತ್ತುಮ ಮಾನನೀಯವಾಗಿ ಸದಾ ಸರ್ವಕಾಲ ಧೇಯವೆಂದು ತಿಳಿದು, ನಿರಂತರ ಕಣ್ಣೆದುರಿಗೆ ಇಡಲು ಯೋಗ್ಯವಾಗಿವೆ. ಮಾನವರ ಋಜುಮಾರ್ಗ, ಗುರುಭಕ್ತಿ, ಶುಚಿತ್ವ, ಸ್ಥೈರ್ಯ, ಆತ್ಮನಿಗ್ರಹ, ವೈರಾಗ್ಯ, ಅನಹಂಕಾರ, ವಿಷಯ ಅನಾಸಕ್ತಿ, ಏಕಾಂತಪ್ರೀಯತೆ, ಅನನ್ಯಭಕ್ತಿ, ಇದಲ್ಲದೆ ಅಧ್ಯಾತ್ಮಜ್ಞಾನ ಸಂಪಾದನೆ ಮಾಡುವ ಹೆದ್ದಾರಿಯನ್ನು ತೋರಿದ್ದಾರೆ. ಮತ್ತು ಈ ಋಜುಮಾರ್ಗ ದಲ್ಲಿ ಅಡ್ಡಾಗಿಬರುವ ಅಜ್ಞಾನಾದಿ ಅನೇಕ ಸಂಕಟಗಳನ್ನು ಪರಿಹರಿಸಿ ದ್ದಾರೆ. ಅಜ್ಞಾನ ನಿರಾಸಗೈಸಿ, ಸುಜ್ಞಾನ ಮಾರ್ಗವಾದ ಹರಿ ಸರ್ವೋ ತ್ತಮ ವಾಯು ಜೀವೋತ್ತಮ ಪಂಚಭೇದತಾರತಮ್ಯ ನಿಜ. ಜಗತ್ತು ಸತ್ಯವೆಂದು ಬಾರಿಬಾರಿಗೆ ಡಂಗುರ ಹೊಯ್ಸಿರುವರು. ಜ್ಞಾನಿವರೇಣ್ಯರು ಸುಜ್ಞಾನಪ್ರದರು.

ಇಂಥ ಮಹನೀಯರ ಗ್ರಂಥರೂಪವಾದ ಕವನಗಳನ್ನು ಒಳ್ಳೇ ರೀತಿಯಿಂದ ಅಭ್ಯಾಸಮಾಡುವದು ಮುಖ್ಯವಾಗಿದೆ.

**ದಾಸರ ಗ್ರಂಥ ಅಭ್ಯಾಸ ವಿವೇಚನೆ**ಕ್ರಮವೂ ಬಹುರೀತಿಯಾಗಿದೆ ೧) **ಪಾಠ ಚಿಕಿತ್ಸಾ,** ಸರಿಯಾಗಿರುವ ಪಾಠಗಳ ಪುಸ್ತಕದಮೇಲಿಂದ ಅಭ್ಯಾಸಮಾಡಿ ಮನನಮಾಡುವದು. ೨) **ಭಾಷಾಶಾಸ್ತ್ರಾಭ್ಯಾಸ** ದೃಷ್ಟಿ ಯಿಂದಲೂ ಅಭ್ಯಾಸ ಪ್ರಾಮುಖ್ಯವಾದದ್ದು. ಇದರಲ್ಲಿ ಮುಖ್ಯಾಂಶಗಳು ೧) ಉಚ್ಚಾರಶಾಸ್ತ್ರ (Phonology) ೨) ಶಬ್ದರೂಪಶಾಸ್ತ್ರ (Morphology) ಶಬ್ದಾರ್ಥಶಾಸ್ತ್ರ (Semanties) ಈ ಮೂರು ಭಾಷಾಶಾಸ್ತ್ರಬಲ್ಲ ತಜ್ಞರಿಂದ ತಿಳಿಯುವದು. ಇಂಥ ವಿದ್ವಾನರ ಒಂದು ಕೂಟ ಕಲೆತು ಇವುಗಳ ವಿವೇಚನದ್ವಾರಾಗ್ರಂಥ ಬರೆದು ಲೋಕೋಪಕಾರ ಮಾಡುವದು. ೩) **ಅರ್ಥಾಲಾಪನಿಕೆ** ಸರಳ ಮತ್ತು ಸುಸಂಗತವಾದ ಅರ್ಥವಿಚಾರವು ಅತ್ಯಾವಶ್ಯಕ. ೪) ಇದಾದರೂ **ಮೂಲಗ್ರಂಥ** ತುಲನಾತ್ಮಕದೃಷ್ಟಿಯಿಂದ ಮೂಲಕ್ಕೆ ವ್ಯಾಹತಿಬಾರ

ದಂತೆ ಅಭ್ಯಸಿಸುವದು. ೫) **ತುಲನಾತ್ಮಕ** ಅಭ್ಯಾಸವು ಬೇಕು, ಅಂದರೆ (Textual) ಅಭ್ಯಾಸ ಮನಸ್ಸಿಗೆ ಬಂದಂತೆ ವಿಚಾರಮಾಡದೇ ಹಿಂದಿನ ಗ್ರಂಥಕಾರರು ಏನು ಹೇಳಿರುವರು ಅದರಲ್ಲಿ ಇದರಲ್ಲಿ ವಿವೇಚನ ವೇನೆಂಬುದು ತುಲನಾತ್ಮಕದೃಷ್ಟಿ ಇರಬೇಕು. ೬) **ಐತಿಹಾಸಿಕರೀತಿ** ಅಭ್ಯಾಸವೂ ಬೇಕು. ದಾಸರ ಗ್ರಂಥಗಳು ದೇಶಿಯ ಭಾಷಾದಲ್ಲಿ ಯಾವ ಕಾಲ, ಯಾವಪರಿಸ್ಥಿತಿ ಏಕೆ ನಿರ್ಮಾಣವಾದವೆಂಬುವ ವಿಚಾರವಲ್ಲದೆ ಹಿಂದಿನ ವೇದ ಉಪನಿಷತ್ ಭಾರತ ಪುರಾಣಾದಿಗಳ ಕಥನರೂಪ ವಾಗಿರುವದೆಂಬ ವಿಶಾಲದೃಷ್ಟಿ ಬೇಕು. ೭) **ಸಾಮಾಜಿಕ ಅಭ್ಯಾಸ** ಐತಿಹಾಸಿಕ ಅನೇಕಾಂಶಗಳಿಂದ ಸಮಾನವಾಗಿರುವದು ಸಮಾಜಸ್ಥಿತಿ ಸಮಾಜರಚನಾ ಯಾವವಿಧವಾಗಿತ್ತು. ಸಮಾಜದ ಯಾವ ವರ್ಗ ದವರಿಗೋಸುಗ ಸುಗಮವಾದದ್ದು ಈ ವಿಚಾರ ದಾಸರ ಧರ್ಮಗಳು ಎಲ್ಲ ವರ್ಗದವರಿಂದಲೂ ಮಾನ್ಯವಾಗಿ, ನೀತಿಗಳು ಜಾತಿಭೇದಗಳಿಲ್ಲದೆ ಮತ್ತು ಜ್ಞಾನಭಕ್ತಿವಿರಕ್ತಿ ಎಲ್ಲ ಪಂಗಡದವರಿಗೂ, ಬೇಕಾದ ಮುಖ್ಯಾಂಶ ಗಳು ಇನ್ನು ಅನೇಕಾಂಶಗಳಿವೆ. ದಾಸಸಾಹಿತ್ಯದಲ್ಲಿ ಭಾಷಾಶಾಸ್ತ್ರವು ಅತಿ ಪ್ರಾಮುಖ್ಯವಾಗಿ ವಿಚಾರಾರ್ಹ ಅಭ್ಯಾಸಕ್ಕೆ ಯೋಗ್ಯವಾಗಿವೆ. ಇಂಥ ದಾಸ ಸಾಹಿತ್ಯ ವಿವರಿಸಿದ ದಾಸಶ್ರೇಷ್ಠರಿವರು.

ಇಂಥ ವಿಜಯದಾಸರಂತಹ ಮಹಾಸಿದ್ಧ ಪುರುಷರಲ್ಲಿ ಅಘಟನಾ ಘಟನಶಕ್ತಿಯೂ ಕಂಡುಬರುವದು. ಅತಿ ಅಮಾನುಷವಾದರೂ ಅವಿಶ್ವ ಸನೀಯವಲ್ಲ. ಅಪಮೃತ್ಯುಗಳನ್ನು ಪರಿಹರಿಸುವದೂ; ಅಭೀಷ್ಟಗಳನ್ನು ಸಲಿಸುವದೂ, ಅರಿಯದ ಶುಂಠರಿಂದ ಪರಮಾರ್ಥಗಳನ್ನು ನುಡಿಸುವದೂ ಏಕಕಾಲಗಳಲ್ಲಿ ಅನೇಕಸ್ಥಳಗಳಲ್ಲಿ ಶಿಷ್ಯರಿಂದ ಸೇವಾ ಸ್ವೀಕರಿಸುವದೂ, ಜೀವನಸ್ವರೂಪ ಅಂಶ ಆವೇಶಗಳನ್ನು ಜ್ಞಾನದೃಷ್ಟಿಯಿಂದ ತಿಳಿದು ಹೇಳುವದೂ; ಕ್ಷೇತ್ರಾಭಿಮಾನಿ ನದ್ಯಭಿಮಾನಿ ತೀರ್ಥಾಭಿಮಾನಿ ದೇವತೆ ಗಳನ್ನು ಪ್ರತ್ಯಕ್ಷ ಕಂಡು ಸ್ತೋತ್ರಮಾಡುವದೂ; ಇವೆ ಮೊದಲಾದವುಗಳು ದಾಸರ ಚರಿತ್ರೆಯಲ್ಲಿ ಅಸಂಖ್ಯಾಕವಾಗಿವೆ. ದಾಸರ ಕವನಗಳೇ, ಶಿಷ್ಯರ ಅನುಭವಗಳೇ ಸಾಕ್ಷಿಯಾಗಿವೆ.

## ದಾಸರು ದೇವತೆಗಳು ನರರಲ್ಲ

ಇಂಥ ಮಹತ್ಮ ಅವತಾರ ಪುರುಷರನ್ನು ನರರೆಂದು ತಿಳಿಯಬೇಡಿರಿ. "ನರಮಾತ್ರರಿವರೆಂದು ನೆರೆ ತಿಳಿಯದೆ ಸುಂ। ದರವಾದ ಗುಣಗಳಿಂದಲಿ ಸಿರಿವರನ ಚರಿತೆಯು ನಮಗೆ ಬಂದ ಕಂಟಕ ಬಂಧ। ಹರವೆಂದು ಮನ ದಲ್ಲಿ ನೆರೆತಿಳಿದದರಿಂದ ॥ ಪರಮ ಧನ್ಯರು ಧರಿಗೆ ಯಾದವ। ರರಸೆ ಪೊರೆ ವನು ಕರುಣದಲಿ ಭೂ। ಸುರ ಗುರುದೊರೆ ಮರುತಪೊರೆವನು। ಸುರ ವರರು ಕಾದಿಹರು ಎನಿಪರ ॥ ೨ ॥ ದಾಸರ ನೆರೆನಂಬಿರೊ ಚಲುವ ವಿಜಯದಾಸರ ನೆರೆನಂಬಿರೊ" ಎಂದು ಮೋಹನದಾಸರು ಮತ್ತು, ಗೋಪಾಲದಾಸರು ಹೇಳಿದ್ದೇನಂದರೆ "ನಾನಾಪರಿ ಕವನಗಳು ಜ್ಞಾನಿ ಸಮ್ಮತರಚಿಸಿ ಶ್ರೀನಿವಾಸನ ದಾಸಾನು ದಾಸೆಂಬಂಥ" "ವಿಜಯ ಆರಿಂದ ಆಗುವದೋ" ಮತ್ತು ಹಯವದನವಿಠ್ಠಲರು "ವರಗಳ ಬೇಡಿರೋಸು ಜನರೆಲ್ಲ। ಸಿರಿ ವಿಜಯದಾಸರ ಯಿಂದು ॥ ಈ ಪದ ೨ ನೇ ನುಡಿಯಲ್ಲಿ "ಅಂಬುಮಧ್ಯದಲಿ ಅಂಬುಜಪತ್ರ ಇದ್ದಂತೆ। ಕುಂಭಿಣಿಯೊಳು ಗ್ರಹಸ್ಥಾ ಶ್ರಮಧರಿಸಿ ॥ ಶುಂಭರನ ಉದ್ಧರಿಸಿ ಸ್ತೋತ್ರ ಭೂಷಣವಂದೆ। ಯೆಂಬಂಥ ಗುಣಭರಿತ ನೀತ ಪ್ರಖ್ಯಾತ ಮನಸೋತ ॥ ೨ ॥ ಮತ್ತು ಇವರು ಪುಟ್ಟಿದ ಪುಣ್ಯಭೂಮಿ ಇವರು ಮಾಡಿದ ಮಹತ್ಕಾರ್ಯ ನೆನಪಿನಲ್ಲಿಡುವದಾಗಿ ದೆಂದು ೩ ನೇ ನುಡಿಯಲ್ಲಿ ಹೇಳಿರುವರು. "ಧರೆಯೊಳು ತುಂಗಭದ್ರ ತೀರ **ಚಿಕ್ಕಬದರಿಯು।** ಪುರದಲ್ಲಿ ಜನಿಸಿದ ಪಾಮರರ ಆದರಿಸಿ ॥ ಪರ ಮಾತ್ಮ ಹಯವದನ ವಿಠಲದೇಯನ ಘನಚರಿತೆ ಪೇಳಿದ ಮಹಿಮನೀತ। ಸುರಳಿತ ವರದಾತ ಶ್ರೀನಿವಾಸನ್ನಜಾತ ॥ ೩ ॥ ಎಂದು ಹೇಳಿದ ಕಾರಣ–

## ಸದಾ ಸರ್ವಕಾಲ ಇವರ ಸ್ಮರಣೆ

ಅತ್ಯಾವಸ್ಯಮಾಡುವದಾಗಿ ಗೋಪಾಲದಾಸರು "ವಿಜಯರಾಯರ ನೆನೆದು ದಿಗ್ವಿಜಯಮಾಡಿರೊ। ಋಜುಮಾರ್ಗ ಪಿಡಿದಿನ್ನು ನಿಜಪುರಕೆ ಸೇರಿಪರೊ" ಎಂದು ಪಲ್ಲವಿಯಲ್ಲಿ ಹೇಳಿ ಕಾಲವಿವರವೂ ಹೇಳಿರುವರು. ಶ್ರವಣಮನನ ನಿಜ ಧ್ಯಾಸಮಾಡುವಾಗ ಇವರ ಸ್ಮರಣೆಮಾಡಿರಿ, ಕವನ ವನ್ನು ರಚಿಸುವಾಗ, ಕುಳ್ಳಿರುವಾಗ, ಜಗದೊಡೆಯನ ತತ್ವವಿಚಾರ

ಮಾಡುವಾಗ, ಪವನ ಮತದೊಳಿದ್ದು ಸದಾಚಾರ ಕರ್ಮವನು ಮಾಡು ವಾಗ, ಉತ್ಸಹದಿಂದ ಏಕಾದಶಿ ಉಪವಾಸ ಜಾಗರಮಾಡುವ ಕಾಲದಲ್ಲಿ, ಶ್ರೀಹರಿಯ ಯಾತ್ರೆ ತೀರ್ಥಗಳು ಚರಿಸುವಾಗ, ಹರಿನಾಮಕೀರ್ತನೆಗಳು ಬರೆದು ಶಿಷ್ಯರಿಗೆ ಒರೆದು ಪೇಳುವಾಗ, ಕೃಚ್ಛ್ರಚಾಂದ್ರಾಯಣಾದಿ ಪರಿ ಪರಿ ವ್ರತಗಳು ಮಾಡುವಾಗ, ಕರಕರೆಯ ಸಂಸಾರ ತೊಳಲುವಾಗ, ಅರಸುಗಳಿಂದ ಆದರಿಸಿ ಮನ್ನಣೆಕೊಳುವಾಗ, ದಾನವನು ಕೊಡುವಾಗ ತೆಗುಕೊಳ್ಳುವಾಗ, ದುರಿತಭಯಗಳು ತಡಹಿಬಿಡುವಾಗ ಶ್ರೀ ವಿಜಯ ದಾಸರ ನೆನೆಯಿರಿ. ಮತ್ತು ದ್ವೈತಾದ್ವೈತ ಪ್ರಸಂಗಗಳು ಮಾಡುವಾಗ ಶೀತ, ವಾತ, ಪಿತ್ತ ತೊಡರಿ ಉಸರಿಡುವಾಗ, ನಿಯತವಾದ ಮಂತ್ರ ಜಪಕ್ಕೆ ಕುಳ್ಳಿರುವ ಕಾಲದಲ್ಲಿ ವಾಯುನಿರೋಧಿಸಿ ಪ್ರಾಣಾಯಾಮ ಮಾಡುವಾಗ, ವರಗಳನ್ನು ಬೇಡುವಾಗ ತಾನು ವರಗಳನ್ನು ಪರರಿಗೆ ಕೊಡುವಾಗ, ಶರಣರಾದ ಶಿಷ್ಯಜನರಿಂದ ಕೈಕೊಳ್ಳುವಾಗ, ಸರ್ವಕಾಲ ದಲ್ಲಿ ಮರೆಯದೆ ಹರಿಸ್ಮೃತಿಮನದಲ್ಲಿ ಮಾಡುವಾಗ, ಪರಿಪರಿಸುಖರಸವು ಸವಿವಾಗ ಶ್ರೀ ವಿಜಯರಾಯನನ್ನು ನೆನೆಯಿರಿ ಎಂದು ಕಟ್ಟಾಜ್ಞೆ ಮಾಡಿ ದ್ದಾರೆ. ಮತ್ತು ಹೀಗೆ ನೆನೆದರೆ ಫಲವೇನು ?

## ಫಲಶ್ರುತಿ

"**ವಿ** ಎಂದು ಜಪಿಸಲು ವಿರಕುತಿ ದೊರಕುವದು |"
**ಜ** ಯನ್ನೆ ಜನನಮರಣವು ನಾಶವು
**ಯ** ಯನ್ನೆ ಎಲ್ಲದಕಿಂತ ಭಕುತ್ಯಧಿಕಿತ್ತು
**ರಾ** ಯನ್ನೆ ರಾಯರಾಯರನ ತೋರ್ಪುವದು || ೬ ||

ಮತ್ತು ಮೋಹನದಾಸರು ( ಪದ ೨೮ ಪುಟ ೨೩–೨೪ ) ವಿಜಯ ರಾಯರ ಪಾದ ಭಜಿಸಿದವಗನವರತ ವಿಜಯವಾಗುವದಕ್ಕೆ ಸಂದೇಹ ವೇಕೆ || ಎಂಬುವ ಪದ ನುಡಿ ೩ ರಲ್ಲಿ–

**ವಿ** ಯೆನಲು ವಿಮಲತೆಯು |
**ಜ** ಯೆಂದವಗ ಜಯವು |
**ಯ** ಯೆನಲು ಯಾಗಫಲವು |

**ರಾ** ಯೆನಲು ರಾಜ್ಯವು ।
**ಯ** ಯೆನಲು ಯಮಭಟರು ನೋಯಿಸರು ॥

ಇವನ ಕುಲವೂ ॥ ಈ ಯಾವ ದಕ್ಷರವ ಓಂಕಾರ ಸಹ ಪಠಿಸೆ । ಕಾಯಭವಪಿತನಬಲವೊ । ಜಾಯಾಸಮೇತ ಮೋಹನ್ನ ವಿಠಲನಪಾದ । ತೋಯಜ ಭ್ರಮರರಿವರೊ ॥ ೩ ॥ ಇಷ್ಟು ಹೇಳಿದರೂ ಸಾಲದೇ ವಿಜಯರಾಯರಲ್ಲಿ ಮಹಾ ಉತ್ಸಾಹ ಭಕುತಿಯಿಂದ ಮುಂದೆ ( ಪದ ೨೯ ಪುಟ ೨೪ ) ರಲ್ಲಿಯೂ ಪುನಃ–

**ವಿ** ಯೆಂದು ನುಡಿಯಲು ವಿಷ್ಣು ದಾಸನಾಗುವನು ।
**ಜ** ಯೆನಲು ಜನನ ಹಾನಿ ।
**ಯ** ಯೆಂದು ಕೊಂಡಾಡೆ ಯಮಭಟರು ಓಡುವರು ।
**ರಾಯ** ನೆಂದೆನಲು ಹರಿ ಕಾವ ವರವೀವ ॥ ೧ ॥

ಹೀಗೆ ವಿಜಯರಾಯ ಎಂಬುವ ನಾಮಮಂತ್ರ ಓಂಕಾರಪೂರ್ವಕ ಗುರುಗಳಿಂದ ತಿಳಿದು ಜಪಿಸುವರಿಗೆ ಮೂರು ವಿಧವಾದ ಫಲ ಹೇಳಿದರು. ಜ್ಞಾನ–ಭಕುತಿ ವಿರಕುತಿ ಪುಟ್ಟಿಸಲು ವಿಜಯರಾಯರ ಸ್ಮರಣೆಯೇ ವಿಜಯ ಮಂತ್ರವೇ ಮುಖ್ಯವಾದದುದೆಂದು ಪೇಳುತ್ತಾ ಮುಂದೆ ೨ ನೇ ನುಡಿಯಲ್ಲಿ–

" ಇವರ ಸ್ಮರಣೆಯು **ಸ್ನಾನ** ಇವರ ಸ್ಮರಣೆಯು **ಧ್ಯಾನ** ।
ಇವರ ಸ್ಮರಣೆಯು **ಅಮೃತಪಾನ** ॥
ಇವರ ಸ್ಮರಣೆಯು ಮಾಡೆಯುವತಿಗ ಕ್ಷಯವಿತ್ತ ।
**ತ್ರಿವಿಕ್ರಮನೆ** ಮುಂದೆ ನಿಲುವನಲಿವ ॥ ೨ ॥

ಎಂದು ಸ್ನಾನ, ಧ್ಯಾನ, ಮೌನ, ಜಪ, ತಪ, ಅನುಷ್ಠಾನ ಶ್ರೀ ವಿಜಯರಾಯರ ಸ್ಮರಣೆಯೊಳಗೆ ಅಡಕವಾಗಿರುವುದು. ಇಷ್ಟೇ ಅಲ್ಲ ಭಕ್ತ್ಯಾಭಿಮಾನಿಯಾದ ದ್ರೌಪದಿಗೆ ಅಕ್ಷಯಾಂಬರ ( ಜ್ಞಾನ ) ವಿತ್ತ ತ್ರಿವಿಕ್ರಮರೂಪಿಹರಿಯು ಒಲಿದು ನಿಲುವನು ನಲಿದಾಡುವನು. ಇವರ ಒಲುಮೆಯೆ ಶ್ರೀ ಹರಿಯೊಲುಮೆ ಎಂಬುದು ನಿಜ ನಿಜ. ಕಾರಣ ಸಕಲ ಕಾಲದಲ್ಲಿ ವಿಜಯರಾಯರನ್ನು ಸ್ಮರಣೆಮಾಡುವ ಕ್ರಮ. " ಹರಿಯೆ

ನಿರ್ದೋಷ ಜ್ಞಾನಾನಂದ ಪರಿಪೂರ್ಣ। **ಹರಿಯೆ** ಸರ್ವತಂತ್ರ ಸ್ವತಂತ್ರನು ॥ ಸಿರಿಅಜಭವರೆಲ್ಲ ಪರಿವಾರ ಹರಿಗೆಂದು, ಗುರುಗತ **ಗೋಪಾಲ ವಿಠಲನ್ನ** ಸ್ಮರಿಸುತ ॥ ೭ ॥ ವಿಜಯರಾಯ ನೆನೆದು ದಿಗ್ವಿಜಯಮಾಡಿರೋ ॥ ಎಂದು ವಿಜಯರಾಯರನ್ನು ಸ್ಮರಿಸುತ್ತ–

## ಪ್ರಾರ್ಥನೆ

ಶ್ರೀ ವಿಜಯಪ್ರದರಾದ ಶ್ರೀ ವಿಜಯದಾಸರನ್ನು ಹೇಗೆ ಪ್ರಾರ್ಥಿಸುವದು ಅವರಿಂದ ಏನು ಬೇಡುವದು ಗೊತ್ತಿಲ್ಲವೇನು ? ರೊಕ್ಕ ರೂಪಾಯಿ ಹಣ ಕಾಸುವೀಸ ಹೆಂಡರು ಮಕ್ಕಳು ಮನೆ ಧನಧಾನ್ಯ ಸಂಸಾರಸುಖ ಬೇಡಿದಿಷ್ಟಾರ್ಥ ಕೊಡುವರು, ಕೊಟ್ಟೇ ಕೊಡುವರು. ಆದರೆ ಮತ್ತೇನು ? ಅಲ್ಲಯ್ಯಾ ಒಬ್ಬ ರಾಜಾಧಿರಾಜನನ್ನು ಸಂದರ್ಶಿಸಿ ನನ್ನಗೆ ಎರಡು ಕಾಸುಕೊಡಯ್ಯಾ ಎಂದು ಕೇಳಲು ಮಹಾರಾಜನು ಇವನು ತಿಳಿಯದವನೆಂದು ಹಾಸ್ಯಮಾಡಿದರೂ ರಾಜ ತನಗೆ ಉಚಿತವಾದ ಮರ್ಯಾದೆ ಮಾಡುವ. ಹೆಚ್ಚಿಗೆ ಬೇಡ ೧೦ ರೂ. ಆದರೂ ಕೊಟ್ಟರೆ ಫಲವೇನು ? ಸೇದ್ಯಮಾಡಿ ಮುಖ್ಯ ಫಲವಾದ ಧಾನ್ಯವನ್ನು ಅಪೇಕ್ಷಿಸದೇ ಕಣಿಕೆ, ಸೊಪ್ಪಿ, ಹೊಟ್ಟು ( ಪಲಾಲಕುಲ ) ಅಪೇಕ್ಷಿಸಿದಂತೆ ಧಾನ್ಯದೊಡನೆ ಐಹಿಕವಾದ ಕಣಿಕೆ ಹೊಟ್ಟು ಬಂದೇಬರುವದು. ಕಾರಣ ಶ್ರೀ ಗೋಪಾಲದಾಸರು ( ಪದ ೧೮ ಪುಟ ೧೬ ) ಭಜಿಸಿ ಬದಕುನಿತ್ಯ ವಿಜಯದಾಸರ ಪಾದ। ರಜವು ಸೇವಿಸುವ ಭಾಗ್ಯನಿಜವೊ ನಿಜವೊ ॥ ಎಂದು ಪಲ್ಲವಿಯಲ್ಲಿ ಹೇಳಿ ಬೇಡಿದಿಷ್ಟಾರ್ಥಗಳನ್ನು ಕೊಡುವ ಕಾಮಧೇನು, ಕಲ್ಪವೃಕ್ಷ ಚಿಂತಾಮಣಿಗಳಿರಲು ಗ್ರಾಮಗೋವು, ಮುತ್ತಲದಗಿಡ, ಚಿಂತಾಕ ( ಹುಣಸೆ ಬೀಜ ) ಗಳು ಕೊಡಬಲ್ಲವೇ ? " ಹಲವು ಸಾಧನಮಾಡಿ ಬಳಲಬೇಡ ನೀ ನಿಲಿಸು ನಿಗಮಗಳ ಧ್ಯಾನ ನಿಜ ಮನಕೆ ॥ **ತಿಳಕೊ ಇವರೇ ನಿನಗೆ ಗತಿ** ಪೊಂದಿಪುದಕೆ। ಒಲಿವ ಗೋಪಾಲವಿಠಲ ಸಂಶಯವಿಲ್ಲಿದಕೆ ॥ ೩ ॥

ಇಂಥ ಮಹಾರಾಜಾಧಿರಾಜರಾದ ಶ್ರೀ ವಿಜಯರಾಯರನ್ನು ಐಹಿಕ ಸಂಪತ್ತು ಸುಖಾನುಭವವನ್ನು ಕನಸಿನಲ್ಲಾದರೂ ಬೇಡದೇ ಜ್ಞಾನ–ಭಕುತಿ ವಿರಕುತಿ ಹರಿಪಾದರತಿ ಬೇಡುವದೇ ಮುಖ್ಯ ಧರ್ಮವಾಗಿದೆ.

ಏಕಂದರೆ ಮೂಲದಲ್ಲಿ ಇವರು "ನಿನ್ನ ಜ್ಞಾನವಿನಾ ಇನ್ನೊಂದು ಒಲ್ಲೆನೆಂದು" ಹರಿಯನ್ನು ಪ್ರಾರ್ಥಿಸುವರು. ಮತ್ತು ಅವತಾರದಲ್ಲಿಯೂ ಸಹ ನೀನೊಲಿದಿದರಕಿಹ ಸೌಖ್ಯವೇ ರಂಗನಾನೊಲ್ಲೆ ನಾನೊಲ್ಲೆ" ಎಂದು ದಾಸರೆ ಇಹದಸೌಖ್ಯಬೇಡಿಲ್ಲ. ಇಹದಸೌಖ್ಯ ಮದಕಾರಕ ಗುರು ಹರಿಸ್ಮೃತಿ ಮರೆಸುವದು. ಕುಂತಿದೇವಿಯು ಶ್ರೀ ಕೃಷ್ಣನನ್ನು ಪ್ರಾರ್ಥಿಸಿದಂತೆ ಬಡತನವಾದ ವಿಪತ್ತೇ ಇರಲಿ ಸಂಪತ್ತು ಬೇಡ ಸಂಪತ್ತಿನಿಂದ ಹರಿ ವಿಸ್ಮೃತಿ. ಬಡತನವು ಸಜ್ಜನರಿಗೆ ಹರಿಸ್ಮರಣೆ ಕೊಟ್ಟು ರಕ್ಷಿಪುದು, ಇಹದ ಸೌಖ್ಯ ಬೇಡ ಬೇಡವೆಂದು ದಾಸರು ಶ್ರೀ ಹರಿಯನ್ನು ಪ್ರಾರ್ಥಿಸಿದಂತೆ–

ವೇಣುಗೋಪಾಲ ವಿ॥ ರ ಶಿಷ್ಯರಾದ ರಾಮಚಂದ್ರವಿಠ್ಠಲರು (ಪದ ೪೪ ಪುಟ ೩೫) ರೂಪಕತಾಳದಲ್ಲಿ "ಜೋಳದನ್ನ ವೊದಲು ಉಂಬುವಸಮಯ। ದಲ್ಲಿ ಒಂದಿದ್ದಿಲ್ಲ ಮನ ಕೇವಲಾಸಕ್ತಿಯಲಿ। ಹೋಳಿಗೆ ತುಪ್ಪ ಈಗ ಬೇಡದೆಕೊಡಲು। ವಾಲಯ ಬಂದು ಸ್ನೇಹದಿಂದ ಭೋಜನವಾಳ್ಪ ವೇಳೆ ದೊರಕಲು ಬಹು ಸುಖಿಸಿದೆ। ತಾಳದೆ ನಗೆ ಸುಖ ವೈರಾಗ್ಯವಾದ ವಾರುತಿ। ಶೀಲಜನರ ಪಾದಧೂಳಿ ಅತಿ ದೂರಾಯಿತು ಗುರುವೆ" ಹೀಗೆ ಹೋಳಿಗೆ ತುಪ್ಪದಿಂದ ಮನಸೊಕ್ಕಿ ಮದವೇರಿ ಸಜ್ಜನರ ಪಾದಧೂಳಿಸಹ ದೂರಾಗುವದು **ಸಂಪತ್ತು ಬೇಡ ಬೇಡ.** ದಾಸರೇ ನೀವು ಮುಖ್ಯ ಜ್ಞಾನೇಶ ವಿರಕ್ತೇಶ ಮುಕ್ತೇಶನಾದ ಹರಿಯನ್ನು ಜ್ಞಾನದಿಂದ ಒಲಿಸಿದಂತೆ, **ಶ್ರೀ ರಘುಪತಿ ವಿಠಲದಾಸರು** (ಪದ ೪೬ ಪುಟ ೩೮) ರಲ್ಲಿ ವಿಜಯರ ಭಾಗ್ಯವಿದು ತ್ಯಜಿಸದೆ ನಮ್ಮನು ಬಿಡದೆ ಪೊರೆವದು ಎಂದು ನಾಲ್ಕು ನುಡಿಗಳಲ್ಲಿ ಸವಿಸ್ತಾರವಾಗಿ ಮಹಿಮೆಪೇಳಿ ಕೊನೆಗೆ ೫ ನೇ ನುಡಿಯಲ್ಲಿ **"ಅಂದಣ ಕುಂದಣ ಮಂದಿರ ಬಯಸದೆ।** ನಿಂದಿರದೊಬ್ಬರ ಹಂಗಿನಲಿ। ಇಂದಿರಪತಿ ರಘುಪತಿ ವಿಠಲಗುಣ। ವೃಂದಪರಿಪೂರ್ಣನೆಂದು ಬಾಳುವದೆಲ್ಲ॥ ವಿಜಯರ ಭಾಗ್ಯವಿದೆಂದು ಪೇಳುತ್ತ ಜ್ಞಾನವೇ ಮುಖ್ಯವಾಗಿ ಕೊಡಿರೆಂದು ಮುಂದೆ (೪೭ ನೇ ಪದ ಪುಟ ೩೮) ರಲ್ಲಿ ಪ್ರಾರ್ಥಿಸಿದ್ದೇನಂದರೆ ವಿಜಯರಾಜ ಗುರುರಾಜಾಧಿರಾಜ ಮಹರಾಜ ಶಿರೋರತುನ। ತ್ಯಜಿಸದೆ ನಿಮ್ಮ ಪಾದಾಬ್ಜ ಬಿಡೆನೆಂಬೊ। ಸುಜನರ ಪಾಲಿಸಯ್ಯಾ॥ ಪಲ್ಲ॥ **ಜ್ಞಾನ ಭಕುತಿ ಕೊಡು**

ಗಾನ ( ಧ್ಯಾನ ) ಶೀಲನಮಾಡು। ಹೀನಮನವು ಕೆಡಿಸೊ। ಆನೆಂಬೊ ಅಹಂಕಾರವನ್ನೆ ತೊಲಗಿಸೊ ನಿನ್ನವರವನೆನಿಸೊ॥ ಧೇನಿಸುವಂದದಿ ಹರಿಯ ಪದಾಬ್ಜವ। ಮಾನಸದಲಿ ಸರ್ವದಾ। ಕಾಣಿಸಿಕೊಡುವನು ಜೀವನು ನಿಜವೆಂಬ ಧ್ಯಾನಮನಕೆ ಬರಲಿ॥ ಮತ್ತು **ಪುಣ್ಯಸಂಬಂಧ ಕೆಡದಿರಲಿ** ಎಂದು **ಜ್ಞಾನಭಕುತಿ ತವದಾಸಾನುದಾಸ್ಯ** ಕೊಡೆಂದು ಶ್ರೀ ರಾಮಚಂದ್ರವಿಠಲರು ( ಸುಳಾದಿ ಪುಟ ೩೫ ಮಟ್ಟತಾಳದಲ್ಲಿ) "ನಿನ್ನ ನಂಬಿದೆಗುರುವೆ **ಜ್ಞಾನಭಕುತಿ ಸಂಪೂರ್ಣ ವೈರಾಗ್ಯವನ್ನು ಕೊಟ್ಟು ಹರಿಪಾದವನ್ನ ಜದಲ್ಲಿ ಎರಕುವಮಾಡೋ**" ಎಂದು ದಾಸರೆಲ್ಲರೂ ಶ್ರೀ ವಿಜಯದಾಸರನ್ನು ಪ್ರಾರ್ಥಿಸಿದಂತೆ ಸಕಲ ಸಜ್ಜನರಿಗೂ ಜ್ಞಾನಭಕ್ತ್ಯಾದಿಗಳು ಕೊಟ್ಟು ರಕ್ಷಿಸಿರೆಂದು ದಾಸರ ಮೊರೆಹೋಗುವ.

ಕರುಣಾಳು ಶ್ರೀ ದಾಸರು, ಕನಸಿನಲ್ಲಿ ಮನಸಿನಲ್ಲಿ ನೆನಸಿದವರಿಗೆ ನೆರೆಹೊರೆಯವರಿಗೆ ತನ್ನನ್ನು ಬಿಡದೆ ಭಜಿಸುತಿಪ್ಪರಿಗೆ ಈಗಲು ಟೊಂಕ ಕಟ್ಟನಿಂತು ಸಾಕಿ ಸಲಹಿ ಜ್ಞಾನಭಕ್ತ್ಯಾದಿಗಳನ್ನು ಕೊಡುವರು. ಸಂತತ ದಾಸರ ಚರಣವನ್ನು ಮನದಲ್ಲಿಟ್ಟು ನೆನೆವ ಎನ್ನಂಥ ಮಂದಮಾನವನಿಗಾದರೂ, ಕನಸಿನಲ್ಲಿ ಮನಸಿನಲ್ಲಿ ಪೊಳೆದು ಸಕಲ ಕಾರ್ಯದಲ್ಲಿ ಸಹಾಯಕರಾಗಿ ಲೌಕಿಕ ಕಾರ್ಯವನ್ನು ಬಿಡಿಸಿ, ವಿಷಯವಿರಕ್ತಿ ಕೊಟ್ಟು ತಮ್ಮ ಸೇವಾ ತತ್ಪರರನ್ನಾಮಾಡಿ ಜ್ಞಾನ ಭಕ್ತ್ಯಾದಿಗಳನ್ನು ಕೊಟ್ಟು ಕಾಪಾಡುವದು ಈ ಮಹತ್ಕಾರ್ಯವೇ ಸಾಕ್ಷಿ ಇದು ಎನ್ನ ಅನುಭವ. ದಾಸರ ದಯ ಇಷ್ಟೆಂದು ಹೇಳಲು ಶಕ್ತಿ ಸಾಲದು.

ಶ್ರೀ ಶ್ರೀ ಪರಮಹಂಸಾದಿಅನೇಕ ಬಿರುದಾಂಕಿತ ಶ್ರೀ ಮದುತ್ತರಾದಿ ಮಠಾಧೀಶಜ್ಞಾನಿಗಳಾದ–

**ಶ್ರೀ ಶ್ರೀ ಸತ್ಯಪ್ರಮೋದ ತೀರ್ಥರು ಜೀಕನ ಪರಿವಿ ಮಹತ್ವೆ**

ಶ್ರೀ ಶ್ರೀ ಸತ್ಯಪ್ರಮೋದ ತೀರ್ಥರು ಆಶ್ರಮಾನಂತರ ದಿಗ್ವಿಜಯ ಮಾಡುತ್ತ ವಿರೋಧಿಸಂ॥ ೧೯೪೯ ಇಸವಿಯಲ್ಲಿ ಮಾನ್ವಿಗೆ ವಿಜೃಂಭಣೆಯಿಂದ ದಯಮಾಡಿಸಿ, "ಹಿಂದೆ ತಮ್ಮ ಪರಮಗುರುಗಳಿಗೆ ಗುರುಗಳಾದ **ಶ್ರೀ ಶ್ರೀ ಸತ್ಯಜ್ಞಾನ ತೀರ್ಥ ಶ್ರೀಪಾದಂಗಳವರು** ಮಾನವಿಕ್ಷೇತ್ರಸ್ಥ ಅಪರೋಕ್ಷಜ್ಞಾನಿಗಳಾದ

ಶ್ರೀ ಜಗನ್ನಾಥದಾಸರ ಗುಡಿಯಲ್ಲಿ ಚಾತುರ್ಮಾಸಕ್ಕೆ ಕುಳಿತಂತೆ" ತಾವು ಮಾನ್ವಿಯ ಶ್ರೀ ಜಗನ್ನಾಥದಾಸರ ಗುಡಿಯಲ್ಲೇ ಶ್ರೀ ರಾಮದೇವರ ಪೂಜಾದಿಗಳನ್ನು ಮಾಡಿ ಭಕ್ತರಿಗೆ ಪ್ರಸಾದವನ್ನು ಕೊಟ್ಟರು. ಮುಂದೆ ಜ್ಯೇಷ್ಠ ಶು॥ ೧೦ ದಶಿಮಿ ಗಂಗೋತ್ಪತ್ತಿದಿನ, ತುಂಗಾ ಭಾಗೀರಥಿ ಸ್ನಾನಕ್ಕೆ ಶ್ರೀ ವಿಜಯದಾಸರ ಜನನಸ್ಥಾನವಾದ ಚೀಕನಬರಿವಿಗೆ ವಿಜಯಂಗೈಸಿದರು.

ಅಲ್ಲಿಯ ಕರುಣಿಕ ಶ್ರೀನಿವಾಸರಾಯನು ಶ್ರೀ ಗುರುಗಳನ್ನು ವಿಜ್ರಂಭಣೆಯಿಂದ ಬರಮಾಡಿ ಕೊಂಡನು. ಶ್ರೀಗಳವರು ಪರಮಾನು ಗ್ರಹಿಸಿ ಇಲ್ಲಿಯೇ ಶ್ರೀಗಳವರ ಭಿಕ್ಷಾ ಆಗುವದೆಂದು ಪ್ರಾರ್ಥಿಸಿದಕ್ಕೆ, ಶ್ರೀ ಗಳವರು ಒಡಂಬಟ್ಟು ಫಲಮಂತ್ರಾಕ್ಷತೆಕೊಟ್ಟು ಅನುಗ್ರಹಿಸಿದರು. ಕರಣಿಕರ ಮನೆಯಲ್ಲಿಯೆ ಶ್ರೀ ರಾಮಚಂದ್ರದೇವರ ಬಿಡಾರವಾದಿತು. ಮಹಾಪರ್ವಣಿಕಾಲ, ಕರಣಿಕರ ಸುದೈವ.

ಶ್ರೀಗಳವರು ಸಂಪ್ರದಾಯದಂತೆ ತಮ್ಮ ದಂಡವನ್ನು ಪಿಡಿದು ಕೊಂಡು ತುಂಗಾಸ್ನಾನಕ್ಕೆ ಪೊರಟರು. ಸಂಗಡ ಸೇವಕರು ಆನೇಕ ಪಂಡಿತರುಗಳು ಭಕ್ತಜನರು ಶ್ರೀಗಳವರ ಸಂಗಡಲೇ ಪರ್ವಕಾಲ ಸ್ನಾನಕ್ಕೆ ನಡೆದರು. ಮಾರ್ಗದಲ್ಲಿ ಶ್ರೀ ಶ್ರೀಗಳವರು ಶ್ರೀ ಪಾದರಾಜರ ಅಶ್ವತ್ಥ ನೃಸಿಂಹದೇವರ ಕಟ್ಟೆ ಶ್ರೀ ವಿಜಯರಾಯರು ತಪಸ್ಸುಮಾಡಿದ ಸ್ಥಳಕ್ಕೆ ಬಂದು ಶ್ರೀ ಪಾದರಾಜವರದ ಶ್ರೀ ಲಕ್ಷ್ಮೀನೃಸಿಂಹದೇವರ ಸಂದರ್ಶನ ಮಾಡಿ ಸ್ನಾನಾರ್ಥ ತುಂಗಾಪಾತ್ರಿಯಲ್ಲಿಳಿದು ಮಂಗಳತರಳಾದ ತುಂಗೆ ಯಲ್ಲಿ ಪದ್ಧತಿಯಂತೆ ತಾವು ಸ್ನಾನಮಾಡಿ ಸಾವಿರಾರು ಜನ ಶಿಷ್ಯರಿಗೆ ದಂಡೋದಕ ಸ್ನಾನ ಮಾಡಿಸಲು ಪ್ರಾರಂಭಿಸಿದರು.

ತುಂಗಾನದಿಯಲ್ಲಿ ಸುಮಾರು ಎದೆಉದ್ದ ನೀರು ದಂಡಸ್ನಾನಮಾಡಿ ಸುವದರಲ್ಲಿಯೇ ದಂಡವು ಶ್ರೀಗಳವರ ಕೈಜಾರಿ ನದಿಯಲ್ಲಿ ಮುಳುಗಿತು. ನೀರಹರಿಯೂ ವಿಶೇಷವಿದ್ದಿಲ್ಲ. ನೀರಿನಲ್ಲಿ ದಂಡ ( ಬಿದುರಿನದು ಹಗು ರಾಗಿರುವದು ) ಮುಳುಗಿದ್ದು ಆಶ್ಚರ್ಯ? ಸೇವಕರೆಲ್ಲರು ಮುಳುಗಿ ಎಷ್ಟು ಹುಡುಕಿದರೂ ದಂಡ ಸಿಗಲಿಲ್ಲ. ಎಲ್ಲರೂ ಮಹಾ ಆಶ್ಚರ್ಯಚಕಿತರಾಗಿ ಚಿಂತೆಗೊಳಗಾದರು ಎಷ್ಟೋ ಕಾಲವಾದಿತು ದಂಡ ಸಿಗಲಿಲ್ಲ.

ಶ್ರೀ ಶ್ರೀಗಳು ಏಕಾಗ್ರ ಚಿತ್ತದಲ್ಲಿ ಶ್ರೀ ಸೀತಾ ರಾಮಚಂದ್ರ, ಶ್ರೀ ಲಕ್ಷ್ಮೀನೃಸಿಂಹದೇವರನ್ನು ಭಜಿಸುತ್ತ ಒಂದು ತಾಸು ೧॥ ತಾಸು ಪರಿಯಂತ ಸುಮ್ಮಗೆ ಕುಳಿತರು. ನಂತರ ಶ್ರೀ ಶ್ರೀಗಳವರು ಎದ್ದು ಚಿಕ್ಕ ನೈವೇದ್ಯಮಾಡುವ ರಾಜಪ್ಪನಿಗೆ ನೋಡಪ್ಪ ಅಲ್ಲೆ ನೋಡು ಹುಡುಕು ಎಂದು ಆಜ್ಞಾಪಿಸಿದರು.

ಆಗ್ಗೆ ರಾಜಪ್ಪನು ಶ್ರೀಗಳವರು ನಿರ್ದೇಶಮಾಡಿ ತೋರಿದಲ್ಲಿಯೇ ನೀರಿನಲ್ಲಿ ಮುಳುಗಿನೋಡಿದ. ಕೈಗೆ ದಂಡವು ಹತ್ತಿತು, ಬಹು ಆನಂದದಿಂದ ಮೇಲೆ ತಂದು ಶ್ರೀಗಳವರ ಹಸ್ತದಲ್ಲಿ ಅರ್ಪಿಸಿದನು. ಶ್ರೀ ಶ್ರೀಗಳವರು ಪರಮ ಆನಂದದಿಂದ ತಮ್ಮ ಕೈಯಲ್ಲಿರುವ ಬೆಳ್ಳಿಥಾಲಿಯನ್ನು ರಾಜಪ್ಪನಿಗೆ ದಾನಮಾಡಿದರು. ಜನರಿಗೆಲ್ಲ ಆನಂದವಾಯಿತು. ಪುನಃ ಸ್ನಾನಾದಿಗಳನ್ನು ಮಾಡಿಕೊಂಡರು. ४೦೦–೫೦೦ ರೂ॥ ಬ್ರಾಹ್ಮಣರಿಗೆ ದಾನಮಾಡಿದರು. ಆಹನ್ಹೀಕತೀರಿಸಿಕೊಂಡು ಅಶ್ವಥ ಶ್ರೀ ಲಕ್ಷ್ಮೀನೃಸಿಂಹದೇವರ ಸ್ಥಾನ ಬಹು ಉತ್ತಮವಾದದ್ದು, ಜ್ಞಾನಿಗಳಾದ ಶ್ರೀ ವಿಜಯದಾಸರ ಜನನವಾಗಿ ದೆಸ್ಥಳ ಮಹತ್ಮೆ ಕೊಂಡಾಡುತ್ತ ಶ್ರೀಅಶ್ವಥ್ಥ ನೃಸಿಂಹದೇವರಿಗೆ ನಮಿಸಿ, ಕುಲಕರ್ಣಿಯವರ ಮನೆಗೆ ದಿಗ್ವಿಜಯಮಾಡಿ ಪೂಜಾ ನೈವೇದ್ಯ, ಭೋಜನ ಬ್ರಾಹ್ಮಣಸಂತರ್ಪಣೆಗಳಾದವು.

ಅಂದೇ ರಾತ್ರಿ ಮಂಗಳಾರತಿ ಆದನಂತರ ಈ ಸ್ಥಾನದಲ್ಲಿ ಶ್ರೀ ವಿಜಯದಾಸರ ಜನನವಾಗಿದೆ ತಪಸ್ಸು ಗೈದಿರುವರು. ನಾವೂ ಈ ಸ್ಥಾನದಲ್ಲಿಯೇ ಈ ವರ್ಷ ಚಾತುರ್ಮಾಸಕ್ಕೆ ಕುಳಿತುಕೊಳ್ಳುವೆವೆಂದು ಶ್ರೀನಿವಾಸರಾಯ ಕರಣಿಕರಿಗೆ ಆಜ್ಞಾಮಾಡಿದರು.

ಮರುದಿನ ಜೇಷ್ಠ ಶು॥ ಏಕಾದಶಿ ದ್ವಾದಶಿ ಮೇಲಗಿರಿದಾಸರ ಪ್ರಾರ್ಥನೆಯಂತೆ ಶ್ರೀ ವಿಜಯದಾಸರ ಜನನಸ್ಥಾನವಾದ ಅವರ ಮನೆಯಲ್ಲೆ ಶ್ರೀ ಸೀತಾರಾಮಚಂದ್ರದೇವರ ಪೂಜಾ ಭಿಕ್ಷಾದಿಗಳನ್ನು ತೀರಿಸಿಕೊಂಡು ಎಲ್ಲ ಭಕ್ತರುಗಳಿಗೆ ಫಲ ಮಂತ್ರಾಕ್ಷತೆಗಳನ್ನು ಕೊಟ್ಟು, ಪುನಃ ನಾವು ಇಲ್ಲಿಯೇ ಈ ವರ್ಷ ಚಾತುರ್ಮಾಸಕ್ಕೆ ಕುಳ್ಳಿರುವೆವು. ಎಲ್ಲ ಸಂಭಾರಗಳನ್ನು ಸಿದ್ಧಮಾಡಿರೆಂದು ಆಜ್ಞಾಪಿಸಿ ಮುಂದೆ ದಿಗ್ವಿಜಯ ಬೆಳಸಿದರು.

ಚೀಕನಬರಿವಿಯ ಭಕ್ತವೃಂದಕ್ಕೆಲ್ಲ ಆನಂದ. ಚಿಕ್ಕಹಳ್ಳಿಯಾದರೂ ಶ್ರೀಗಳವರು ಅನುಗ್ರಹಿಸಿ ಚಾತುರ್ಮಾಸಕ್ಕೆ ಕುಳ್ಳಿರುವರೆಂದು ಬ್ರಾಹ್ಮಣರೂ ಎಷ್ಟೋ ಜನ ಇತರೇ ಜನರು ಸಹ ತಮ್ಮ ಮನೆಗಳನ್ನು ಖಾಲಿ ಮಾಡಿ ಶಿಷ್ಯವೃಂದಕ್ಕೆ ಇಳಿಯಲು ಸೌಕರ್ಯಮಾಡಿಕೊಟ್ಟರು. ಚೀಕನ ಬರಿವಿ ಮಾನವಿ ಶಿಷ್ಯವೃಂದವೆಲ್ಲ ಸಂಭಾರಗಳ ಸಿದ್ಧತೆಯಲ್ಲಿ ತೊಡಗಿದರು. ಮಠದಿಂದಲೂ ಯೋಗ್ಯವ್ಯವಸ್ಥೆಯಾದಿತು.

ಮುಂದೆ ೧೫ ದಿನ ಶ್ರೀ ಶ್ರೀಗಳವರು ಸುತ್ತಲ ಪ್ರಾಂತದಲ್ಲಿ ದಿಗ್ವಿಜಯಮಾಡುತ್ತ ಚಾತುರ್ಮಾಸ್ಯಸಂಕಲ್ಪ ಸುಕಾಲಕ್ಕೆ ಶ್ರೀ ಶ್ರೀಗಳವರು ಚೀಕನಬರಿವಿಗೆ ದಿಗ್ವಿಜಗೈಸಿದರು. ಶ್ರೀಗಳವರನ್ನು ಎದಿರುಗೊಂಡು ವಾದ್ಯ ವೈಭವಗಳೊಡನೆ ಸಮಸ್ತ ಭಕ್ತವೃಂದವೂ ಬರಮಾಡಿಕೊಂಡರು. ಶ್ರೀಗಳವರು ಚಾತುರ್ಮಾಸ್ಯ ಸಂಕಲ್ಪಕ್ಕೆ ಕುಳಿತರು. ನಿತ್ಯ ಸ್ನಾನಾನ್ಹೀಕ ಪಾಠ ಪ್ರವಚನ ಪೂಜಾದಿಗಳು ನಡೆದವು. ನಿತ್ಯ ಶ್ರೀ ಶ್ರೀಗಳವರು ಮೋಲಗಿರಿದಾಸರಿಂದ ಶ್ರೀ ವಿಜಯದಾಸರ ಪದ ಸಳಾದಿಗಳನ್ನು ಕೇಳಿ ಆನಂದ ಪಡುತ್ತಲಿರುವರು. ಸುಧಾಧಿ ಗ್ರಂಥದ ಮಂಗಳವೂ ಆಯಿತು. ಚಾತುರ್ಮಾಸ್ಯ ಸಂಕಲ್ಪವೂ ಮುಗಿಯಿತು. ಶ್ರೀ ಶ್ರೀಗಳವರ ಚಾತುರ್ಮಾಸ್ಯ ಸಂಕಲ್ಪ ನಿಮಿತ್ಯ ದೇಶದೇಶದಿಂದ ಸಾವಿರಾರು ಜನರು ಬಂದು ಶ್ರೀ ಸ್ವಾಮಿಗಳ ಸಂದರ್ಶನ ತೀರ್ಥಪ್ರಸಾದ ದ್ವಾರಾ ಶ್ರೀ ವಿಜಯದಾಸರ ಮಹಾಸ್ಥಾನ ಅಶ್ವತ್ಥನೃಸಿಂಹದೇವರ ದರ್ಶನ ಮಾಡಿ ಪುನೀತರಾದರು. ವಿಜಯದಾಸರ ಸ್ಥಾನ ಮಹಿಮೆಯು ಇಂಥದು. ಜ್ಞಾನಿಗಳ ಮಹಿಮೆ ಜ್ಞಾನಿಗಳೇ ಬಲ್ಲರು ಅಜ್ಞರಿಂದರಿಯಲಸಾಧ್ಯ.

ದೇವತೆಗಳು ನಾಲ್ಕೂ ವರ್ಣಾಶ್ರಾಮಉಳ್ಳವರು ಎಂಬ ಶ್ರೀ ಸರ್ವಜ್ಞರ ವಚನವನ್ನು ಮರೆಯಬೇಡಿರಿ. ಗ್ರಹಸ್ಥಾಶ್ರಮಿಗಳಾದ ದಾಸರು ಅಪರೋಕ್ಷಜ್ಞಾನಿಗಳು ಭೃಗುಋಷಿಗಳ ಅವತಾರು. ಇವರೇ ಸಕಲರಿಗೂ ಜ್ಞಾನಪ್ರದರು ಎಂದ ಮೇಲೆ ಸಕಲ ವರ್ಣಾಶ್ರಮದವರಿಂದಲೂ ಮಾನ್ಯರಾದ ಮಹತ್ಮರು.

ಇಷ್ಟೇ ಅಲ್ಲ ಇನ್ನು ಅನೇಕ ಭಕ್ತರಿಗೆ ಅನೇಕ ಮಹಿಮೆ ತೋರಿರುವರು. ಈಗಲು ತೋರುತ್ತಿರುವರು.

ಪಂಡಿತವರರಾದಾಗ್ಯೂ ದಾಸರಾಯರಲ್ಲಿ ದಾಸರ ಕೃತಿಗಳಲ್ಲಿ ನಿಸ್ಸೀಮ ಭಕ್ತಿಯುಳ್ಳ ಶ್ರೀ ಮ. ಶಾ. ಸ. **ಜಾಲಿಹಾಳ ಶ್ರೀನಿವಾಚಾರ್ಯರು** ದಾಸರ ಆಜ್ಞೆಯಮೇರೆಗೆ ೧೯ಳಳ ಇಸವಿಯಲ್ಲಿ ಶ್ರೀ ವಿಜಯದಾಸರ ಕಟ್ಟಿ, ಚಿಪ್ಪಗಿರಿಗೆ ಪೋಗಿ ದಾಸರ ಸಂದರ್ಶನ ಮಾಡಿಕೊಂಡರು.

ಮತ್ತು ಸಂಸಾರ ಕ್ಲೇಶವನ್ನು ಕಳೆದು ಜ್ಞಾನ ಭಕ್ತ್ಯಾದಿಗಳನ್ನು ಕೊಡಿರೆಂದು ಶ್ರೀ ವಿಜಯದಾಸರ ಸ್ತೋತ್ರವನ್ನು ಸಂಸ್ಕೃತದಲ್ಲಿಯೇ ರಚಿಸಿರುವರು.

ಪದ ರಾಗ ಕಾಂಬೋದಿ ಝಂಪಿತಾಳ

ವಿಜಯದಾಸಾರ್ಯ ತವಪಾದ ಯುಗಲಮ್ ।
ವಿಜಯಾಯಭುವಿ ಸದಾ ಪ್ರಣಮಾಮಿ ವಿಮಲಮಂ ॥ ಪಲ್ಲ ॥
ಸಂಸಾರತಾಪನಿರ್ವಿಣ್ಣ ಮಾನಸ ಮಸ್ಯ ।
ಕಂಸಾರಿ ಪಾದಯುಗಲಂ ಪ್ರಾಪಯ ॥
ಶಂಶಾಮಿತೇಪಾದಪಾಂ ಸುಮಸ್ತಕಮಣೀನ್ ।
ಹಂಸಾದಿರೂಪ ಸುರಿರಂಸಾಸ್ಪದಂತ್ವಾಂ ॥ ೧ ॥

ಬಹುಷು ಜನ್ಮಸುಭ್ರಮಿತ ಚಕ್ರವದ್ಬಹುಭ್ರಮುನ್ ।
ನಹಿಯಾತವಾನ್ನೃಹರಿ ಪಾದಕಮಲಮ್ ॥
ಆಹತ್ಯಪಾಪಾನಿ ಪಾಪಿನಃ ಪರಪುರುಷ
ಶ್ರೀ ಹರೇಃ ಪ್ರೀತಿಪಾತ್ರತ್ವಮಸಿ ಪಾಹಿಮಾಮ್ ॥ ೨ ॥

ಕೈಂಕರ್ಯಬುದ್ಧ್ಯೈವ ಯಾತೋಸ್ಮಿ ತವಸಂವಿಧೆ ।
ಕಿಂಕರಂಕುರುಮಾಂಚ ಪಾಪಿನಂ ಶೀಘ್ರಂ ॥
ಪಂಕಂನಿರಸ್ಯ ಹಯವದನ ವ್ಯಾಸಪದ ।
ಪಂಕಜೆನಿಃಶಂಕ **ಮಂಕುರಯ ಭಕ್ತಿಮ್** ॥

ಎಂದು ಶ್ರೀ ವಿಜಯದಾಸರನ್ನು ಸ್ತೋತ್ರಗೈದಿರುವರು. ಇವರಿಗೆ ದಾಸರ ಮಹಿಮೆ ಚನ್ನಾಗಿ ತಿಳಿದಕಾರಣದಿಂದ ಮಹಾಪಂಡಿತಶ್ರೇಷ್ಠ ರಾದರೂ, ನಾವು ಪಂಡಿತರೆಂಬೋ ಅಹಂಕಾರವನ್ನು ತಾಳದೇ ತಮ್ಮ ದಾಸನೆನಿಸಿ ಶ್ರೀ ಹರಿಯಲ್ಲಿ ಜ್ಞಾನ ಭಕ್ತ್ಯಾದಿಗಳನ್ನು ದಯಪಾಲಿಸಿರೆಂದು ಪ್ರಾರ್ಥಿಸಿದ್ದಾರೆ.

ಶಾಸ್ತ್ರಪಾಂಡಿತ್ಯಕ್ಕೆ ತಕ್ಕ ಅನುಭವಜ್ಞಾನವೂ, ವಿನಯವೂ, ಭೂತದಯೆಯೂ ಮಹತ್ಮರಾದ ಜ್ಞಾನಿಗಳಲ್ಲಿ ಭಕ್ತಿಯೂ ಪೂರ್ವಜನ್ಮದ ಪುಣ್ಯದಿಂದ ಇವರ ಪಿತೃಗಳಾದ ಶ್ರೀ ಸಾತ್ವಿಕ ಆಚಾರ್ಯರ ಅನುಗ್ರಹ ದಿಂದಲೇ ಇವರಿಗೆ ಲಭಿಸಿದೆಂದು ಗಟ್ಟಿಯಾಗಿ ಹೇಳಬಹುದು. ಇತರ ಪಂಡಿತರಿಗೆ ಈ ಸುಲಭ ಋಜುಮಾರ್ಗ ಋಜುಜ್ಞಾನ ಲಭಿಸದು ದುರ್ಲಭ.

ಕಾರಣ ಶಿಷ್ಟ ಸಂಪ್ರಾಯದಂತೆ ನಿರ್ಮಾತ್ಸರ್ಯದಿಂದ ಜ್ಞಾನಿಗಳ ಪಾದಕೆರಗಿ ಪ್ರತಿನಿತ್ಯದಲ್ಲಿಯೂ, ಶ್ರೀ ವಿಜಯರಾಯರ ಭಜನೆ ಮಾಡು ವದು, ಅದರಲ್ಲಿ ಪ್ರಾಮುಖ್ಯವಾಗಿ ಶ್ರೀ ಗೋಪಾಲದಾಸರು ಮಾಡಿದ ಕರುಣಾಕವಚಸ್ತೋತ್ರ (ಪದ ೨೦) ಶ್ರೀ ವ್ಯಾಸವಿಠಲರು ರಚಿಸಿದ ಸ್ಮರಿಸಿ ಬದುಕಿರೋ ದಿವ್ಯಚರಣ (ಪದ೪೦) ಶ್ರೀರಘುಪತಿವಿರದು, ವಿಜಯರಾಯ ಮಹರಾಜಾಧಿರಾಜ (ಪದ೪೭) ಈಮೂರು ಸ್ತೋತ್ರಗಳನ್ನು ಬಿಡದೆ ಪಠಿಸಿ ಜ್ಞಾನ ಭಕ್ತಿ ವಿರಕ್ತಿಗಳನ್ನು ಕೊಡಿರೆಂದು ಪ್ರಾರ್ಥಿಸುವದು ಅತ್ಯಾವಸ್ಯ ವಾದುದೆಂದು ಬಿನ್ನೈಸುತ್ತೇನೆ.

ಕೊನೆಗೆ ನಮ್ಮ ಪ್ರಾಣೇಶದಾಸರು ರಚಿಸಿದ "ವಿಜಯರಾಯರಂಘ್ರಿ ಜಲಜವ ಭಜಿಸಿ ಜನರು ತಡೆಯದಲೆ ಜವ" ಎಂಬ ಪಲ್ಲವಿಯನ್ನು ಪಠಿಸಿ ಅಂದು ಸ್ವಪ್ನದಲ್ಲಿ ಶ್ರೀ ವಿಜಯದಾಸರನ್ನು ಅರಸಿ ಕೂಗಿದಂತೆ ಇಂದು ಪುನಃ ವೈಕುಂಠಭೂಭಾಗವರೆಗೆ ಚರಿಸಿ ಶ್ರೀ ಹರಿಯನ್ನು ನುತಿಗೈವ ಶ್ರೀ ಭೃಗುಋಷಿಗಳ ಅಂಶಾವತಾರಿಗಳಾದ ಶ್ರೀ ವಿಜಯದಾಸರ ಪಾದ ವನ್ನು ಗಟ್ಟಿಯಾಗಿ ಭಕ್ತಿಪಾಶದಿಂದ ಕೊರಳಿಗೆ ಕಟ್ಟಿಕೊಂಡು ಆನಂದ ದಿಂದ ಹಾರಿ ಚೀರುತ್ತ ವೈಕುಂಠವರೆಗೆ ಧ್ವನಿಮುಟ್ಟುವಂತೆ

" ಶ್ರೀ ವಿಜಯದಾಸರೇ ಶ್ರೀ ವಿಜಯದಾಸರೇ " ರಕ್ಷಿಸಿ ಕಾಪಾಡಿರೆಂದು ಉಚ್ಚೈಸ್ವರದಿಂದ ಕೂಗುತ್ತ.

" ವಿಜಯರಾಜ ಗುರುರಾಜಾಧಿರಾಜ | ಗುರುರಾಜಾಧಿರಾಜ | ಮಹ ರಾಜ ಶಿರೋರತುನ ತ್ಯಜಿಸದೆ ನಿಮ್ಮ ಪಾದಾಬ್ಜವ ಬಿಡೆನೆಂಬ ಸುಜನರಪಾಲಿಸಯ್ಯಾ" ಎಂದು ಹೇಳುತ್ತ, ವಿಜಯದಾಸರ ಹೃದ್ಗುಹಾವಾಸ ಮಧ್ವಾಂತರ್ಗತ ವಿಜಯವಿಠಲಾತ್ಮಕ ಶ್ರೀ ರುಕ್ಮಿಣೀ ಸತ್ಯಾಸಮೇತ ನಾದ ಶ್ರೀ ಕೃಷ್ಣನ ಅಡಿದಾವರೆಗಳಿಗೆ ಚರಿತ್ರಾತ್ಮಕಸವನ ಅರ್ಪಿಸುವ.

" ಶ್ರೀ ಮಧ್ವೇಶ ಶ್ರೀ ಕೃಷ್ಣಾರ್ಪಣ ಮಸ್ತು "

---

# ಪರಿಶಿಷ್ಟ

೧) ಮೋಹನದಾಸರ ಸಂತತಿ ಪೀಳಿಗೆ.

೨) ಮುಖ್ಯಮುಖ್ಯ ದಾಸಾರ್ಯರ ಪುಣ್ಯ ದಿನ, ಆರಾಧನಾ ಅವಶ್ಯ ಮಾಡುವದು.

೩) ಅಂಕಿತಪ್ರದಾನ ಐತಿಹಾಸಿಕ ಕೆಲವು ಪದಗಳು ನೆನಪಿಗೋಸುಗ.

---

‖ ಶ್ರೀ ಗುರುರಾಜೋ ವಿಜಯತೆ ‖

೧ ವಿಜಯದಾಸರ ಸಾಕಮಕ್ಕಳ ಪೀಳಿಗೆ
|
೨ ಮೋಹನದಾಸರು
|
೩ ರಾಘವೇಂದ್ರದಾಸರು
|
೪ ವೆಂಕೋಬದಾಸರು

೧ —
೫ ರಾಘವೇಂದ್ರದಾಸರು
- ೧ — ೯ ಮೋಹನದಾಸರು
  - ೧೧ ವೆಂಕೋಬದಾಸರು
    - ೧ — ೧೨ ರಾಘವೇಂದ್ರದಾಸರು
      - ೧೮ ಉಡುಪಿ ಕೃಷ್ಣದಾಸರು ೧
      - ೧೯ ಇನ್ನೊಬ್ಬರು
    - ೨ — ೧೩ ಮಂಗದಾಸರು (ಇದ್ದಾರೆ)
- ೨ — ೧೦ ಶೇಷಗಿರಿ ದಾಸರು

೨ —
೬ ಶ್ರೀನಿವಾಸದಾಸರು
- ನರಸಮ್ಮ

೩ —
೭ ಗುರುರಾಜದಾಸರು
- ೧೦ ಶೇಷಗಿರಿದಾಸರು ದತ್ತಕ
  - ೧೧ ಕೃಷ್ಣದಾಸರು (ಇದ್ದಾರೆ)
    - ೧೪ ವೆಂಕೋಬದಾಸರು (ಹೆಂಡತಿ ಕಮಲಮ್ಮ) ೧
    - ೧೫ ಶ್ರೀನಿವಾಸದಾಸರು ೨
    - ೧೬ ಹನುಮದ್ದಾಸರು ೩
    - ೧೭ ಶೇಷಗಿರಿದಾಸರು ೪

೪ —
೮ ದಾಸಪ್ಪದಾಸರು
- ೦

ದಾಸರ ಸಂಪ್ರದಾಯದಂತೆ ಅಪರೋಕ್ಷಜ್ಞಾನಿಗಳಾದ ಕೆಲವು **ಮುಖ್ಯ ದಾಸರ ಪುಣ್ಯದಿನಗಳು** ಅತ್ಯಾವಶ್ಯ ಆಚರಿಸತಕ್ಕದ್ದು.

೧. ಶ್ರೀ ಪಾದರಾಜರು=ರಂಗವಿಠಲರು=ಜೇಷ್ಠ ಶು|| ೧೪.
೨. ಶ್ರೀ ವ್ಯಾಸರಾಜರು=ಶ್ರೀ ಕೃಷ್ಣ=ಫಾಲ್ಗುಣ ಬ|| ೪.
೩. ಶ್ರೀ ಸ್ವಾದಿ ಗುರುರಾಜರು=ಹಯವದನ=ಫಾಲ್ಗುಣ ವದಿ, ೩.
೪. ಶ್ರೀ ಪುರಂದರದಾಸರು=ಪುಷ್ಯವದಿ ಅಮಾವಾಸ್ಯ.
೫. ಶ್ರೀ ವಿಜಯದಾಸರು=ಕಾರ್ತೀಕ ಶು|| ೧೦.
೬. ಶ್ರೀ ಗೋಪಾಲದಾಸರು=ಪುಷ್ಯವದಿ (೮).
೭. ಶ್ರೀ ವೇಣುಗೋಪಾಲ ವಿ|| =ವೈಶಾಖ ಶು|| ೨.
೮. ಶ್ರೀ ಮೋಹನದಾಸರು=ಜೇಷ್ಠ ಶು|| ೬.
೯. ಶ್ರೀ ಪ್ರಸನ್ ವೆಂಕಟಕೃಷ್ಣ=ಭಾದ್ರಪದ ಶು|| ೧೨.
೧೦. ಶ್ರೀ ವ್ಯಾಸತತ್ವಜ್ಞರು<br>ವಾಸುದೇವಿಠಲರು } =ಶ್ರಾವಣ ವದಿ (೮).
೧೧. ಬ್ಯಾಗವಾಟ ನೃಸಿಂಹ ವಿ||<br>ಜಗನ್ನಾಥದಾಸರ ತಂದೆಗಳು } ಮಾರ್ಗಶಿರ ಬ|| ೬.
೧೨. ಶ್ರೀ ಜಗನ್ನಾಥದಾಸರು=ಭಾದ್ರಪದ ಶು|| ೯.
೧೩. ಶ್ರೀ ಪ್ರಾಣೇಶವಿಠಲರು=ಆಶ್ವೀಜ ಶು|| ೭.
೧೪. ಶ್ರೀ ಗುರು ಪ್ರಾಣೇಶವಿಠಲರು=ಮಾಘ ಬಹುಳ ಅಮಾವಾಸ್ಯ.
೧೫. ಶ್ರೀ ಗುರು ಶ್ರೀಶ ವಿಠಲರು=ಮಾರ್ಗಶಿರ ಬಹುಳ ಅಮಾವಾಸ್ಯ.
೧೬. ತಂದೆ ಶ್ರೀ ಪತಿ ವಿ|| ಪುಷ್ಯ ಶು|| ೨
೧೭. ಶ್ರೀ ಶ್ರೀಶಪ್ರಾಣೇಶ ವಿಠಲರು=ಭಾದ್ರಪದ ಶು|| ೮.
೧೮. ಶ್ರೀ ಗುರು ವಿಜಯವಿಠಲರು<br>ಮೊದಕಲ್ ಶೇಷದಾಸರು } ವೈಶಾಖ ಶು|| ೮.
೧೯. ವಿಜಯ ರಾಮಚಂದ್ರವಿಠ್ಠಲರು=ವೈಶಾಖ ಶು|| ೩.
೨೦. ಜಯೇಶವಿಠಲರು=ವೈಶಾಖ ವ|| ೩.
೨೧. ಗುರು ಜಗನ್ನಾಥವಿಠ್ಠಲರು=ಆಶ್ವೀಜ ಬಹುಳ ಪ್ರತಿಪದಾ.

ಈ ಎಲ್ಲ ಅಪರೋಕ್ಷಜ್ಞಾನಿಗಳ ಪುಣ್ಯದಿನಗಳು ಪುಣ್ಯಕರವಾದವು ಪದ ಪದ್ಯಗಳ ಆಧಾರಮೇಲಿಂದ ಸಜ್ಜನರ ಆಚರಣೆಗೋಸುಗ ನೆನಪಿಗಾಗಿ ಕೊಡಲಾಗಿದೆ. ದಾಸರ ಪ್ರೀತಿಯೇ ಮಧ್ವೇಶನಿಗೆ ಬಹು ಪ್ರೀತಿ.

—ಶ್ರೀ ಗುರು ಮಧ್ವೇಶ ಕೃಷ್ಣಾರ್ಪಿತವು

## ಕೆಲವು ಅಂಕಿತಪ್ರದಾನ ಪದಗಳು

ಶ್ರೀ ಗೋಪಾಲದಾಸರು ತಮ್ಮ ಶಿಷ್ಯರಾದ ಗೋವಿಂದವಿಠ್ಠಲರಿಗೆ ಅಂಕಿತಪ್ರದಾನ–ದಪ

ಪದ ೧ ರಾಗ ಕಲ್ಲ್ಯಾಣಿ ಝಂಪಿ ತಾಳ

ಗೋವಿಂದವಿಠಲ ನಿನ್ನ ವಂದಿಸುವೆ ಸ್ವಾಮಿ। ನೀವಲಿದು ರಕ್ಷಿಸುವದೂ। ಜೀವಿ ಇವ ಬಹುಕಾಲ ಸಹವಾಸದವ ನಿನ್ನ। ಸೇವಿಯೊಳಗ ಇಟ್ಟು ಕಾವುವದು ನಿರುತಾ ‖ ಪಲ್ಲ ‖ ಆವ ಈ ಯುಗದಲ್ಲಿ ನಿನ್ನ ವಿಷಯಾರಾಗಿ। ಈ ವಸುಜನರು ಸ್ವಲ್ಪರೂ। ತಾವು ವ್ಯಾಪಿಸಿ ಇಹ್ಯರು ಅಸುರರೆ ಬಹುಳಾಗಿ। ಆವಾವ ಸ್ಥಳಗಳಲ್ಲಿ ‖ ನೀವರವನು ಕಲಿಗೆ ಇತ್ತಕಾರಣ ಉಪ। ಜೀವ್ಯರದ್ವ್ಯಾಪಾರಾ। ಈ ವಿಧದಲಿ ತಿಳಿದು ನಿನ್ನ ಹುಡುಕುತಲಿನ್ನು। ಜೀವಿಸಾತ್ವಿಕನು ಮೊರೆಇಡಲು ಬಿನ್ನೈಸಿದನೊ ‖ ೧ ‖ ಏನು ಸಾಧನವಿಲ್ಲ ಖೂನವನು ಕಂಡಿನೊ। ನೀನು ವಂದಿಸಿದೆಂದಡೆ। ಜ್ಞಾನ ಭಕುತಿಉಳ್ಳ ಜ್ಞಾನಿಗಳಲ್ಲಿವಗ। ನಾನು ಕಂಡೆನು ಭಕುತಿಯು ‖ ಕ್ಷೋಣಿಯಲಿ ಭಕುತಿ ನಿನ್ನಲಿ ಪುಟ್ಟಲಿಬಹುದು। ಜ್ಞಾನಿಗಳಲಿ ದುರ್ಲಭ। ನೀನು ವೊಲಿವುವಆವಗ ನಾನಾವರಲಿ ಭಕುತೀವೆ। ನಾನಾ ಸಾಧನಫಲವಿದೇ ನೋಡಾ ‖ ೨ ‖ ಪ್ರಾರ್ಥಿಸುವೆ ನಾನಿನ್ನ ಪ್ರೇರಣೆಯ ಅನುಸಾರ। ಕೀರ್ತಿ ನಿನ್ನದು ಜಗದೊಳೂ। ಪಾತ್ರ ಇವನೆಂದು ನಿನಚಿತ್ತದಲ್ಲಿ ಇತ್ತೇ। ಸಾರ್ಥಕವಮಾಡುಬಿನ್ನಾ ‖ ಕೀರ್ತನೆಯ ಮಾಡಿಸು ನಿನ್ನ ಪರವಾಗಿ ನಿಜ। ಸ್ಫೂರ್ತಿ ಚನ್ನಾಗಿ ಇತ್ತೂ। ಪಾರ್ಥಸಖರಂಗ ಗೋಪಾಲವಿಠಲ ಶ್ರುತಿ। ಶಾಸ್ತ್ರಾರ್ಥವನುಸಾರ ಪ್ರಾಪ್ತಿನೀನಾಗಿವಗ ‖ ೩ ‖ ಶ್ರೀ ಮಧ್ವೇಶಾರ್ಪಿತ

ವೇಣು ಗೋಪಾಲವಿಠಲರು ( ಕಲ್ಲೂರು ಸುಬ್ಬಣದಾಸರಿಗೆ) ವ್ಯಾಸವಿಠ್ಠಲರಿಗೆ ಅಂಕಿತಪ್ರದಾನ ಪದ.

ಪದ ೨ ರಾಗ ಕಾಂಬೋದಿ ಝಂಪಿತಾಳ

ಶ್ರೀ ವ್ಯಾಸವಿಠ್ಠಲ ಆಶ್ರಿತ ಜನರ ಕಲ್ಪತರು । ನೀ ಪೊದಗಿ ಪಾಲಿಸುವದೊ । ಭಾವಶುದ್ಧದಿ ನಿನ್ನ ಭಜಿಸಿ ಸುಖಿಸುವನರನ ಕೋವಿದರ ಸಂಗಸಹಿತಾತ್ವರಿತಾ ॥ ಪಲ್ಲ ॥ ಶ್ರೀ ಗುರುಗಳಚರಣ ರಾಗಪೂರಿತ ಪೂಜೆ । ಯೋಗಮನದಲಿನೆಸಗಲೀ । ಆಗಮಾರ್ಥಗಳೆಲ್ಲಾ ಅತಿ ಶೀಘ್ರಬುದ್ಧಿಗೆ । ಸಾಗಿ ವಿನಯದಿ ವೊದಗಲಿ ॥ ಭಾಗವತರವ್ಯಾಳದಲ್ಲಿ ಜಾಗರೂಕದಿ ದುಷ್ಟ । ಭೋಗಗಳ ನೀಡ್ಯಾಡಲೀ । ನಾಗಾರಿವಾಹನನ ನಮ್ರದಲಿ ಅರ್ಚಿಸುತ ಹೇಗುಣಗತಸ್ವಾಮಿ । ನೀಗತಿಎಂದೆನಲಿ ॥ ೧ ॥ ವಾತಾತ್ಮಜನ ಮತದ ಶ್ರೀ ತತ್ವಗಳು ಅತೀ । ಘಾತತೀವ್ರದಿ ಆಗಲಿ । ಪಾತಕಿಗಳೊಂದು ಮಾತಿನಿಂದಲಿ ಸೋತು ಭೀತಿಪೂರಿತರಾಗಲಿ ॥ ಜ್ಯೋತಿ ಅತಿ ಪೊಳದಂತೆ ಚಿತ್ತದಲಿ ನೀಪೊಳದು । ಖ್ಯಾತಿ ಕೇವಲವಾಗಲೀ । ಪೋತನೆಂದು ಸುರವ್ರಾತಸತ್ವರನಿನ್ನ । ಪ್ರೀತಿ ಬಲು ವಿಧವಾಗಿ ತಾತ ಹೇಸಲಹಲಿ ॥ ೨ ॥ ಕ್ಷೋಣಿಸುರರೆಲ್ಲರು ಪಾಣಿಯನು ಪಿಡಿದುದಯ । ವೇಣು ಮೇಣನೆ ಮಾಡಲಿ । ವಾಣಿಯುರಸನವಿಡಿದು । ಸ್ಥಾಣಾಂತತರತವು । ಶ್ರೇಣಿ ಚಿತ್ತಕೆ ಯೆರಿಯಲಿ ॥ ಕಾಣುವದ್ರವ್ಯದಲಿ ಸುರಸಿರಿಸಹಿತ ನಿನ್ನ । ಮಾಣದಲೆ ಸ್ಮರಿಸುತಿರಲಿ । **ವೇಣು ಗೋಪಾಲ** ವಿಠ್ಠಲ ಚಿತ್ತ ನಿನ್ನಯಾ । ರಾಣಿ ಲಕುಮಿಯ ಸಹಿತ ರಾಜ್ಯದೊಳು ಮೆರಸಲಿ ॥ ೩ ॥

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಿತವು.

(ಕಲ್ಲೂರು ಸುಬ್ಬಣದಾಸರು) ವ್ಯಾಸವಿಠ್ಠಲರು ತಮ್ಮ ಶಿಷ್ಯರಾದ, ರಘುಪತಿ ವಿಠ್ಠಲರಿಗೆ ಅಂಕಿತಪ್ರದಾನ ಪದ.

ಪದ ೩ ರಾಗ ಕಾಂಬೋಧಿ ಝಂಪಿ ತಾಳ

ಅತಿ ದಯಾಪರ ಮೂರ್ತಿ ಅನಿಮಿತ್ತ ಬಂಧು । ರಘು । ಪತಿ ವಿಠಲ ಸಲಹೊ ಇವನಾ । ಪತಿತಪಾವನ ನಿನ್ನ ಪರಮ ಮಂಗಳನಾಮ । ಸತತ ಪೊಗಳುವಂತೆ ಸಾನುಕೂಲನಾಗಿ ॥ ಪಲ್ಲ ॥ ಜನನಿ ಗರ್ಭದಲಿಂದ ಜನಿಸಿದ ವ್ಮೊದಲುಮಾಡಿ । ಗುಣವಂತನೆನಿಸಿದವನೊ । ಕನಸಿನೊಳಗಾದರು ಧನವನಿತೆ ತನುಭೋಗ । ನೆನಸದಿಹ ನಿಪುಣನಿವನೊ ॥ ಕ್ಷಣಕ್ಷಣಕೆ

ನಿನ್ನನೆ ಧೇನಿಸುತ ಪರಮಸುಖ। ವನಧಿಯೊಳಗಾಡುವನೊ। ಪ್ರಣತ ಜನಮಂದಾರ ಪ್ರಾಣನಂತರ್ಯಾಮಿ। ನಿನಗೆ ಸಮ್ಮತವಾದ ನಿಜದಾಸನ ಮ್ಯಾಲೆ ॥೧॥ ಸೀತೋಷ್ಣ ಸುಖದುಃಖ ಮಾನಾಪಮಾನಗಳು। ಮಾತು ಮನಸಿಗೆ ತಾರನೋ। ಧಾತುಗೆಡದಲೆ ತಿಳಿದು ದಯಪಯೋನಿಧಿ ನಿನ್ನ। ಪ್ರೀತಿಯಿಂದಾಡುವವನೊ। ವಾತಜನ ಮತದವರ ಪ್ರೀತಿಯಲಿಸೇವಿಸಿ। ಕೃಪಾತಿಶಯ ಪಡದಣುಗನೊ। ಈ ತೆರದಿಭಕ್ತನ್ನ ರೀತಿ ನೀ ಬಲ್ಲವನೆ। ನಾ ತುತಿಸಿ ಪೇಳ್ವಪೊಸಮಾತು ಮತ್ತುಂಟೆ ॥೨॥ ನಿನ್ನ ಕರುಣದಳತಿ ಇನ್ನಿವನಮ್ಯಾಲಿರಲು। ಚನ್ನಿಗನೆ ನಿನಗ ನಾನೂ। ಬಿನ್ನೈಸಿದೆನೊ ಸ್ವಾಮಿ ಎನ್ನ ಗುರುಗಳ ಆಜ್ಞ। ಚನ್ನಾಗಿ ಶಿರದಿವೊಹಿಸೀ॥ ಸಣ್ಣವಗೆ ಅಂಕಿತವ ಕೊಟ್ಟಿನಲ್ಲದೆ ಲೇಶ ಎನ್ನ ಸ್ವಾತಂತ್ರವಿಲ್ಲಾ। ಚನ್ನಾಗಿ ಕಾಪ್ಯಾಡಿ ಬೆಳಸಿ ಫಲವನೆ ತೋರೊ। ಸನ್ನುತಾಂಗಿಯರಮಣ ವ್ಯಾಸ ವಿಠ್ಠಲ ವಿಭುವೆ ॥೩॥

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

ಶ್ರೀ ಗುರು ಗೋಪಾಲವಿಠಲರು ತಮ್ಮ ಶಿಷ್ಯರಾದ ಮಾಧವವಿಠ್ಠಲ ರಿಗೆ, ಅಂಕಿತಪ್ರದಾನ ಪದ.

ಪದ ೪ ರಾಗ ಕಲ್ಯಾಣಿ ಝಂಪಿತಾಳ

ಶ್ರೀ ಮಾಧವಾವಿಠಲ ವಿಭುವೆ ಕಲ್ಯ್ಯಾಣಗುಣ। ಭೌಮ ಮಾಡುವೆ ಬಿನ್ನಪಾ। ಪಾಮರ ಪಂಡಿತರ ಮಾಡುವ ಮಹಾ ಮಹಿಮ। ಈ ಮಾನವನ ಪೊರವದೊ ಸ್ವಾಮಿೂ ॥ ಪಲ್ಲ ॥ ಶ್ರೀನಾಥ ಸತ್ಯ ಸಂಕಲ್ಪ ಸಜ್ಜನರಿಗೆ। ನೀನೆ ದಯಮಾಡಿ ವೊಲಿದೂ। ಅನಾದಿ ಕರ್ಮಕಾಮಾ ವಿದ್ಯ ಅಜ್ಞಾನ ಹೀನತೆಗಳೆಲ್ಲ ಕಳದೂ। ಜ್ಞಾನ ಭಕುತಿ ವಿರಕುತಿ ಶ್ರವಣಾದಿಗಳನ್ನೆಲ್ಲ ಸಾನುಕೂಲವ ಮಾಡಿಸಿ। ಕ್ಷೋಣಿಯೊಳು ನಿನ್ನಧ್ಯಾನ ವನಿತ್ತು ಅಪರೋಕ್ಷಜ್ಞಾನ ಆನಂದ ಕೊಡುವೇ ವಿಭುವೆ ॥೧॥ ಇದ ನರಿತು ಪ್ರಾರ್ಥಿಸಿದೆ ಈ ನರನು ನಿನ್ನ ಹೊಂ। ದಿದ ದಾಸದಾಸಜನರಾ। ಹೃದಯ ನಿರ್ಮಲನಾಗಿ ಅವರ ಕೊಂಡಾಡುತಲಿ। ಸದಕಾಲ ನಿನ್ನ ಬಯಸೀ। ಸದನ ಸಂಪದಗಳಲಿ ಮನವಿಡದೆ ನಿನ್ನ ಶ್ರೀ। ಪದಸೇವೆ

ಮುಖ್ಯ ತಿಳಿದೂ । ಬುಧಜನರ ಬಳಿವಿಡಿದು ನಿನಗ ಮೊರೆ ಇಡುವೆ ಶ್ರೀ । ಸದನಪಾಲಿಸು ಕರುಣದಿವೊಲಿದು ॥ ೨ ॥ ನಿನ್ನ ಪ್ರೇರಣೆಯಿಂದ ನಾನಿತ್ತ ಅಂಕಿತವು । ಮುನ್ನಿನವಗುಣವ ಮರದು । ನಿನ್ನಚಿತ್ತದಲಿದ್ದರೆ ಕೊಟ್ಟು ರಕ್ಷಿಪದು ಅನ್ಯರನ ಬೇಡಿಸದಲೆ । ಇನ್ನಿದಕೆ ಪ್ರತಿಕೂಲವಿಘ್ನ ಪರಿಹರಿಸಿ ಪ್ರ । ಸನ್ನ ನೀನಾಗುಸತತಾ । ಚಿನ್ಮಯನೆ ಶ್ರೀ ಗುರು ಗೋಪಾಲ ವಿಠ್ಠಲಾ । ಮನ್ನಿಸುವದು ಬಿನ್ನಪಾಧೊರಿಯೆ ॥ ೩ ॥

—ಶ್ರೀ ಗುರು ಮಧ್ವೇಶಾರ್ಪಿತವು

ಶ್ರೀ ಗುರು ಗೋಪಾಲವಿಠಲರು, ತಮ್ಮ ಶಿಷ್ಯರಾದ ಜನಾರ್ದನ ವಿಠ್ಠಲರಿಗೆ ಅಂಕಿತಪ್ರದಾನ ಪದ.

ಪದ ೫ ರಾಗ ಕಾಂಬೋದಿ ಝಂಪಿ ತಾಳ

ಜಯಜಯ ಜನಾರ್ದನವಿಠಲ ಜಗತ್ಪಾಲಕನೆ । ಭಯನಿವಾರಣ ಭಾಗ್ಯದಾ । ದಯದಿಂದವೊಲಿದು ಪಾಲಿಸಬೇಕೊಸರ್ವೇಶ ಸಯವಾದ ಜ್ಞಾನವಿತ್ತೊ ಸ್ವಾಮಿೊ ॥ ಪಲ್ಲ ॥ ಅನಾದಿ ಕಾಲಕರ್ಮವು ಪ್ರಕೃತಿವಶನಾಗಿ ಜ್ಞಾನಲೇಶವನರಿಯದೆ । ನಾನು ನನ್ನದು ಎಂಬ ಹೀನಮತಿಯಲಿ ಪರಾಧೀನತೆಯ ನಿಜವರಿಯದೆ । ನಾನಾ ಯೋನಿಗಳಲ್ಲಿ ತೊಳಲಿ ಬಳಲಿ ಮುಂದೆ । ಗಾಣದಲೆ ಸುತ್ತುತಲಿರೆ । ಏನಂಬೆ ಈ ಪರಿಯಜನಕೆ ನಿನ್ನಯ ಸ್ಮೃತಿಯು । ನೀನಿತ್ತು ಪೊರೆವೆ ದೀನರ ಧೊರಿಯೆ ಹರಿಯೆ ॥ ೧ ॥ ನಿನ್ನ ವಾರ್ತೆಗಳಲ್ಲಿ ಮನಕೆ ರುಚಿಯನೆತೋರಿ । ನಿನ್ನ ದಾಸರ ಸಂಗವಾ । ವನ್ನು ನೀನೆ ಇತ್ತು ಅಲ್ಲಿದ್ದು ಪಾಲಿಸು । ಮುನ್ನಿನನುಭವತೊಲಗಿಸೀ । ಚನ್ನಜ್ಞಾನ ಭಕುತಿ ವೈರಾಗ್ಯವನೆ ಇತ್ತು । ಧನ್ಯನೆನಿಸುವೆ ಲೋಕದಿ । ನಿನ್ನ ಸಂಕಲ್ಪಾನುಸಾರ ನೀನೆ ಪೊರವಿ ಎನ್ನ ಬಿನ್ನಪಲಾಲಿಸೊ ಸ್ವಾಮಿ ॥ ೨ ॥ ಇದು ಕೊಡು ಅದು ಕೊಡು ಎಂದುಪೀಡಿಸಿಬೇಡಿ । ಪದೆಪದಿಗೆ ಕೇಳಲಿಲ್ಲಾ । ಮೊದಲು ನೀನೊಲಿದು ಮಾಡಿದ ಕ್ಲಪ್ತವೇನಿಹದೊ । ಅದೆ ಇತ್ತು ಪಾಲಿಸುವದೊ । ಹೃದಯಸಾಕ್ಷಿಗ ಅಖಿಳ ಭುವನಂತ । ರದಿ ವಿತತ ಸದಯ ಸ್ವಭಾವದೇವಾ । ಬುಧಜನರಬಂಧು ಗುರು ಗೋಪಾಲವಿಠ್ಠಲ । ಮುದದಿಂದ ಪಾಲಿಸುವದೋ ಸ್ವಾಮಿ ॥ ೩ ॥

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

ಮನ್ಮಥ ನಾಮ ನಾಮ ಸಂ|| ಮಾಘ ಬ|| ೨ ಮಂಗಳವಾ ಶ್ರೀ ಗುರು ಗೋಪಾಲವಿಠಲರು, ಪದ್ಮನಾಭವಿಠಲರಿಗೆ ಅಂಕಿತ ಕೊಟ್ಟ ಪದ

ಪದ ೬ ರಾಗ ಕಲ್ಯಾಣಿ ತಾಳ ಝಂಪಿ

ಶ್ರೀ ಪದ್ಮನಾಭವಿಠ್ಠಲ ವಿಭುವೆ ಗುಣ ಪೂರ್ಣ | ಶ್ರೀ ಪದ್ಮಭವ ವಂದಿತಾ | ಶ್ರೀ ಪಾದ ಪದ್ಮಕ್ಕೆ ನಮಿಸಿ ಬಿನ್ನೈಸಿದನೊ ನೀ ಪಾಲಿಸುವದು ವೊಲಿದೂ ಸ್ವಾಮಿೂ || ಪಲ್ಲ || ಜ್ಞಾನಭಕುತಿ ವಿರಕುತಿ ತೀರ್ಥಯಾತ್ರಿಸು ಕರ್ಮ | ನಾನಾಸು ಸಾಧನಗಳೂ | ತಾನು ಪಡದವನಲ್ಲ ದೈನ್ಯತನದಲಿ ನಿನ್ನ | ಧೀನದವನೆಂದರಿದಿಹ್ಯಾ | ಅನಾದಿ ಜೀವರ ನಿದಾನ ಸ್ವಭಾವವನು ನೀನೆ ಬಲ್ಲೆಯೊ ಧೊರಿಯೆ | ಶ್ರೀ ನಾಥ ನಿನ್ನ ಸಂಕಲ್ಪಾನುಸಾರದಲಿ | ಈ ನರನ ಪಾಲಿಸುವದೂ ಸ್ವಾಮಿೂ || ೧ || ಸಾಧನವನೀಕ್ಷಿಸಿ ನೀ ನೊಲಿವೆನೆಂದಿಯಾ | ಶ್ರೀಧರನೆ ನವರಿಗೊಶವೆ | ನೀದಯದಿವೊಲಿದು ಪಾಲಿಸಲು ಅನಾದಿ ವೀ | ರೋಧಗಳು ನಿಂದಿರುವವೆ | ಮೋದವೊದಲಾದ ದಕೆ ಮೂರು ಬಗೆ ನಿನ್ನಯಾಪ್ರ | ಸಾದವರಿತವನಲ್ಲವೆ | ಬೋಧದಾಯಕ ವೇದವೇದಾಂತ ವೇದ್ಯಹರೆ | ಆದರಿಸಿ ಪಾಲಿಸುವದೊ | ಕೃಷ್ಣಾ || ೨ || ಗುಣತರಂಗಿಣಿಯೆ ನೀಯನುಕೂಲನಾಗೆ ದು | ರ್ಗುಣಿಯೆ ಸದ್ಗುಣ ನಾಹನೊ | ತನುವು ವೊದಲಾದ ಕರಣದಲಿ ನೀ ನಿಂತು | ದನುಜರು ಪಹತಿಮಾಣಿಸೀ | ಅನನ ದ್ವಾರದಿ ನೀನೆ ಪ್ರೇರಿಸಿ ಇವನಿಂದ | ಘನಕವನ ಪೇಳಿಸುವದೊ | ಚಿನುಮಯನೆ ಶ್ರೀ ಗುರು ಗೋಪಾಲವಿಠ್ಠಲ | ಮನಸು ನಿನ್ನಲ್ಲೆನಿಲಿಸೊ ಸ್ವಾಮಿೂ || ೩ ||

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು

ಶ್ರೀ ಗುರು ಗೋಪಾಲವಿಠಲರು, ವಾಮನವಿಠಲರಿಗೆ ಅಂಕಿತಪ್ರದಾನ ಮಾಡಿದ್ದು ಪದ ದುರ್ಮುಖಿ ಸಂ|| ಮಾಘ ಬ|| ೭ ಅನುಗ್ರಹ ಆದದ್ದು.

ಪದ ೭ ರಾಗ ಕಲ್ಯಾಣಿ ತಾಳ ಝಂಪಿ

ಶ್ರೀ ಪತೆ ವಾಮನವಿಠಲ ವಿಬುಧಜನವಂದ್ಯ | ಆಪನ್ನಜನಪಾಲಕಾ | ತಾಪತ್ರಯವಿದೂರ ಅಪಾರ ಗುಣಪೂರ್ಣ ನೀ ಪಾಲಿಸುವದು ವೊಲಿದೂ ಸ್ವಾಮಿ || ಪಲ್ಲ || ಜ್ಞಾನಭಕುತಿ ವಿರಕುತಿ ಶ್ರವಣ ಮನನಾದಿಗಳು ತಾನು

ವಂದರಿಂದದಿಲ್ಲಾ। ಸ್ನಾನ ಜಪ ತಪ ಮೌನಧ್ಯಾನ ಮೊದಲಾದವು। ಖೂನವೂ ಕಂಡರಿಯನೊ। ಮಾನಸಾದಲ್ಲಿ ನಿನ್ನ ಸ್ಮೃತಿಯಲ್ಲಿ ರತಿಯ ನಿ। ದಾನ ಇದು ಒಂದು ಉಂಟೂ। ನೀನಿದಕೆ ವೊಲಿದು ಪಾಲಿಸಬೇಕು ಮತ್ತಿಲ್ಲ। ದೀನಜನ ಪೊರವಧೊರಿಯೆ। ಹರಿಯೆ ॥ ೧ ॥ ವಂದು ಕಪರ್ದಿ ಕವನು ಕೊಟ್ಟು ಮಹಾನೃಪರ ಮಂದಿರದಿ ಮಹಭೋಜನಾ। ಕುಂದದಲೆ ಬಯಸಿದ ನರನತೆರ ಇದನು ಇ। ನ್ನೊಂದು ಬಿನ್ನೈಸಲಾನೂ। ಇಂದಿರಾ ಪತಿ ನಿನ್ನ ದಾಸ್ಯದ ಮಹತ್ಮಿಗೆ। ವಂದನ್ನ ಸುಖವು ಎದಿರೆ। ಇಂದಿರಾಧವ ಅನುಭವವೆ ಎನಗುಂಟುದಯಸಿಂಧು ನೀ ಪೊರಿಯಬೇಕೋ ಸ್ವಾಮಿ॥ ೨ ॥ ಉದಯಕಾಲದಿ ನಿನ್ನ ಪದಸ್ಮರಿಸೆ ಸಕಲ ಸಂ। ಪದ ಉಂಟು ಭಜಕ ಜನಕೆ। ಇದನರಿತು ಈ ಮಂತ್ರ ಸದಮಲನೆ ಪೇಳಿದೆನೊ। ಮುದದಿಂದ ನೀನು ವೊಲಿದೂ। ಹೃದಯೇಶ ಶುಭ ಸಾಧನದ ಮಾರ್ಗವನೆ ಪಿಡಿಸಿ ವೊದಗಿ ರಕ್ಷಿಪದು ಬಿಡದೆ। ದಧಿವಾಮನನೆ ಗುರು ಗೋಪಾಲವಿಠ್ಠಲ। ಹಯವದನ ಶಶಿಬಿಂಬಸದನಾ ಸ್ವಾಮಿ ॥ ೩ ॥

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಿತವು

ವರದ ಗೋಪಾಲವಿಠಲರು ತಮ್ಮ ಶಿಷ್ಯರಾದ ವೆಂಕಟೇಶವಿಠಲರಿಗೆ ಅಂಕಿತಪ್ರದಾನ ಮಾಡಿದ್ದು

ಪದ ೮ ರಾಗ ಶಂಕರಾಭರಣ ಆದಿತಾಳ

ವೆಂಕಟೇಶವಿಠಲ ನೀದಯದಲ್ಲಿ ವೆಂಕಟದಾಸನ ಸಲಹಯ್ಯಾ। ಮಂಕುಮತಿಗಳನು ಬಿಡಿಸಿ ಇವನ ನಿಜ। ಕಿಂಕರ ಸೇವಕನೆನಿಸಯ್ಯಾ ॥ಪಲ್ಲ॥ ಎಲ್ಲಿದ್ದರು ನಿನ್ನಲ್ಲಿದ್ದವ ಇವ ಎಲ್ಲಾ್ಯದರು ನಿನಕೀರ್ತಿಸುತಾ ॥ ಬಲ್ಲದ್ದೆ ಸರಿ ಬರಿ ಮಾತಲ್ಲವು। ವಲ್ಲಭ ಭಕುತರ ಸಲ್ಲಿದಸೇವಕ ॥ ೧ ॥ ಜ್ಞಾನಹೀನ ಪದ ಏನು ಬಾರದು। ಸ್ನಾನದವಿಧಿಯೆನೊಂದರಿಯಾ। ಜ್ಞಾನಿಗಳನು ಕಂಡರೆ ಭಕುತಿಯು ಬಲು। ಮಾಣದೇ ಮಾಡುವದು ಮಮತೆಯಲಿ ॥ ೨ ॥ ವರದ ಗೋಪಾಲವಿಠಲ ವರದಾಬಲು। ಪರಮ ಪುರುಷನೆಂದು ಮೊರೆ ಯೊಕ್ಕಾ। ಶರಣರ ಕರುಣದಿ ಪರಿಪಾಲಿಸುವದು। ಸಿರಿವರದಾ ನೀ ಶಿಘ್ರ ದಲಿ ॥ ೩ ॥

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಿತವು

ಶ್ರೀ ಗುರು ಗೋಪಾಲದಾಸರ, ಶಿಷ್ಯರಾದ ಜನಾರ್ದನ ವಿಠಲರು ಅಭಿನವ ಜನಾರ್ದನವಿಠಲರಿಗೆ ಹೇವಳಂಬಿನಾಂಬ ನಾಮಸಂವತ್ಸರದ ವೈ. ಶು||೨ ಶುಕ್ರವಾರದಿನಅನುಗ್ರಹಮಾಡಿದ್ದು, ಅಂಕಿತ ಪ್ರದಾನಪದವು.

ಪದ ೯ ರಾಗ ಕಾಂಬೋದಿ ಝಂಪಿ ತಾಳ

ಅಭಿನವ ಜನಾರ್ದನವಿಠಲ ಎನ್ನ। ಗಭೀರ ವಚನವ ಲಾಲಿ ಸೈಯ್ಯಾ ಗಮಕದಿವೇಗ || ಪಲ್ಲ || ಒಡಿಯ ನೀನಹುದೆಂದು ಅಡಿಗಡಿಗೆ ಚರಣಗಳ। ಬಿಡದೆ ನಂಬಿಕೊಂಡು ಪೊಡವಿಯೊಳಗ || ನಡತಿವಂತರ ಕೂಡ ಬಿಡದೆ ಆಡುವನರಗ। ಪಡಿನಾಮ ಅಮೃತವನೆ ಪಾಲಿಸಿ ರಕ್ಷಿ ಪದು || ೧ || ಅಪರಾಧವೆಣಿಸದಲೆ ಅಪವರ್ಗದಾ ಜನರ। ನಿಪುಣರನ ಮಾಡುವಾ ನೀತಿವಂತಾ || ಕಪಟ ಕುಚೇಷ್ಟಿಗಳ ಪ್ರಕಟ ಬಾಹ್ಯಾಂತರದಿ। ವಪುವಿಲಿದ್ದದು ಕಳೆದು ಉಪಜೀವ್ಯನೀನಾಗಿ || ೨ || ಶ್ರೀ ಗುರು ಗೊಪಾಲ ದಾಸರಾಯರ ಪಾದ। ಜಾಗುರೂಕದಿಂದ ಭಜಿಸಿ ಜಗದಿ || ಯೋಗನೆಸ ಗಲಿ ಮನಕೆ। ಯೋಗೀಶ ಭಕ್ತಿಯಲಿ। ಭಾಗೀರಥಿಪಿತ ಜನಾರ್ದನಾ ವಿಠಲೈಯ್ಯಾ || ೩ ||

—ಶ್ರೀ ಗುರು ಮಧ್ವೇಶಾರ್ಪಿತವು

ಅಭಿನವ ಜನಾರ್ದನವಿಠಲರು (ಯಲಗೋಡ ಭೀಮದಾಸರ ತಾತಂ ದರು ಸುರಪುರದ ಆನಂದದಾಸರಿಗೆ) ತಮ್ಮ ಶಿಷ್ಯರಾದ ಕೇಶವವಿಠ್ಠಲರಿಗೆ ಅಂಕಿತಪ್ರದಾನ ಮಾಡಿದ ಪದ.

ಪದ ೧೦ ರಾಗ ಕಲ್ಯಾಣಿ ಝಂಪಿ ತಾಳ

ಪಾಹಿ ಕೇಶವವಿಠಲ ಪರಮ ಕಲ್ಯಾಣ। ಸಂದೋಹ ಲಾಲಿಸೊ ಬಿನ್ನಪಾ || ಶ್ರೀ ಹರಿಯೆನಿಂನ ಪದ ವನಜಸೇವಕನ ಸಂ। ದೇಹ ಮಾಡದೆ ಕರುಣದೀ। ಮುದದಿ|| ಪಲ್ಲ || ಶರಣ ಜನರನ ಪೊರೆದು ದುರುಳರನ ಶೀಕ್ಷಿಸಲು। ಸರಸಿಜೋದ್ಭವನ ಕೂಡಾ। ವಿರಚಿಸಿದೆ ಸಕಲ ಜೀವರನಾದಿ ಕಾಲದಲಿ ವರಸತ್ಯ ಸಂಕಲ್ಪನೆ || ಧರೆಯೊಳಗೆ ನಿನ್ನ ಸೇವಕರೆ ಸ್ವಲ್ಪದ ರೊಳಗ। ಕರಕರೆಯ ಸಂಸಾರದಿ || ಮರಳುಗೊಳಿಸದೆ ನಿನ್ನ ನೆರೆನಂಬಿ ದಂಥವನ। ಕರವಪಿಡಿದೆತ್ತಿ ತ್ವರದೀ। ದಯದಿ || ೧ || ಹಿಂದಿನಪರಾಧ

ಗಳು ವಂದಾದರೆಣಿಸದಲೆ । ಇಂದು ದಯಮಾಡಿನೋಡೊ । ಕಂದರ್ಪ ಪಿತ ದೀನಬಂಧು ಎಂಬಂತೆ ಈ । ಛಂದದಾ ಬಿರಿದುಳುಹಿಕೊ । ಮುಂದೆ ಬಹು ಸಜ್ಜನರ ವೃಂದಕ್ಕೆ ಬೇಕು ಬೇಕೆಂದೆನಿಸಿ ಇವನ ಸಲಹೊ । ಅಂದದಾಕವಿತೆ ನೀತ । ನಿಂದ ಪೇಳಿಸಿ ನಿನ್ನ ಸಂದರುಶನವ ಪಾಲಿಸಿ । ವೊಹಿಸೀ ॥ ೨ ॥ ಗುರು ವಿಜಯರಾಯ ಗೋಪಾಲದಾಸರ ಪರಮ । ಕರುಣಕ್ಕೆ ಪಾತ್ರನಿವನೊ । ಇರಳು ಹಗಲೆಲ್ಲ ತವ । ಚರಣಸ್ಮರಣೆಯ ಕೊಟ್ಟು । ವರ ಸಾಧನವ ಮಾಡಿಸಿ । ಪರಿಪರಿಯಿಂದ ಇಹಪರ ಸೌಖ್ಯ ಗಳನಿತ್ತು । ಪೊರವ ಭಾರವೆನಿಂನದೊ । ಸಿರಿಯರಸ ಅಭಿನವ ಜನಾರ್ದನ ವಿಠಲರೇಯ । ಕರುಣಾಬ್ಧಿ ಕಾಮಿತ ಜನಾ । ಶರಣಾ ॥ ೩ ॥

ಪರಿಧಾರಿ ನಾಮ ಸಂ॥ ಶ್ರಾವಣ ಶು॥ ೫ ಮಂಗಳವಾರದಲ್ಲಿ ಈ ಅಂಕಿತ ಪದ ದೇವರು, ಹೇಳಿಸಿದ್ದು —ಶ್ರೀ ಮಧ್ವೇಶಾರ್ಪಿತವು

ಪದ ೧೧ ರಾಗ ಕಲ್ಯಾಣಿ ತಾಳ ಝಂಪಿ

ಶ್ರೀ ಹನುಮದೀಶವಿಠ್ಠಲ ಪ್ರಣತ ಜನಪಾಲ । ಸ್ನೇಹಪೂರ್ವಕ ಪೊರೆಯಲಾ । ದೇಹಿ ದೇಹಿ ಎಂದು ಬಹಳ ಭಕುತಿಯಲಿಂದ । ನಾ ಹೇಳಿ ಕೊಂಬೆ ಮುದದೀತ್ವರದಿ ॥ ಪ ॥ ಆಪನ್ನ ವತ್ಸಲನೆ ಶ್ರೀ ಪತಿಯೆ ಕೇಳು ನಿನ್ನಾ ಪ್ರೀತಿ ಪಾತ್ರರಾದಾ । ಗೋಪಾಲದಾಸಾರ್ಯರಾ ಪಾದಪದ್ಮಗಳ । ತಾ ಪೊಂದಿಕೊಂಡಿಪ್ಪನೊ ॥ ನಾ ಪೇಳ್ವಮಾತಲ್ಲ ಈ ಪದವನಾದರವ । ರೇ ಪ್ರೇರಿಸಿದ ಬಿನ್ನಪಾ । ದ್ರೌಪದಿಯ ವರದನೆ ದಯಾಪಯೊನಿಧಿಯೆ ಬಹು ಪಾಪಿ ಅಜಮಿಳನ ಪೊರದೆ । ಇದರಿದೆ ॥ ೧ ॥ ಸಾಧನ ಶರೀರ ವಿದು ನೀದಯದಿ ಕೊಟ್ಟದ್ದು । ಸಾಧನವ ಮಾಡಿಸುವದೂ । ಈ ಧರಣಿ ಯೊಳಗ ತವ ಪಾದವಲ್ಲದಲೆ ಮಿಗ । ಲಾದ ದೈವಗಳರಿಯನೊ ॥ ವೇಧ ಭವ ಗರುಡ ಇಂದ್ರಾದಿ ಸುರರಿಂದಲಾ । ರಾಧಿಸಿಕೊಂಬದೈವಾ । ಬೋಧ ಮೂರುತಿ ಇವಗೆ ಭೇದಮತಿಯಿತ್ತು । ಅಪ । ರಾಧಗಳನೆಲ್ಲ ಕಳದೂ ಪೊಳದೂ ॥ ೨ ॥ ಆರ್ತಜನಪತಿ ಎಂಬ ವಾರ್ತೆಯನೆ ಎನ್ನಯಾ ಸ್ಫೂರ್ತಿಗೆ ತಂದು ಇವನಾ । ಆರ್ತಿಯನೆ ಕೇಳಿನಾ ಪ್ರಾರ್ಥಿಸಿದೆ ಈ

ಮಾತು । ಸಾರ್ಥಕವ ಮಾಡಿಸುವದೂ ॥ ಪಾರ್ಥಸಖ ಸೃಷ್ಟ್ಯಾದಿಕರ್ತ ನೀನಲ್ಲದಲೆ । ಮರ್ತ್ಯರೊಳು ಪೊರೆವರುಂಟೆ । ತೀರ್ಥಪದ ಅಭಿನವ ಜನಾರ್ದನವಿಠ್ಠಲರೇಯಾ । ಕೀರ್ತಿಯೊ ಈ ಜಗದೊಳು ಕೇಳೂ ॥ ೩ ॥

—ಶ್ರೀ ಮಧ್ವೇಶಾರ್ಪಿತವು

ನಳನಾಮ ಸಂ॥ ಆಶ್ವಿಜ ಶು॥ ೧೦ ಮಂಗಳವಾರ ಶ್ರವಣಾ ನಕ್ಷತ್ರದಲ್ಲಿ ಈ ಅಂಕಿತಪದ ಶ್ರೀರಂಗಪಟ್ಟಣ ಉಭಯ ಕಾವೇರಿ ಮಧ್ಯ ಪಶ್ಚಿಮ ರಂಗನಾಥನ ಸನ್ನಿಧಾನದಲ್ಲಿ ಬಾದನಹಟ್ಟಿ ದೊಡ್ಡಪ್ಪಗ ಹರಿ ಗುರುಗಳು ಪ್ರೇರಿಸಿ ಕೊಡಿಸಿದ್ದು ಶ್ರೀ ಕೃಷ್ಣಾರ್ಪಣಮಸ್ತು. ೧೦–೧೧ ಇವೆರಡು ಪದಗಳು ಕಲ್ಲೂರ ಪುಸ್ತಕದಲ್ಲಿ ಬಹುಶಃ ಅಭಿನವಜನಾರ್ದನ ವಿಠಲರ ಹಸ್ತಾಕ್ಷರದಿಂದಲೇ ಬರೆದದ್ದು ಎಂದು ತೋರುತ್ತದೆ.

ಪದ ೧೨ ರಾಗ ಕಲ್ಯಾಣಿ ಝಂಪಿ ತಾಳ

ಶ್ರೀ ಜನಾರ್ದನವಿಠಲ ಶೃಂಗಾರಗುಣ ಪೂರ್ಣ । ಅಜಭವಾ ಮರೇಂದ್ರ ಸೇವ್ಯಾ ॥ ನೈಜಭಾವದಿನಮಿಸಿ ಬೇಡಿದವನಿಗೆ ವರವ । ನಿಜವಾಗಿ ಪಾಲಿಸುವೆನೆಂದು ದಯದಲಿಬಂದ್ಯ ॥ ಪಲ್ಲ ॥ ವೇಣು ಗೋಪಾಲ ದಾಸರು ಕರುಣವನೆ ಮಾಡಿ । ಪಾಣಿ ಪಿಡಿದದ್ದು ನೋಡಿ । ಕ್ಷೋಣಿಯೊಳುಳ್ಳಂಥ ತೀರ್ಥ ಯಾತ್ರಾದಿಗಳ ಸ್ನಾನಾದಿ ಫಲವನೀಡಿ ॥ ವಾಣಿ ಅರಸಾನಿಂದ ತೃಣಜೀವಪರಿಯಂತ ಮೇಣುತರತಮ್ಯ ನೋಡಿ । ಆ ನಾಜ್ಞದವನೆಂದು ಅತಿ ಮಮತೆಯಿಂದಲಿ । ನೀನೆ ವ್ಯಕ್ತನಾಗಿನಿಂತು ಉದ್ಧರಿಪುದಕೆ ॥ ೧ ॥ ಮಾನಮಮತೆ ಎಂಬ ಹೀನ ಅಹಂಕಾರವನು । ಹಾಸಿಮಾಡುವೆನೆನುತಲಿ । ಜ್ಞಾನಭಕುತಿಯ ಕೊಟ್ಟು ಧ್ಯಾನಮಾರ್ಗವ ತೋರಿ । ಪ್ರಾಣನಾ ಪಾದದಲ್ಲಿ ॥ ಆನಂದ ಉಂಬದಕ ಅತಿ ವೇಗ ಪೊಂದಿಸಿ । ಸೀಲಸ್ವಭಾವದಲ್ಲಿ ಭಾನುಕೋಟಿತೇಜ ಭಕತ ಜನರಾಧಾರಿ । **ಧೇನುವತ್ಸಲನ ಪೊರವ ಪರಿಯಂತೆ ದಯದಲ್ಲಿ ॥ ೨ ॥ ಮನ್ಮಥ ಸಂವತ್ಸರಾ, ಮಾಘ ಶುದ್ಧ ಬಿದಿಗಿ ಮಂಗಳವಾರದಲ್ಲಿ ।** ಮನ್ಮನೋಭಿಷ್ಟೇಯನು ಕೊಡಲು ಗುರುಗೋಪಾಲದಾಸರ ಮುಖದಲಿ ॥ ಸನ್ಮಾನದಲ್ಲಿ ಸಂಗೀತ ನಾಮಸ್ಮರಣೆ । ಎನ್ನ ಪೇಳಿಪೆನೆನುತಲಿ । ಚಿನ್ಮ

ಯನೆ ಪುನ್ನಾಡಿಯೊಳಗೆ ಪೊಳವೇನೆಂದು ಘನ್ನಕರುಣದಿ ಬಂದ್ಯ ಶ್ರೀ ಜನಾರ್ದನವಿಠ್ಠಲ ॥ ೩ ॥

ಈ ಪದವು ಗುರುಗೋಪಾಲದಾಸಾರ್ಯರು ಜನಾರ್ದನವಿಠಲರಿಗೆ ಅಂಕಿತಕೊಟ್ಟ ೫ನೇ ಪದಕ್ಕೆ ಸಮ್ಮಂಧಿಸಿದ್ದು. ಅವರು ಅಂಕಿತಕೊಟ್ಟ ಮೇಲೆ ದೇವರು ಅಪರೋಕ್ಷವಾದಾಗ್ಗೆ ಮಾಡಿದ್ದು.—ಶ್ರೀ ಮಧ್ವೇಶಾರ್ಪಿತ

ಭೂವರಹಾ ರಘುಪತಿವಿಠ್ಠಲರು ಶ್ರೀ ಪತಿವಿಠ್ಠಲರಿಗೆ ( ತಮ್ಮ ಶಿಷ್ಯರಿಗೆ ) ಅಂಕಿತಕೊಟ್ಟಿದ್ದು.

ಪದ ೧೩ ರಾಗ ಝಂಪಿ ತಾಳ

ಶ್ರೀ ಪತಿ ವಿಠಲನಾ ಸೇವಿಸುನಿನ್ನಾ । ಆಪತ್ತುಗಳು ನಿಲ್ಲವೊ । ಕಾಪಾಡುವನು ನಿನ್ನ ಕರುಣಿಸಿಶಪಥದಿ । ಪಾಪವಿದೂರ ಪಂಕಜನಾಭ ಪರಮಾತ್ಮ ॥ ಪಲ್ಲ ॥ ಶುದ್ಧಮೂರುತಿ ಆತನು । ಶತಾನಂದ ಮುಖ್ಯರ ಪ್ರೇರಕನು । ಉದ್ಧಾರಮಾಡುವ ಉಪೇಕ್ಷಿಸದೆ ನಿನ್ನ । ಮಧ್ವ ಮುನೀಶನಾ । ಮನದಲ್ಲಿದ್ದಾತನು ॥ ೧॥ ಕರುಣಾಸಾಗರವಾ(ವ್ಯಾ)ಪ್ತನೂ ಕರವಭಕ್ತಜನರಿಗೆ ಕಾಮಧೇನೂ ॥ ಪರಮ ತಾತ್ಪರ್ಯದಿ ಪಾದವ ಬಿಡ ದಲೆ ॥ ೨ ॥ ಶ್ರೀನಿವಾಸಾ ಭೂವರಹಾ ರಘುಪತಿವಿಠಲ ಈತನು ಏನಾ ದರು ತನ್ನ ಭಕ್ತರೆಂದರೆ ಬಿಡಾ । ಜ್ಞಾನಭಕ್ತಿಯಿತ್ತು ಸಾನುಕೂಲಿಸು ವನು ॥ ೩ ॥

( ಇವರು ಗದ್ವಾಲಿ ವೆಂಕಟದಾಸರು ಇವರ ತಂಬೂರಿ ಇದೆ ).

—ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಿತವು

ಶ್ರೀ ಜಗನ್ನಾಥ ದಾಸಾರ್ಯರು ಕರ್ಜಗಿ ದಾಸಪ್ಪದಾಸರಿಗೆ ಮುದ್ರಿಕಾದಾನ.

ಪದ ೧೪ ರಾಗ ಕಾಂಬೋದಿ ಝಂಪಿ ತಾಳ

ಶ್ರೀದವಿಠಲ ಸರ್ವರಂತರಾತ್ಮಾ । ನೀದಯದಿ ಪೊಲಿದು ನಿತ್ಯದಲಿ ಕಾಪಾಡುವದು ॥ ಪಲ್ಲ ॥ ಚಿಕ್ಕತನದಲಿ ತಂದೆ ತಾಯಿಗಳು ಪೊಲಿದು ಪೆಸ । ರಿಕ್ಕಿ ಕರದರು ನಿನ್ನ ದಾಸನೆಂದೂ ॥ ಅಕ್ಕರದಿ ಪೊಲಿದು ಭವ

ದುಃಖಗಳ ಪರಿಹರಿಸಿ । ಮಕ್ಕಳನು ತಾಯ್ಸಲಹುವ ತೆರದಿ ಸಂತೈಸೂ ॥ ೧ ॥ ಶುಕನಯ್ಯಾ ನಿನ್ನ ಪದ ಭಕುತಿತ್ವತ್ಕಥಾಶಾಸ್ತ್ರ । ಯುಕುತಿವಂತರ ಸಂಗ ಸುಖವನಿತ್ತು ॥ ಸಕಲ ಕರ್ಮಗಳ ವೈದಿಕವೆನಿಸು ವೊಲಿದು ದೇವಕಿ ತನಯ ನಿನ್ನವರ । ಮುಖದಿಂದ ಪ್ರತಿದಿನದಿ ॥ ೨ ॥ ಮಾತರಿಶ್ವಪ್ರೀಯ ಸುರೇತರಾಂತಕನೆ ಪುರು । ಹೂತನಂದನ ಸಖ ನಿರಾತಂಕದೀ ॥ ನೀ ತೋರುಮನದಿಸಂ ಪ್ರೀತಿಯಿಂದಲಿ ವೊಲಿದು । ಹೋತಾಹ್ವಯಗುರು ಜಗನ್ನಾಥವಿಠ್ಠಲ ಬಂಧು ॥ ೩ ॥

—ಶ್ರೀ ಗುರು ಮಧ್ವೇಶಾರ್ಪಿತವು

ಶ್ರೀ ಪ್ರಾಣೇಶವಿಠಲರು ತಮ್ಮ ಶಿಷ್ಯರಾದ ವೆಂಕಟವಿಠಲರಿಗೆ ಅಂಕಿತ ಕೊಟ್ಟ ಪದ.

ಪದ ೧೫ ರಾಗ ದೇಶಿ ಅಟ್ಟತಾಳ

ವೆಂಕಟವಿಠಲ ನಿನ್ನಂಕಿತದವನ ಕಳಂಕನೋಡದೆ ಪಾಲಿಸೊ । ಶಂಖಾರಿಗದಪದ್ಮ ಅಂಕವಿಪಾಹಿಪ । ಶಂಕರವಿನುತ ಪಾದಹೇಶ್ರೀದ ॥ ಪಲ್ಲ॥ ಜ್ಞೇಯ ಜ್ಞಾನಗಮ್ಯ ಧೇಯ ನಿಲಾಂಬುದಕಾಯ । ಗುರುತ್ಮಾಂಸಗಾ ॥ ಆಯುರಾರೋಗ್ಯ ವಿದ್ಯಾಯುಮನಿಯಮ ವಿತ್ತೀಯವನಿಯೊಳು ಯಶಸ್ಸು ಪಸರಿಸು ॥ ೧ ॥ ಮೊರೆ ಹೊಕ್ಕವರ ಮನದರಿಕೆ ಪೂರೈಸುವೆನೆಂಬ ಬಿರಿದೊಂದೆರಡೆನ್ನಲೆ ॥ ಕರಿನಾರಿನೃಪ ಪ್ರಮುಖಗಣಿತರನು ನೀ ಪೊರೆದುದು ಸ್ವಲ್ಪವೇನುಮಹಾಣು ॥ ೨ ॥ ಕಿಟಿನೀನೆ ಒಲಿದರೆ ಘಟಣವೇ ಘಟಣವೊ ವಟಪತ್ರಪರ್ಯಂಕನೆ ॥ ತಟಿದಾನಂತಾಭ ನಿಷ್ಕುಟಿಲ ಶ್ರೀ ಪ್ರಾಣೇಶ ವಿಠಲಭವಾಬ್ಧಿಪೋತಸುಚರಿತ ॥ ೩ ॥

—ಶ್ರೀ ಮಧ್ವೇಶಾರ್ಪಿತವು

ಗುರು ಪ್ರಾಣೇಶ ವಿಠ್ಠಲರು ತಮ್ಮ ಶಿಷ್ಯರಿಗೆ ಅಂಕಿತಪ್ರದಾನ.

ಪದ ೧೬ ರಾಗ ಕಾಂಬೋಧಿ ತಾಳ ಝಂಪೆ

ತಂದೆ ಪ್ರಾಣೇಶವಿಠ್ಠಲರಾಯಒಲಿದು ಆ । ನಂದ ಕೊಡು ಈ ಭಕ್ತಗೇ ॥ ಪೊಂದಿಕೊಂಡಿಹ ನಿನ್ನ । ನೆಂದು ನಾ ಪ್ರಾರ್ಥಿಸುವೆ। ಮಂದರ ರೋದ್ಧರ ಮುಕುಂದಾ । ನಂದಾ ॥ ಪಲ್ಲ ॥ ಅನವರತ ನಿನ್ನ ಧೇನಿಸುವಂತೆ

ಮನವು ಬಹು ಅನುಕೂಲವಾಗಿ ಇರಲೀ। ಅನಘ ನಿನ್ನಂಘ್ರಿಗಳ ಪೂಜಿಸುವದಕೆ ಕರಗ। ಳನುಕೂಲವಾಗಿ ಇರಲೀ॥ ಅನಿಮಿಷಾರಾಧ್ಯ ನಿನ್ನ ಕೀರ್ತಿಪದಕೇ ಜಿಂಹೆ। ಅನುಕೂಲವಾಗಿ ಇರಲೀ। ದನುಜ ಕುಲವೈರಿ ನಿನ್ನ ವರಡಿಗೆನಡಿಯೆ ಪದ। ವನುಕೂಲವಾಗಿ ಬರಲೀ। ಇರಲೀ।॥೧॥ ಇವನ ಕವನಾಕೇಳಿ ಹರುಷಯುತರಾಗಿ ಸ। ತ್ಕವಿಗಳೂ ತಲಿದೂಗಲೀ। ಪವನ ಮತದಲಿ ಪೇಳಿದಂತೆ ಆದನನುಸರಿಸಿ। ಕವಿತೆಯೂ ಬಂದೊದಗಲೀ॥ ನವರಾಗಗಳಿಂದೊಪ್ಪಿಲಘುದೀರ್ಘ ಮೊದಲು ಮ। ರ್ಮವ ತಿಳಿದು ಪೇಳುತಿರಲೀ॥ ಭುವನದೊಳಗುಳ್ಳ ಸಜ್ಜನರು ಶೋಧಿಸಿ ಆಶು। ಕವಿ ಎಂದು ಕರವುತೀರಲೀ। ಮೆರೆಯುಲಿ॥೨॥ ಚಿರಕಾಲ ಬಾಳಿ ಬಹು ಕೀರ್ತಿಯುತನಾಗಿ। ಈ ಧರಿಯೊಳಗೆ ಸುಖಿಸುತಿರಲೀ। ಪರಮ ಭಕುತಿಯು ಪೆಚ್ಚಿಸ್ವೋತ್ತುಮರ ಪದಗಳಿಗೆ। ಎರಗಿ ಕರುಣವ ಪಡೆಯಲೀ॥ ಮರಿಯದಲೆ ಇಹಪರದಿ ಸುಖಗಳನು ಕೊಟ್ಟು ಶ್ರೀ। ಹರಿಯೆ ಪೊರೆಯಂದಾಡಲೀ। ಮರುತಾಂತರ್ಯಾಮಿ ಗುರು ಪ್ರಾಣೇಶವಿಠ್ಠಲನೆ। ಶರಣ ಜನ ಕಾಮಧೇನೂ। ನೀನೂ॥೩॥

—ಶ್ರೀ ಮಧ್ವೇಶಾರ್ಪಣಮಸ್ತು

ಐತಿಹಾಸಿಕ ಪ್ರಾರ್ಥನೆ, ವೇಣು ಗೋಪಾಲವಿಠಲಕೃತ.

ಪದ, ೧೭ ರಾಗ ಮೋಹನ ತ್ರಿವಿಡಿ ತಾಳ

ಬಾಲರಕಾಯೊ ಶ್ರೀ ಕೃಷ್ಣ ಭವ್ಯಮೂರುತಿ। ಸೀಲಗುಣಿಗಳು ನಿನ್ನ ಭಕುತಿಯ ಲೋಲಚಿತ್ತವನಾದಿವಿಡಿದು॥ಪಲ್ಲ॥ ಹಿಂದೆ ಕೇವಲ ಕೆಲವು ಜನ್ಮದಿಪೊಂದಿ ಯೆನ್ನಸಂಗಡಿದ್ದು। ಸಂದಿಸಿ ಸೇವಿಯನು ಮಾಡಿದರೊ ಬಹುದಾಸಜನರ। ವೃಂದದೊಳು ಸುಖಬಟ್ಟ ಸಜ್ಜನರೊ। **ಸೀತೋಷ್ಣ ಹೆಚ್ಚು। ಕುಂದುನೋಡದೆ ಸಮವೆ ತಿಳಿದವರೊ। ಈಗೆನ್ನ ಮನಿಯಲಿ।** ನಂದನರು ತಾವಾಗಿ ನಲಿವುತ ನಿಂದಕಂದರೊ ನೀನು ಅರಿಯಾ॥೧॥ ದಾನಶೂರರೊ ಜ್ಞಾನಶೂರರೊ ದೀನಜನಕಾರರೊ?॥ ಮೋಣು ಅಕ್ಷಿಯುನ ಮರೆದವರೊ ನಿನ್ನಂಘ್ರಿತುತಿಗಳ। ಮಾನಸದಿ ನೆಲೆಗೊಂಡು ಮಾಡುವರೊ ದುರ್ಜನರ ಭಯಗಳ। ಏನು ನೆನವಿಗೆ

**ಕಾರದಿದ್ದವರೊ । ಈ ಕೂಸುಗಳ ಕು ।** ಕ್ಷೋಣಿಪತಿ ಕುಟಿಲಾತ್ಮರ **ಕರಕೇನು ಕಾರಣ** ಕೋಪ್ಪಿಸಿದಿಯೊ ॥ ೨ ॥ ಸಾಕಲಾರದ ಬಡತನವು ನಿನಗ್ಯಾಕೆ । ಎಲ್ಲಿದ್ದಡಗಿ ಬಂತೊ । ಗೋಕುಲಾಂಬುಧಿ ಚನ್ನ ಚಂದಿರನೆ । ಶ್ರೀ ಲಕುಮಿವಲ್ಲಭ । ನೇಕ ಗುಣಗಣಭರಿತ ಸುಂದರನೆ । ಭಕ್ತರನ ಬಹು ವಿಧ । ಜೋಕೆಮಾಡುತ ಪೊತ್ತ ಕಂಧರನೆ । ಸುಖ ಪೂರ್ಣ ವಿಭುದಾ । ನೀಕ ಸಲಹುವ ವಿಷ್ಣು ವಿಶ್ವಾಸೂಕರಾಸ್ಯ ಸುಖಾತಿಶಯದಿ ॥ ೩ ॥ ದುರುಳ ನಟ್ಟುಳಿನೋಡಿ ಸುಮ್ಮನೆಯಿರಲು ಅವನಿಗೇನು ಕೊಟ್ಟನೊ । ಶರಧನು ಅಶಿಚರ್ಮದಾ ಭಯವೊ ಕಶಾದಿಗಳು ಬಲು । ಧರಿಸಿದಾ ಭಟಶೂರರಾಸ್ಮಯವೆ ದುರ್ನಯದ ಶಬ್ದದ । ಭರಭರಾಟಿಕೆ ಕೊಲೆಗೆಡಿಕೆ ಸಯುವೊ ಈ ದುಷ್ಟರಾಯು । ಪರಿಹರಿಪ ಉದಾಯದಾಕ್ರೀಯವೊ ಎನ ಗೇನು ತಿಳಿಯದು । ಸಿರಿರಮಣನೆ ಸರಸಿಜೋದ್ಭವ ಹರಸುರರ ಹರುಷದಿ ಕರ್ತ ॥ ೪ ॥ ಕಾಲ ಅಕಾಲಗಳು ನೋಡದೆ ಎನ್ನ ವಚನ ಯೋಳಲವ ಮಾಡದೆ । ಖೂಳನು ಕಡುಭಾಗ್ಯಸಂಹರಿಸೊ ಬಹು ಮಂದಿ ಸಜ್ಜನ । ಜಾಲಕೆಲ್ಲೀ ಬಗೆಯುವರ ಮನಸೊ ನಾ ನುಡಿದ ಉಕ್ತಿ । ಮೇಲುಕರುಣದಿ ಸೀಘ್ರದಲಿ ಸಲಿಸೊ ಅಸುರನ್ನ ಬಿಳಿಸದೆ । ಮೂಲವೆ ಮೂದಲಿ ಮೊದಲಿಗೆ ಕತ್ತರಿಸೊ ಸರ್ವೇಶ । ವೇಣು ಗೋಪಾಲವಿಠಲ ವಿಶ್ವರೂಪ ವಿಶಾಲ ಮಹಿಮನೆ ಸತ್ವರದಲ್ಲಿ ॥ ೫ ॥



# .... ತಿದ್ದುಪಡಿ ....

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩ | ೧೧ | ಶ್ರೀ ಪ್ರಾಣೇಶ | ಶ್ರೀಶ ಪ್ರಾಣೇಶ |
| ೫ | ೨೬ | ॥ ೫ ॥ | ॥ ೩ ॥ |
| ೭ | ೧೧ | ಸುಗಣರಿಗೆ | ಸುಗುಣರಿಗೆ |
| ೮ | ೧೨ | ಸರ | ಸುರ |
| ೮ | ೨೪ | ವಶ್ಸರ | ವತ್ಸರ |
| ೧೧ | ೧೩ | ಸರನದಿ | ಸುರನದಿ |
| ೧೩ | ೧೮ | ಶರ | ಶಿರ |
| ೧೪ | ೧೫ | ಸರಿದನ್ನ | ಸುರಿದನ್ನ |
| ೧೭ | ೪ | ಎನ್ನೆ | ಯು–ಎನ್ನೆ |
| ೨೫ | ೧೦ | ಶರಣಾಗನ | ಶರಣಾಗತನ |
| ೩೦ | ೬ | ಥರಫೆ | ಥರವೆ |
| ೪೪ | ೧೩ | ಸಂನರಶನ | ಸಂದರುಶನ |
| ೪೫ | ೮ | ದಾಸಯ | ದಾಸರಾಯ |
| ೪೫ | ೧೨ | ಪಾಲಿರಿಸೊ | ಪಾಲಿಸೊ |
| ೪೭ | ೧೬ | ಸರಮುನಿ | ಸುರಮುನಿ |
| ೪೭ | ೨೪ | ಗರುಪುರಂದರನ | ಗುರುಪುರಂದರನ |
| ೪೮ | ೨೬ | ೀ ಕು ಾ ಪಂ | ಲಕುಮಿಪರಿ |
| ೫೧ | ೨೬ | ಜಿರಜೀವಿ | ಚಿರಜೀವಿ |
| ೫೨ | ೨೭ | ಬಾಡೆಂದೆಂದು | ಬ್ಯಾಡೆಂದೆಂದು |
| ೫೫ | ೧೯ | ಳೀಲೆ | ಲೀಲೆ |
| ೫೭ | ೨೦ | ಮುಕ್ತರರೊಳು | ಮುಕ್ತರೊಳು |
| ೫೯ | ೫ | ಭಕ್ತ | ಭಕ್ತರ |
| ೬೧ | ೨೨ | ಹಾಯದಲ್ಲಿ | ಹಾದಿಯಲ್ಲಿ |
| ೬೪ | ೮ | ಕನ್ನಾಣ | ಕನ್ನಡ |

| | | | |
|---|---|---|---|
| ೬೪ | ೯ | ಭೋದ | ಬೋಧ |
| ೬೪ | ೨೫ | ಪಸರಿಸಿದೆ | ಪಸರಿಸಿದ |
| ೬೫ | ೨೬ | ಸರ್ವೋತ್ತಾಮ | ಸರ್ವೋತ್ತಮ |
| ೬೫ | ೨೪ | ಅಂಶದಿಂದ | ಆವೇಶದಿಂದ |
| ೬೫ | ೨೪ | ಮಂತ್ರೊಪ | ಮಂತ್ರೋಪ |
| ೬೬ | ೧೫ | ರಾಮಾನುಜಯರೂ | ರಾಮಾನುಜಿಯರೂ |
| ೬೬ | ೨೦ | ಪ್ರಸಾದರದ | ಪ್ರಸಾರದ |
| ೬೭ | ೭ | ವ್ಯಾಸಾರ್ಯರ | ದಾಸಾರ್ಯರ |
| ೬೯ | ೧೮ | ಭಕ್ತಾದಿಗಳ | ಭಕ್ತ್ಯಾದಿಗಳ |
| ೭೧ | ೨೨ | ವ್ಯಾಪ್ತೋಪಾಸಕರು | ವ್ಯಾಪ್ತ್ಯೋಪಾಸಕರು |
| ೭೨ | ೨೬ | ನಾಮುಸಸರ್ದ | ನಾಮುಸರ್ಜ್ಯ |
| ೭೩ | ೧ | ದೇಹಪ | ದೇಹಸ್ಯ |
| ೭೩ | ೧ | ಮುಸ್ಥಿತೆ ‖ | ಮುಪಸ್ಥಿತೆ ‖ |
| ೭೩ | ೩ | ವನಯುದ್ಧಿವಂ | ಮನಯುದ್ಧಿವಂ |
| ೭೩ | ೪ | ವ್ಯಾದತಾಂ | ವ್ಯಾಧತಾಂ |
| ೭೩ | ೭ | ನಿಚಕರ್ಮಾಪ್ತಂ | ನೀಚಕರ್ಮಾಪ್ತಂ |
| ೭೩ | ೧೧ | ನಾಮುಕಿ | ನಾಮುಕ |
| ೭೩ | ೧೨ | ಹೆರೂವಳೆಂಬ | ಹೆರುವಳೆಂಬ |
| ೭೩ | ೧೪ | ಆಪುತಿಗ | ಆಪು |
| ೭೩ | ೧೬ | ಆವಿೂನ | ಆವಿೂನಿನ |
| ೭೪ | ೫ | ಕರುಳಾಳು | ಕರುಣಾಳು |
| ೭೪ | ೧೮ | ತ್ರೈಯುಲಿರಾ | ತ್ರೈತೆಯುಲಿ |
| ೭೪ | ೨೫ | ಸುರಿಪತಿಸ್ಥ | ಸಿರಿಪತಿಸ್ಥ |
| ೭೫ | ೧೩ | ಪದವೇ ನುಡಿ | ಪದ-೪-ನೇ ನುಡಿ |
| ೭೫ | ೧೮ | ಜನ್ಮವೃತ್ತಿ | ಜನ್ಮನಿವೃತ್ತಿ |
| ೭೭ | ೨೩ | ( ಚೀಕನಪರಿ ) | ( ಚೀಕನಪರಿವಿ ) |
| ೭೫ | ೨೬ | ಮಂಗಳಯಾನಕರ | ವಂಗಳಕರ |

| | | | |
|---|---|---|---|
| ೭೭ | ೨೬ | ಸೂಸ್ತಂಗತದಲ್ಲಿ | ಸೂರ್ಯಾಸ್ತಂಗತದಲ್ಲಿ |
| ೭೮ | ೧೨ | ಪ್ರದಾನವಿತ್ತು | ಪ್ರದಾನವಿತ್ತ |
| ೭೮ | ೨೨ | ಸಾಕ್ಷಾತ್ತಗಿ | ಸಾಕ್ಷಾತ್ತಾಗಿ |
| ೮೦ | ೯ | ನವಮಾನವಮಾಂ | ನವೊನವೊ |
| ೮೦ | ೧೪ | ಧರಿಸಿದ ನುಸುರರು | ಧರಿಸಿದನು ಸುರರು |
| ೮೦ | ೧೮ | ಶಲೆಯಾದ | ಶಿಲೆಯಾದ |
| ೮೧ | ೧ | ಮುಂದೆ ೪೫ | ಮುಂದೆ ೪–೫ |
| ೮೧ | ೫ | ಗುತುಂಗ | ಗುತ್ತುಂಗ |
| ೮೨ | ೧೦ | ಭಗವಂತ | ಭಗವಂತನ |
| ೮೩ | ೨೧ | ಸಂಪದಾಯ | ಸಂಪ್ರದಾಯ |
| ೮೪ | ೧೩ | ಬೆಳಗುಪ ಸರಿಸುತಿರೆ | ಬೆಳಗು ಪಸರಿಸುತಿರೆ |
| ೮೪ | ೧೪ | ಮುಚ್ಫಿ | ಮುಚ್ಚಿ |
| ೮೫ | ೧೦ | ವಾಸಮುನಿಯ | ವ್ಯಾಸಮುನಿಯ |
| ೮೫ | ೨೨ | ಗುಜಾನಂದವು | ಗುಣಾನಂದವು |
| ೮೫ | ೨೪ | ದಾಯಿ | ತಾಯಿ |
| ೮೭ | ೨ | ಕೊಂಡರೂ | ಕೊಂಡರು |
| ೮೮ | ೧೪ | ಬೀಗಿದಪ್ಪುವಳು | ಬಿಗಿದಪ್ಪುವಳು |
| ೮೯ | ೨೩ | ಭಗದ್ಗುಣಾನು | ಭಗವದ್ಗುಣಾನು |
| ೯೨ | ೪ | ಯಣ್ಣೆಗಾಳನ್ನು | ಯಣ್ಣೆಯನ್ನು |
| ೯೨ | ೨೪ | ಒಬ್ಬರಿಗೊಬ್ಬ ರಿಂದೊಬ್ಬರು | ಒಬ್ಬರಿಂದೊಬ್ಬರು |
| ೯೬ | ೧೧ | ನುಡಿ ೨೩ ರಲ್ಲಿ | ನುಡಿ ೨–೩ ರಲ್ಲಿ |
| ೧೦೦ | ೧೩ | ದಡವೇ ಸತಿಯಾಯಿತು | ಪಡವಸತಿಯಾಯಿತು |
| ೧೦೧ | ೪ | ಅನ್ನವನು | ಅನ್ನುವನು |
| ೧೦೧ | ೫ | ಹಾಕಿದವನ್ನು | ಹಾಕಿದುದನ್ನು |
| ೧೦೪ | ೨ | ಅನುಚಾತು | ಅನುಜಾತ |

| | | | |
|---|---|---|---|
| ೧೦೫ | ೨೩ | ಗರ್ಭದಾನ | ಗರ್ಭಾಧಾನ |
| ೧೦೬ | ೧ | ಗ್ರಹಧರ್ಮ | ಗೃಹಧರ್ಮ |
| ೧೦೬ | ೨೦ | ಮಹಿತಸೇವೆ | ಮಹಿತನಸೇವೆ |
| ೧೦೭ | ೧೨ | ಸೃಂಗಾರ | ಶೃಂಗಾರ |
| ೧೦೭ | ೧೮ | ಚಣ್ಣಣಿಯೊ | ಚಟ್ಟಣಿಯೊ |
| ೧೦೮ | ೧೯ | ಇನು | ಇನ್ನು |
| ೧೧೧ | ೧೬ | ಕಂಡಿತು | ಕಿಂಚಿತು |
| ೧೧೧ | ೧೯ | ಸಷ | ಸಹ |
| ೧೧೧ | ೨೩ | ಹರಿವಾಸರಿಗೆಷ್ಟು | ಹರಿದಾಸರಿಗೆಷ್ಟು |
| ೧೧೨ | ೭ | ( ನುಡಿ ೫೬ ರಲಿ ) | ( ನುಡಿ ೫–೬ ರಲ್ಲಿ ) |
| ೧೧೩ | ೧೬ | ವಾಯುುದ್ವಾರಾಂ | ವಾಯುುದ್ವಾರಾ |
| ೧೧೪ | ೧ | ಶಂಭೂತರಾದ | ಸಂಭೂತರಾದ |
| ೧೧೪ | ೧೩ | ಮಡದಲ್ಲಿರುವ | ದಡದಲ್ಲಿರುವ |
| ೧೧೪ | ೧೬ | ಸಾಕ್ಪಾತ್ತಾಗಿ | ಸಾಕ್ಷಾತ್ತಾಗಿ |
| ೧೧೬ | ೨೩ | ಸಚ್ಚತ್ತದಲಿ | ಸಚ್ಚಿತ್ತದಲಿ |
| ೧೧೭ | ೧೦ | ತೈಸನ | ತೈಜಸನ |
| ೧೧೮ | ೨೬ | ಜಯುದ್ವಿಜಮತ | ಜಯದ್ವಿಜಯತ |
| ೧೧೯ | ೧೩ | ಶ್ವೇತಾದ್ವೀಪ | ಶ್ವೇತದ್ವೀಪ |
| ೧೨೪ | ೧ | ಕತ್ರಾೃತ್ವ | ಕರ್ತೃತ್ವ |
| ೧೨೮ | ೨೧ | ಎನಸನು | ಎನಸದು |
| ೧೨೮ | ೨೫ | ಆದವಾಳ್ಯಾ | ಆದವ್ಯಾಳ್ಯ |
| ೧೨೯ | ೧೯ | ಪೊಕ್ಕು | ಪೊಕ್ಕ |
| ೧೨೯ | ೨೨ | ನಿನ್ನ ಭಸಿಪ | ನಿನ್ನ ಭಜಿಪ |
| ೧೩೦ | ೧೫ | ಪಲ್ಲಕ್ಕಿಯವರ | ಪಲ್ಲಕ್ಕಿಯವರಿ |
| ೧೩೦ | ೨೫ | ವಿಮಲೇಯರು | ವಿಮತೀಯರು |
| ೧೩೩ | ೨೩ | ಕೊಡುವ | ಕೊಡುವನು |
| ೧೩೩ | ೨೪ | ಆನದಂ | ಆನಂದ |

| | | | |
|---|---|---|---|
| ೧೩೪ | ೨೨ | ದರ್ಶಲಾಭ | ದರ್ಶನಲಾಭ |
| ೧೩೫ | ೨ | ಯಾತ್ರಾಯುವ | ಯಾತ್ರಾಯಾವ |
| ೧೩೫ | ೨೬ | ಪ್ರತಿಯೊಂದು | ಪ್ರತಿಯೊಂದು ಮನೆ |
| ೧೩೬ | ೧ | ಕಂಭಗಳ | ಕುಂಭಗಳ |
| ೧೩೬ | ೧೭ | ( ಪ್ರಾರ್ಥಿಸು ) | ( ಪ್ರಾರ್ಥನಾ-ಸು, ) |
| ೧೩೭ | ೨೪ | ಭಾದ್ರಪದ ಶು \|\| | ಭಾದ್ರಪದ ಶು \|\| ೨ |
| ೧೪೧ | ೧೧ | ಇವನೆ | ಇವನ |
| ೧೪೪ | ೨೨ | ಪಂಚವಾದವು | ಪಂಚವಾರವು |
| ೧೪೭ | ೬ | ರುದ್ರಾದಿ | ರುದ್ರಾದಿಗಳಿಂದ |
| ೧೪೮ | ೨೫ | ಇದಿಲ್ಲ | ಇದ್ದಿಲ್ಲ |
| ೧೫೧ | ೨೬ | ಪರಲೋಹಾನಿ | ಪರಲೋಕಹಾನಿ |
| ೧೫೪ | ೨ | ಪ್ರಣಾಮುಣಾಮು | ಪ್ರಣಾಮು |
| ೧೫೬ | ೧೧ | ಇದ್ದೆ ಇದೆ | ಇದ್ದೇ ಇದೆ |
| ೧೫೭ | ೨೧ | ಅನಂತ | ಅನಂತ. |
| ೧೫೮ | ೨೪ | ಮೆನೆತನದ | ಮನೆತನದ |
| ೧೫೯ | ೧೬ | ಐದದ | ಐದಿದ |
| ೧೬೧ | ೧೬ | ಉದ್ದಾರ | ಉದ್ಧಾರ |
| ೧೬೧ | ೨೫ | ಪದಪದ | ಪದ |
| ೧೮೪ | ೯ | ಪ್ರಕಾರ | ಪ್ರಕಾಶ |
| ೧೮೭ | ೧೮ | ಹೋರಿ | ಹೋಗಿರಿ |
| ೨೦೧ | ೨೨ | ಮುಂದಾತು | ಮುಂತಾದ |
| ೨೦೮ | ೨೩ | ಸ್ನಾಸಂಧ್ಯ | ಸ್ನಾನಸಂಧ್ಯ |
| ೨೧೦ | ೪ | ಗೈವವನಾಮು | ಗೈವವನಾನು |

# ಚಂದಾದಾರರಲ್ಲಿ ವಿನಂತಿ

ಈಗ ಕುಸುಮ ೧೧-೧೨ ಶ್ರೀ ವಿಜಯದಾಸರ ಸ್ತೋತ್ರ ಪದಗಳು ೭೮, ಜೀವನ ಚರಿತ್ರೆ ಚಂದಾದಾರ ಸನ್ನಿಧಿಗೆ ಕಳಿಸಿ ೨ ನೇ ವರುಷ ಚಂದಾಋಣದಿಂದ ಮುಕ್ತನಾಗುವೆ. ೨೦೦ ಜನ ಚಂದಾದಾರರು ಸಹ ಇಲ್ಲ. ೬ ಪುಸ್ತಕ ಅಚ್ಚಾಗಲು ೩ ಸಾವಿರ ರು॥ ಆದರೂ ಬೇಕು. ೭೫–೮೦ ಜನರು ಪುಸ್ತಕ ತೆಗೆದುಕೊಂಡು ಚಂದಾ ರು॥ ಕೊಟ್ಟಿಲ್ಲ. ಕನಿಷ್ಠ ೪೦೦ ಜನರಾದರೂ ಈ ವರ್ಷ ಚಂದಾದಾರರು ಬೇಕು. ದಾಸರು ದಯಮಾಡಬೇಕು. ಅವರಿತ್ತ ಧೈರ್ಯದಿಂದಲೇ ೩ನೇ ವರುಷ ಮಾಲೆಯ ಕೆಲಸ ಪ್ರಾರಂಭಿಸುತ್ತಿದೆ.

## ಮೂರನೇ ವರುಷದಲ್ಲಿ

೧ ಶ್ರೀ ಗೋಪಾಲದಾಸರು ಅವರ ಶಿಷ್ಯರ ಚರಿತ್ರೆ

೨ ಶ್ರೀ ವೇಣುಗೋಪಾಲದಾಸರು ಶ್ರೀ ಮೋಹನದಾಸರು

೩ ಶ್ರೀ ಜಗನ್ನಾಥದಾಸರು ಅವರ ಶಿಷ್ಯರ ಚರಿತ್ರೆ

೪ ಮೊದಲಕಲ್ ಶೇಷದಾಸರ ಚರಿತ್ರೆ

೫ ಶ್ರೀ ಪುರಂದರದಾಸರು ಶಿಷ್ಯರ ಚರಿತ್ರೆ ಕೂಡಿಗೆ

೬ ಸಂಧ್ಯೋಪಾಸನೆ (೩)ನೇ ಭಾಗ ೪ ಶಾಖಾ ಮಂತ್ರಾರ್ಥ ಹೊರಡುವವು. ೧೦೦೦ ದಿಂದ ೧೨೦೦ ಪುಟ ವರೆಗೆ ಆಗುವವು. ಈ ದೃಷ್ಟಿಯಿಂದ ಚಂದಾ ರು॥ ೮ ಕಲ್ದಾರ ಪೋಷ್ಟ ರಜಿಸ್ಟರ ಖರ್ಚ ಬಹಳ ಏರಿದೆ, ರಜಿಸ್ಟರ ಮಾಡುವದಿಲ್ಲ. ಪ್ರತಿಯೊಂದು ಪುಸ್ತಕಕ್ಕೆ ೩ ಆಣೆ ಬುಕ್‌ಪೋಸ್ಟ ೧—೨—೦ (ಪ್ರತಿಯೊಂದು ಪುಸ್ತಕ ಮುಟ್ಟುವ ಸಲುವಾಗಿ ೧ ಆಣೆ ನಾಟಪೇಟ ಕಳಿಸಿಕೊಡುವದು) ಕಾರಣ ದಯವಿಟ್ಟು ತ್ವರಾ ೯ ರು॥ ೨ ಆಣೆ ಚಂದಾ ರು॥ M. O. ಕಳಿಸಲು ವಿನಂತಿ. ಜೇಷ್ಠ ವರೆಗೆ ಚಂದಾ ರಕಂ ಕೂಡಿಸಿ ಕಾಗದ ಖರೀದಿ ಮಾಡಿ ಆಷಾಢ ಶು॥ ೭ ಶ್ರೀ ವರದೇಂದ್ರರ ರಥೋತ್ಸವ ವರೆಗೆ ಶ್ರೀ ಗೋಪಾಲದಾಸರ ಚರಿತ್ರೆ ಹೊರಡಿಸುವದು ಚಂದಾದಾರರ ಅಧೀನ. ದಾಸರೇ ಪೂರೈಸಲು ಸಮರ್ಥರು. ೧ ಶ್ರೀಗುರು ವಿಜಯದಾಸರವು ೨ ಗೋಪಾಲದಾಸರವು ಮುಂತಾದವು ಇನ್ನು ೭ ಪುಸ್ತಕಳ ಸುಳಾದಿಗಳ ಅಚ್ಚು ಕ್ರಮವಾಗಿ ಸಾಗಿಸಿದೆ. ಕೆಲವು ಕಾವ್ಯಗಳು ಸಹ ಪ್ರಕಟನೆಕಾರ್ಯ ಕೈಕೊಂಡಿದೆ. ೪॥ ಸಾವಿರ ರು॥ ಬಾಕಿ ನಿಂತು ಬಹು ಶ್ರಮವಾಗಿದೆ. ೬೦೦–೭೦೦ ರು॥ ಸಾಲವೂ ಇದೆ. ಬಾಕಿ ಇಟ್ಟವರು ತ್ವರಾ ಕಳಿಸಲು ಪುನಃ ಪ್ರಾರ್ಥನೆ.

ಸಂ॥

ಮಾನ್ಯ ಹೈದರಾಬಾದ ಸರಕಾರದ D.P.I ದಿಂದ ಹೈಸ್ಕೂಲ ಮಿಡ್ಲಸ್ಕೂಲ ಲೈಬ್ರರಿಗೆ
ಇನಾಮಗಳಿಗೆ ಮಂಜೂರಾದ

# ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಪುಸ್ತಕಗಳ ಪಟ್ಟಿ

| | | |
|---|---|---|
| ೧ | ಶ್ರೀಸುಮಧ್ವವಿಜಯ ಮೂಲ ಭಾಮಿನಿ ಷಟ್ಪದಿ ಭಾಗ ೫-೬ ಸರ್ಗ ೧೪ರಿಂದ ೧೬ವರೆಗೆ ೫೦೦ ಪುಟ (೧-೨-೩-೪ ಭಾಗ ಇಲ್ಲ) | ೨—೮—೦ |
| ೨ | ಅಣುಮಧ್ವವಿಜಯ ಮೂಲ ಷಟ್ಪದಿ | ೦—೫—೦ |
| ೩ | ಶ್ರೀ ಪ್ರಾಣೇಶ ವಿಠಲರ ಕೀರ್ತನಮಾಲಾ ೧೫ ಪುಸ್ತಕಗಳು | ೫—೦—೦ |
| ೪ | ಶ್ರೀ ಪುರಂದರದಾಸರು—ದಾಸರ ಸೀಳಿಗೆ | ೧—೦—೦ |
| ೫ | ಶ್ರೀ ವಿಜಯದಾಸರ ಪ್ರಾರ್ಥನಾ (೧೦೧) ಸುಳಾದಿಗಳು | ೨—೮—೦ |
| ೬ | ಸೃಷ್ಟಿ ಪ್ರಕರಣ ಸುಳಾದಿ ತಾತ್ಪರ್ಯ ಸಹ ೪೨೫ ಪುಟ | ೩—೦—೦ |
| ೭ | ಶ್ರೀ ರಾಘವೇಂದ್ರಗುರು ಸಾರ್ವಭೌಮ ೧೫೮ ಪದ | ೦—೪—೦ |
| ೯ | ಕ್ಷೇತ್ರಮಹಿಮಾ ಸುಳಾದಿಗಳು ಪದ ೫೩ ಸು. ೧೦೩ | ೩—೪—೦ |
| ೧೦ | ಸಾಧನಭಾಗ ಸುಳಾದಿಗಳು (೧೦೮) ಭಾಗ ೧—೨ | ೨—೮—೦ |
| ೧೧ | ಉಪಾಸನಾಭಾಗ-ಸುಳಾದಿಗಳು | ೨—೧—೬ |
| ೧೨ | ಪ್ರಮೇಯಭಾಗ—ಸುಳಾದಿಗಳು | ೧—೪—೦ |
| ೧೩ | ಶ್ರೀ ವಿಜಯದಾಸರ ಸ್ತೋತ್ರಭಾಗ ಸುಳಾದಿಗಳು | ೨—೦—೦ |
| ೧೪ | ಶ್ರೀ ವಿಜಯದಾಸರ ೨೫೬ ಪದಗಳು (ಕೀರ್ತನೆಗಳು) ತಾರತಮ್ಯ ಕ್ರಮ ನಿತ್ಯ ಭಜನಿಗೆ ಅನುಕೂಲ ೨ನೇ ಭಾಗ ಅಚ್ಚಿನಲ್ಲಿದೆ | ೧—೧೨—೦ |

## ಗದ್ಯ ಪುಸ್ತಕಗಳು

| | |
|---|---|
| ೧ ನೇ ಕುಸುಮ ಸದಾಚಾರ | ೦—೪—೦ |
| ೨ ನೇ ಕುಸುಮ ಪಂಚಭೇದ | ೦—೪—೦ |
| ೩ ನೇ ಕುಸುಮ ಬ್ರಹ್ಮಚರ್ಯ | ೦—೮—೦ |
| ೪-೫ ನೇ ಅಧ್ಯಾತ್ಮಮಾಲಾ ೧-೨ | ೨—೮—೦ |
| ೬ ನೇ ಹರಿಕಥಾಮೃತಸಾರ ಸಂಗ್ರಹ | ೧—೮—೦ |
| ೭-೮ ನೇ ಮೂಲ ಶುದ್ಧ ಪ್ರತಿ ಹರಿಕಥಾಮೃತಸಾರ ಚರಿತ್ರೆ ಸಹ | ೨—೪—೦ |
| ೯-೧೦ ನೇ ಸಂಧ್ಯೋಪಾಸನೆ ಭಾಗ ೧-೨ | ೨—೮—೦ |
| ೧೧-೧೨ ನೇ ಶ್ರೀ ವಿಜಯದಾಸರ ಸ್ತೋತ್ರಗಳು ಜೀವನ ಚರಿತ್ರೆ ೨೯೨ ಪುಟ (ಟಪಾಲ ವೆಚ್ಚ ಬೇರೆ) | ೨—೦—೦ |

ಶ್ರೀವಿಜಯದಾಸರು ಶ್ರೀಜಗನ್ನಾಥದಾಸರು ಶ್ರೀಗುರು ವಿಜಯದಾಸರು ಮುಂತಾದ ಫೋಟೋಗಳು ಪ್ರತಿಯೊಂದಕ್ಕೆ ೨ ಆಣೆ. ಕಮಿಶನ ಏಜಂಟರಿಗೆ ೨೫ ರೂ| ಮೇಲ್ಪಟ್ಟರೆ ಯೋಗ್ಯ ಕಮಿಶನ. **ಹನುಮಂತರಾವ ಗೋರಾಬಾಳ ಸಂಚಾಲಕ ಮಂಡಲ.**

---

ಮುದ್ರಕರು- ಹ. ಸ. ನಂದೀಗೌಡ್ರ, ಒಡೆಯರು- ಶಂಕರನಾರಾಯಣ ಪ್ರೆಸ್, ಗದಗ
ಸಂಪಾದಕರು ಪ್ರಕಾಶಕರು- ಹನುಮಂತರಾವ ಗೋರಾಬಾಳ ವಕೀಲ. ಲಿಂಗಸೂಗೂರು